ಮನೋಹರ ಗ್ರಂಥಮಾಲೆಯ ೧೦೮ನೆಯ ಕುಸುಮ

# ಎರಡನೆಯ ಸಂಬಂಧ

( ಹೃದಯಸ್ಪರ್ಶಿಯಾದ ಸಾಮಾಜಿಕ ಕಾದಂಬರಿ )

ಬರೆದವರು :

' ಎನ್ಕೆ '



ಜೂನ
೧೯೫೧

ಬೆಲೆ
೩—೦—೦



ಮನೋಹರ ಗ್ರಂಥಪ್ರಕಾಶನ ಸಮಿತಿ ಧಾರವಾಡ

ಸಾಹಿತ್ಯವಿಷಯದಲ್ಲಿ ಸಲಹೆಗಾರರು :

ಶ್ರೀ. ದ. ರಾ. ಬೇಂದ್ರೆ ಎಂ. ಎ.

ಶ್ರೀ. ವಿ. ಕೃ. ಗೋಕಾಕ ಬಿ. ಎ. (ಆಕ್ಸಫರ್ಡ)

ಶ್ರೀ. ರಂ. ಶ್ರೀ. ಮುಗಳಿ ಎಂ. ಎ. ಬಿಟಿ.





ಸಂಪಾದಕ:

ಜಿ. ಬಿ. ಜೋಶಿ



ವ್ಯವಸ್ಥಾಪಕ ಸಂಪಾದಕ:

ಪ್ರಲ್ಹಾದ ಜಿ. ಕಾಟೋಟಿ



ಮುದ್ರಕರು :
ಎಂ. ಎ. ಕಾಮತ ಬಿ.ಎಸ್‌ಸಿ.
ಹಿಂದಮಾತಾ ಮುದ್ರಣಾಲಯ
ಧಾರವಾಡ.

ಪ್ರಕಾಶಕರು :
ಜಿ. ಬಿ. ಜೋಶಿ
ಮನೋಹರ ಗ್ರಂಥಮಾಲಾ
ಧಾರವಾಡ.

# ನಮ್ಮ ಮಾತು

ಶ್ರೀ. ಎನ್ಕೆಯವರು ಬರೆದ ಈ 'ಎರಡನೆಯ ಸಂಬಂಧ' ಕಾದಂಬರಿಗೆ ಗ್ರಂಥಮಾಲೆಯ ಹದಿನೆಂಟನೆಯ ವರ್ಷ ಮುಗಿಯಿತು.

ಈ ವರ್ಷದಲ್ಲಿ 'ಹೊಸ ಸಂಸಾರ' ( ಪುಟ ೧೮೬ ), 'ಇಂದ್ರಚಾಪ' (ಪುಟ ೧೮೮), 'ಬಾಳಹೊಳೆ' (ಪುಟ ೨೨೫), 'ಭಾಗ್ಯಶ್ರೀ' (ಪುಟ ೮೦), 'ಎರಡನೆಯ ಸಂಬಂಧ' (ಪುಟ ೨೯೬), ಹೀಗೆ ಒಟ್ಟು ಐದು ಗ್ರಂಥಗಳು ಕೂಡಿ ೯೬೮ ಪುಟಗಳನ್ನು ಮಾಲೆಯ ಗ್ರಾಹಕರಿಗೆ ಸಲ್ಲಿಸಿದಂತಾಯಿತು.

ಕಳೆದ ವರ್ಷದಲ್ಲಿ 'ಜಡಭರತನ ಕನಸುಗಳು' (ಪುಟ ೧೩೯), 'ಮಗು' (ಪುಟ ೧೦೪), 'ಗಂಗಾಸಾನಿ' (ಪುಟ ೧೯೯), 'ಚೀನದ ಬಾಳುಬದುಕು' (ಪುಟ ೪೩೫ ), 'ಮೇದಿನಾಪುರದ ಮಲ್ಲ' (ಪುಟ ೨೧೭), 'ಮಾದನ-ಮಗಳು' (ಪುಟ ೪೦೩), ಹೀಗೆ ಒಟ್ಟಿನಲ್ಲಿ ೧೪೬೭ ಪುಟಗಳನ್ನು ಸಲ್ಲಿಸಿದ್ದೇವೆ.

ಕಳೆದ ವರ್ಷ, ಈ ವರ್ಷ ಕೂಡಿ ನಮ್ಮ ಗ್ರಾಹಕರಿಗೆ ಅಷ್ಟೇ ಚಂದಾ ಹಣದಲ್ಲಿ ಕೊಡತಕ್ಕ ಪುಟಗಳಿಗಿಂತ ೬೩೫ ಪುಟಗಳನ್ನು ಹೆಚ್ಚಿಗೆ, ಕೊಟ್ಟಿದ್ದೇವೆ.

ಇದಕ್ಕಾಗಿ ಗ್ರಂಥಮಾಲೆಯು ಸುಮಾರು ಮೂರು ಸಾವಿರದ ಹೆಚ್ಚಿನ ಆರ್ಥಿಕ ಭಾರವನ್ನು ಹೊರಬೇಕಾಗಿ ಬಂತಲ್ಲದೆ, ಹೊತ್ತು ಹೊತ್ತಿಗೆ ಗ್ರಂಥಗಳನ್ನು ಹೊರಡಿಸಲಿಕ್ಕಾಗದೆ, ಈ ವರೆಗಿನ ತನ್ನ ನಿಯಮಿತತನವನ್ನೂ ಕಳೆಗುಕೊಳ್ಳಬೇಕಾಯಿತು.

ಕಳೆದ ಹದಿನೆಂಟು ವರ್ಷಗಳಲ್ಲಿ ಪ್ರಕಾಶನಕ್ಕೆ ಸಂಬಂಧ ಪಟ್ಟ ವಿಷಯಗಳಲ್ಲಿ ಈ ರೀತಿ ವ್ಯತ್ಯಾಸವಾಗಿದೆ :

ಮುದ್ರಣದ ದರ ಕ್ರೌನ್ ಆಕಾರದ ಎಂಟು ಪುಟದ ಒಂದು 'ಫಾರ್ಮಿಗೆ'

ಮೂರುವರೆ ರೂಪಾಯಿ ಇದ್ದದ್ದು ಆರಾಯಿತು, ಎಂಟಾಯಿತು, ಹತ್ತಾಯಿತು, ಹನ್ನೆರಡಾಗಿದೆ. ಇನ್ನು ಮುಂದೆ......?

ಕಾಗದದ ದರ ಕ್ರೌನ್ ಆಕಾರದ ಒಂದು ರೀಮಿಗೆ ಆರು ರೂಪಾಯಿ ಇದ್ದದ್ದು ಹತ್ತಾಯಿತು, ಹನ್ನೆರಡಾಯಿತು. ಹದಿನಾಲ್ಕಾಯಿತು, ಇಪ್ಪತ್ತಾಯಿತು, ಇಪ್ಪತ್ತೆಂಟಾಯಿತು, ಮೂವತ್ತಾಗಿದೆ. ಇನ್ನು ಮುಂದಿನದು.....? ಇಷ್ಟಾಗಿಯೂ ಈಗ ಕಾಗದ ಸಿಗುವದೆಂದರೆ ಬಹಳ ಕಷ್ಟಸಾಧ್ಯ.

ಸ್ವಾತಂತ್ರ್ಯ ಬಂದ ನಂತರ ನಮ್ಮ ಭಾರತ ಸರಕಾರವೂ ತನ್ನ ಕೈಲಾದಮಟ್ಟಿಗೆ ಅಂಚೆಯ ದರ ಏರಿಸಿ, ಹೊಸ ಹೊಸ ಕರಗಳನ್ನು (ಮಾರಾಟ ಕರ) ಹೇರಿ, ರೇಲ್ವೆ ವೆಚ್ಚ ೨೫% ರಂತೆ ಹೆಚ್ಚಿಸಿ ಪ್ರಕಾಶನ ಕಾರ್ಯಕ್ಕೆ ಸಹಾಯ ಸಲ್ಲಿಸಿದೆ.

'ರಜಿಸ್ಟ್ರೇಶನ್' ಮೊದಲು ಎರಡಾಣೆಯಿತ್ತು. ಮೂರಾಣೆಯಾಯಿತು, ನಾಲ್ಕಾಣೆಯಾಯಿತು, ನಾಲ್ಕೂವರೆಯಾಣೆಯಾಗಿದೆ.... ?

ಮನಿಯಾರ್ಡರು, ವ್ಹಿ ಪಿ, ಕಾರ್ಡು, ಕವ್ಹರು ಇವೆಲ್ಲಕ್ಕೂ ಇದೇ ರೀತಿಯಾಗಿ ಹೆಚ್ಚಾಗಿದೆ.

ಇತ್ತೀಚಿನ ಈ ನಾಲ್ಕು ವರ್ಷಗಳಲ್ಲಿಯಂತೂ ಜೂಜಾಟದ ಕುದುರೆಗಳಂತೆ ಈ ಧಾರಣಿಗಳ ಏರಾಟ ಅತಿ ತೀವ್ರಗತಿಯಿಂದ ನಡೆದಿರುವಾಗ ಪ್ರಾಮಾಣಿಕ ಮಧ್ಯಮ-ವರ್ಗ ಬದುಕಿ ಉಳಿಯುವುದೇ ಸಾಧ್ಯವಿಲ್ಲದಾಗಿದೆ.

ಹೀಗೆಲ್ಲ ಪರಿಸ್ಥಿತಿಯು ಅನಾನುಕೂಲವಾಗಿದ್ದರೂ, ಗ್ರಾಹಕರ ಔದಾರ್ಯದಲ್ಲಿ ನಂಬುಗೆಯಿಟ್ಟು, ಕಾಲನಿರೀಕ್ಷಣೆಯ ಬುದ್ಧಿಯಿಂದ ಈ ವರೆಗೆ ಚಂದಾಹಣವನ್ನೂ ಹೆಚ್ಚಿಸದೆ, ಕೊಡತಕ್ಕ ಪುಟಗಳನ್ನೂ ಕಡಿಮೆ ಮಾಡದೆ ಗ್ರಂಥಮಾಲೆಯನ್ನು ನಡೆಯಿಸಿಕೊಂಡು ಬಂದದ್ದಾಗಿದೆ.

ಇನ್ನು ಮುಂದೆ ಇದೇ ಆಗಸ್ಟದಿಂದ ಪ್ರಾರಂಭವಾಗುವ ಗ್ರಂಥಮಾಲೆಯ ಹೊಸ ವರ್ಷದಿಂದ, ಕೊಡತಕ್ಕ ಪುಟಗಳಲ್ಲೇನೂ ಕಡಿಮೆ ಮಾಡದೆ, ಚಂದಾಹಣವನ್ನೆ ಸದ್ಯದ ಪರಿಸ್ಥಿತಿಗನುಸಾರವಾಗಿ ಆರುವರೆ ರೂಪಾಯಿ ಇದ್ದುದನ್ನು ಎಂಟು ರೂಪಾಯಿಗೆ ಹೆಚ್ಚಿಸಬೇಕೆಂದು ಗೊತ್ತುಮಾಡಿದ್ದೇವೆ. ಅರಿತವರಾದ ನಮ್ಮ ಗ್ರಾಹಕರು ಈವರೆಗೆ ಸಲ್ಲಿಸುತ್ತ ಬಂದಂತೆ ಇನ್ನು

ಮುಂದೆಯೂ ಚಂದಾದಾರರಾಗಿ ಉಳಿದು ಸಹಾಯ ಸಲ್ಲಿಸಬೇಕೆಂದು ಬೇಡಿಕೊಳ್ಳುತ್ತೇವೆ.

ಈ ವರ್ಷದಲ್ಲಿ ಗ್ರಂಥಗಳನ್ನು ಹೊತ್ತು ಹೊತ್ತಿಗೆ ಹೊರಡಿಸುವುದಾಗದಿದ್ದರೂ ಒಮ್ಮೆಲೆ ನಾಲ್ಕು ಗ್ರಂಥಗಳನ್ನು ಕೂಡಿಸಿಯೆ ಕಳುಹಿಸುವಂತಾದರೂ ಆಯಿತಲ್ಲ ಎಂದು ಇದ್ದುದರಲ್ಲಿಯೆ ಸಮಾಧಾನ ಹಚ್ಚಿಕೊಂಡಿದ್ದೇವೆ. ನಮ್ಮ ಗ್ರಾಹಕರೂ ನಮ್ಮನ್ನು ಮನ್ನಿಸಬೇಕೆಂದು ಬೇಡಿಕೊಳ್ಳುತ್ತೇವೆ.

ನಾವು ಕೊಟ್ಟ ಹಿಂಸೆಯನ್ನೆಲ್ಲಾ ತಡೆದುಕೊಂಡು, ಅತ್ಯಂತ ಅಲ್ಪಾವಕಾಶದಲ್ಲಿಯೆ ಈ ' ಎರಡನೆಯ ಸಂಬಂಧ ' ಕಾದಂಬರಿಯನ್ನು ಬರೆದು ಕೊಟ್ಟದ್ದಕ್ಕಾಗಿ ಶ್ರೀ. ಎನ್ಕೆಯವರಿಗೂ, ಅಷ್ಟೆ ಅಲ್ಪಾವಕಾಶದಲ್ಲಿ ಇದನ್ನು ಮುದ್ರಿಸಿ ಕೊಟ್ಟ 'ಹಿಂದಮಾತಾ' ಮುದ್ರಣಾಲಯದ ಶ್ರೀ. ಎಂ.ಎ. ಕಾಮತ ಅವರಿಗೂ, ಈ ಕಾದಂಬರಿಯ ಹುರುಳನ್ನೆ ಸೂಚ್ಯವಾಗಿ ಸೂಚಿಸುವತಂಹ ಮನೋಹರವಾದ ಹೊದಿ-ಕೆಚಿತ್ರ ಬರೆದುಕೊಟ್ಟ ಮಿತ್ರ ವಾಮನ ಶಿರಹಟ್ಟಿಯವರಿಗೂ ಚಿರಋಣಿಗಳಾಗಿದ್ದೇವೆ.

—ಪ್ರಕಾಶಕ

# ಪರಿಚಯ

ಶ್ರೀ. ಎನ್ಕೆಯವರ ' ಎರಡನೆಯ ಸಂಬಂಧ ' ಕಾದಂಬರಿ, ಮೊದಲೇ ಬರೆದಿದ್ದ ನಾಲ್ವತ್ತು ಪುಟ ಬಿಟ್ಟು, ಮುಂದೆ ಬರೆಯುವುದಕ್ಕೆ ಪ್ರಾರಂಭ ವಾದದ್ದು ಕಳೆದ ಜೂನ್ ತಿಂಗಳ ಮೂರನೆಯ ವಾರ. ಬರೆದು ಮುಗಿಸಿದುದು ಜುಲೈ ಹನ್ನೊಂದಕ್ಕೆ. ಹದಿನೆಂಟು ಇಪ್ಪತ್ತು ದಿನಗಳ ಅವಕಾಶದಲ್ಲಿ ಈ ಕಾದಂಬರಿಯು ಸಂಪೂರ್ಣವಾಗಿ ನಮ್ಮ ಆಫೀಸಿನಲ್ಲಿಯೆ ಬರೆಯಲ್ಪಟ್ಟಿತು. ಈ ಕಾದಂಬರಿ ಬರೆದು ಮುಗಿಸುವುದಕ್ಕೆ ನಾನು-ಗ್ರಂಥಮಾಲೆಯ ಸಂಪಾದಕ ನಾಗಿ-ಕೊಟ್ಟ ಹಿಂಸೆ ಒತ್ತಾಯ, ಕೆಲವಂಶದಲ್ಲಿ ಕಾರಣವಾಗಿದ್ದರೂ ಶ್ರೀ.ಎನ್ಕೆ ಯವರ ವಿಸ್ತಾರವಾದ ಅನುಭವದಿಂದ ಪ್ರಚೋದನಗೊಂಡ ಅವರ ಪ್ರತಿಭಾ ಸಂಪತ್ತಿ, ಸಮಯಸ್ಫೂರ್ತಿ ಇವೆರಡೂ ಅವರ ಸಮಕ್ಷಮದಲ್ಲಿ ನಿಂತು ನೆರ ವೀಯುತ್ತಿದ್ದಂತೆ, ದಿನದಿನವೂ ಅವರ ಬರವಣಿಗೆಯನ್ನು ನೋಡುತ್ತಿದ್ದ ನನಗೆನಿಸಿತು. ನನ್ನ ಕಣ್ಣೆದುರಿನಲ್ಲಿಯೆ ಈ ಕೃತಿ ನಿರ್ಮಾಣವಾಯಿತಲ್ಲ ಎನ್ನುವ ಒಂದು ಆತ್ಮಭಾವದಿಂದಲೇ ಇರಬೇಕು, ಈ ಕಾದಂಬರಿಯ ಬಗ್ಗೆ ನನಗೆ ಹೆಚ್ಚು ಮಮತೆ ಉಂಟಾಯಿತು. ಇಷ್ಟು ಸಾಮೀಪ್ಯ ನನ್ನಲ್ಲಿ ಕಾದಂಬರಿಯ ಬಗ್ಗೆ,ಕಾದಂಬರಿಕಾರನ ಬಗ್ಗೆ ದೋಷೈಕದೃಷ್ಟಿಯನ್ನು ಹುಟ್ಟಿಸ ದಂತೆಯೂ, ಕಾದಂಬರಿಯಲ್ಲಿದ್ದ ದೋಷಗಳಿಗೆ ನನ್ನನ್ನು ಕುರುಡಾಗಿಸ ದಂತೆಯೂ ಎಚ್ಚರವನ್ನಿಟ್ಟುಕೊಂಡು ನಾನೀ ಪರಿಚಯವನ್ನು ಬರೆಯುವ ಸಾಹಸಕ್ಕೆ ಕೈಹಾಕಿದ್ದೇನೆ. ಭಯದ ಈ ಹಾದಿಯಲ್ಲಿ ಪ್ರಾಮಾಣಿಕತೆ ನನ್ನ ಕೈ ಹಿಡಿದು ನಡೆಯಿಸಲಿ ಎಂದು ಬೇಡಿಕೊಳ್ಳುತ್ತೇನೆ.

ಕಾದಂಬರಿ ಬರೆಯುವಾಗ ಶ್ರೀ. ಎನ್ಕೆಯವರೊಡನೆ ಶ್ರೀ. ಲಕ್ಷ್ಮಣ ರಾವ್ ಬೇಂದ್ರೆ ಮತ್ತು ನಾನು ಕಳೆದ ಇಪ್ಪತ್ತು ಇಪ್ಪತ್ತೈದು ದಿನಗಳೆಂದರೆ ಸುಖದ ಪರಮಾವಧಿ ಮುಟ್ಟಿದ ದಿನಗಳೆಂದೇ ನಾನು ಭಾವಿಸಿದ್ದೇನೆ. ಶ್ರೀ. ಎನ್ಕೆಯವರು ಕಾದಂಬರಿಯಲ್ಲಿ ನಿರ್ಮಿಸಿದ ಪಾತ್ರಗಳೊಡನೇ ನಾವು ಮಾತ

ನಾಡಿ, ವಿನೋದ ಮಾಡಿ, ಆ ಪಾತ್ರಗಳೇ ಉತ್ತರ ಕೊಟ್ಟಂತೆ ಶ್ರೀ ಎನ್ಕೆಯವರು ಅವರ ಪರವಾಗಿ ಮಾತನಾಡಿದಾಗ ಅವರನ್ನು ಚೇಷ್ಟೆ ಮಾಡಿ ಕಳೆದ ಆ ದಿನಗಳ ನೆನಪು ಎಂದರೆ, ಓ ಏನು ಮಧುರ........! ಏನು ಸವಿ! ಒಂದು ಕೃತಿ ಸಂಪೂರ್ಣವಾಗಿ ಈ ರೂಪದಲ್ಲಿ ಹೊರಬಿದ್ದ ಮೇಲೆ ಅದನ್ನು ಓದಿ ಅನುಭವಿಸುವ ಸವಿ ಬೇರೆ; ಅದೇ, ಕೃತಿನಿರ್ಮಾಣದ ಹೊತ್ತಿನಲ್ಲಿಯೆ, ದಿನದಿನಕ್ಕೂ ಪಾತ್ರಗಳು ಬೆಳೆದು ಮೈತುಂಬಿ ಜೀವಕಳೆ ತುಂಬಿಕೊಳ್ಳುತ್ತಿರುವುದನ್ನು ನೋಡಿ ನೋಡಿ ರಸಿಕ ಹೃದಯಕ್ಕೆ ಆಗುವ ಸುಖಸ್ಪಂದನವೇ ಬೇರೆ. ನಾಟಕವನ್ನು ತೆರೆಯ ಮುಂದೆ ನೋಡುವ ಸುಖ ಬೇರೆ; ತೆರೆಯ ಹಿಂದೆ ನೋಡುವ ಸುಖ ಬೇರೆ. ಎರಡದರಲ್ಲಿಯೂ ಸುಖವಿದೆ.

ಈ ಕಾದಂಬರಿ ಹುಟ್ಟುವಾಗಲೂ ಓದಿದ್ದೇನೆ; ಅಚ್ಚಾಗಿ ಸಂಪೂರ್ಣವಾದ ಮೇಲೂ ಓದಿದ್ದೇನೆ. ಓದಿ ಮೆಚ್ಚಿದ್ದೇನೆ.

ಈ ಕಾದಂಬರಿಯಲ್ಲಿ ಶ್ರೀ. ಎನ್ಕೆಯವರು ಈ ವರೆಗೆ ಬಳಸದ ಒಂದು ಹೊಸ ತಂತ್ರವನ್ನು ಉಪಯೋಗಿಸಿ ಯಶಸ್ಸನ್ನು ಪಡೆದಿದ್ದಾರೆ ಎನಿಸುತ್ತಿದೆ ನನಗೆ. ಜೋಕಾಲಿಯ ಜೀಕದಂತೆ ಮನಸ್ಸು ಹಿಂದೂ ಮುಂದೂ ತೂಗಾಡುವುದನ್ನು–ಒಂದು ಘಟನೆ ನಡೆದಿರುವಾಗಲೆ, ಆ ವ್ಯಕ್ತಿಗಳ ಮನಸ್ಸು ತತ್ಸಮವಾದ ತಮ್ಮ ಜೀವನದಲ್ಲಿಯ ಘಟನೆಯನ್ನು ನೆನೆಯುವುದರಿಂದಲೆ ಸಿನೇಮಾ ತಂತ್ರದಲ್ಲಿ ಉಪಯೋಗಿಸುವ 'Flash backs' ಗಳಂತೆ—ಕಾದಂಬರಿಯಲ್ಲಿಯ ಕತೆಗೆ ಗತಿ ಬರುತ್ತದೆ; ಅದರಲ್ಲಿಯ ವ್ಯಕ್ತಿಗಳ ಸ್ವಭಾವಕ್ಕೆ ಜೀವಕಳೆ ಬರುತ್ತದೆ.

ಕಾದಂಬರಿಯಲ್ಲಿ ಎಲ್ಲಿಯೂ ಉದ್ದುದ್ದ ವರ್ಣನೆಗಳಿಲ್ಲ ಬೇಸರ ತರುವುದಕ್ಕೆ.

ಮಿಂಚು-ಹುಳದಂತೆ, ಪಾತರಗಿತ್ತಿಯಂತೆ, ಇಲ್ಲಿ ಎನ್ನುವುದರಲ್ಲಿ ಅಲ್ಲಿ, ಅಲ್ಲಿ ಎನ್ನುವುದರಲ್ಲಿ ಅದರ ಮುಂದೆ, ಹೀಗೆ ಚಕ್ ಪಕ್ ಎಂದು 'ಎವೆ ತೆರೆದಿಕ್ಕುವ ಹೊತ್ತಿನ ಒಳಗೆ' ನಡೆದ ಮುಂಬಯಿ ಜೀವನದ ಸಹಜ ಚಿತ್ರ ಈ ಕಾದಂಬರಿಯಲ್ಲಿ ರಮ್ಯವಾಗಿ ಚಿತ್ರಿತವಾಗಿದೆ. ಮದುವೆಯಂತಹ ಮಹತ್ವದ ಘಟನೆಗಳೂ ಇಲ್ಲಿ ದಾರಿ ದಾರಿಯಲ್ಲಿಯೆ ಹೇಗೆ ನಡೆದುಹೋಗುತ್ತವೆ ಎಂಬುದನ್ನು ಶಬ್ದಸೀಮಾರೇಖೆಗಳಲ್ಲಿ ಮಾರ್ಮಿಕವಾಗಿ ತೋರಿಸಿದಾರೆ.

ಪತ್ರಗಳಿಂದ ಪ್ರಾರಂಭವಾಗುವ ಈ ಕಾದಂಬರಿ ಮೊದಲು ಮೊದಲು ಸ್ವಲ್ಪ ಬೇಸರ ಬರುವಂತೆನಿಸಿದರೂ, ಪತ್ರಗಳನ್ನು ಮುಗಿಸಿದೊಡನೆ ರಾಮನಾಥನ ಅಂತಃಕರಣದಲ್ಲೇಳುತ್ತಿರುವ ದುಃಖದ ಆವೇಗದಲ್ಲಿ ಓದುಗನೂ ಒಂದಾಗಿ ಕರುಣೆಯ ಸಮುದ್ರದಲ್ಲಿ ಮುಳುಮುಳುಗಿ ಏಳುತ್ತಾನೆ; ತನ್ನ ಕಣ್ಣೀರನ್ನೂ ಅದಕ್ಕೆ ಸೇರಿಸುತ್ತಾನೆ. ಕಾದಂಬರಿಯಲ್ಲಿಯ ಕತೆಯ ಮುಖ ಒಮ್ಮೆಲೆ ಅಲ್ಲಿಗೆ ಬದಲಾಗುತ್ತದೆ. ಓದುಗನ ಮನಸ್ಸನ್ನು ಹಿಡಿದುಬಿಡುತ್ತದೆ. ಅಲ್ಲಿಂದ ಹೊರಟ ಓದುಗ ಒಮ್ಮೆಲೆ ಕೊನೆಗೇ ಬಂದು ಉಸಿರ್ಗರೆಯುತ್ತಾನೆ.

ರಾಮನಾಥ ವಿದ್ಯಾ ಇವರ ನಡುವೆ ವಿಷಮ ಪರಿಸ್ಥಿತಿಯ ಮೂಲಕ ನಡೆಯುವ ಚಕಮಕಿಯ ಪ್ರಸಂಗ, ಮೋಹನನನ್ನು ಮುಂಬೈಗೆ ಕರೆದುಕೊಂಡು ಹೋಗಲು ಬಂದಾಗ ಧಾರವಾಡದಲ್ಲಿ ಮೊದಲ ಹೆಂಡತಿಯ ಮನೆಯಲ್ಲಿ ನಡೆದ ರಸಕಸಿಯ ಪ್ರಸಂಗ, ಕೊನೆಗೆ ಮುಂಬೈಯಲ್ಲಿ ಮೋಹನನ ಅಂತ್ಯಕಾಲದ ಹೃದಯದ್ರಾವಕ ಪ್ರಸಂಗ, ಇವು ಈ ಕಾದಂಬರಿಗೆ ಜೀವಾಳವಾಗಿ ಬಂದಿವೆ; ಕೌಟುಂಬಿಕ ಜೀವನವನ್ನು ಸಹಜ ಸುಂದರವಾಗಿ ಚಿತ್ರಿಸುವಲ್ಲಿ ಶ್ರೀ. ಎನ್ಕೆಯವರು ಎತ್ತಿದ ಕೈ ಎನ್ನುವದನ್ನು ಸಾರಿ ಹೇಳುತ್ತವೆ.

ಕಾದಂಬರಿ ಓದುವ ಆತುರತೆಗೆ ಅಡ್ಡಬಂದು ರುಚಿಗೆಡಿಸಬಾರದೆಂದು ಹೆಚ್ಚಿಗೆ ಹೇಳದೆ ಇಲ್ಲಿಗೇ ಈ ಪರಿಚಯ ಮುಗಿಸುತ್ತೇನೆ.

ಒಂದು ಮರೆತ ಮಾತು :

ಈ ಕಾದಂಬರಿ ಬರೆದು ಮುಗಿಸಿಕೊಡಲು ಶ್ರೀ. ಎನ್ಕೆಯವರಿಗೆ ಬಹಳ ಅವಸರ ಪಡಿಸಿದ್ದುದರ ಕಾರಣವಾಗಿ, ಅಲ್ಪಾವಕಾಶದಲ್ಲಿಯೆ ಇದನ್ನು ಮುದ್ರಿಸಿ ಹೊರಕ್ಕೆ ಹಾಕುವ ಗಡಿಬಿಡಿಯಲ್ಲಿ ಅಚ್ಚಿನ ದೋಷಗಳು, ಲೇಖನ ದೋಷಗಳು ಕೆಲವು ನುಸಳಿಕೊಂಡು ಬಂದಿವೆ. ಹೀಗೆ ಅವಸರ ಪಡಿಸಿ ಕೃತಿಯನ್ನು ದೋಷಯುಕ್ತಮಾಡುವುದು ಸರಿಯೇ ? ಎಂದು ವಿಮರ್ಶಕರು ಬೇಸರಪಟ್ಟುಕೊಳ್ಳಬಹುದು. ಆದರೆ ಒತ್ತಾಯ ಮಾಡದೆ ಕೃತಿನಿರ್ಮಾಣವೇ ಆಗದಂತೆ ಮಾಡುವುದಕ್ಕಿಂತ, ಒತ್ತಾಯ ಮಾಡಿ, ಅವಸರಪಡಿಸಿ, ಸದ್ಯಕ್ಕೆ ಸದೋಷವೆನಿಸಿದರೂ ಅಡ್ಡಿಯಿಲ್ಲ, ಕೃತಿನಿರ್ಮಾಣಕ್ಕೆ ಅನುಕೂಲ ಮಾಡಿಕೊಡುವುದು ಒಳ್ಳೆಯದೆಂಬ ಅಭಿಪ್ರಾಯದಿಂದ ಸಂಪಾದಕ ಹಾಗೆ ಮಾಡಿದ್ದಾನೆ. ಮನ್ನಿಸಬೇಕು.

**—ಸಂಪಾದಕ**

## 'ಎರಡನೆಯ ಸಂಬಂಧ'ಕ್ಕೆ ಮೊದಲು

ಇಲ್ಲಿಯ ಮಾತುಗಳನ್ನು ಓದುಗರು ಲಕ್ಷಿಸಬೇಕು. ಒಟ್ಟಾರೆ ಈ ಕಾದಂಬರಿ ಒಂದು ಹೊಸ ಬಗೆಯ ಪ್ರಯೋಗ. ಇದನ್ನು ಬರೆದ ರೀತಿ, ಇದರ ತಂತ್ರ, ಇದರ ಶೈಲಿ ಎಲ್ಲವೂ ಒಂದು ರೀತಿಯಲ್ಲಿ ಹೊಸ ಪ್ರಯೋಗಗಳೆ. ಇಲ್ಲಿ ಬರುವ ಕೆಲವು ಪಾತ್ರಗಳು ಮರಾಠಿ ಮಾತನಾಡುತ್ತವೆ, ಹಿಂದಿ ಮಾತನಾಡುತ್ತವೆ, ಇಂಗ್ಲಿಷ ಮಾತನಾಡುತ್ತವೆ, ತಮಿಳು ಮಾತನಾಡುತ್ತವೆ. ಕನ್ನಡ ಓದುಗನಿಗೆ ಈ ಬೇರೆ ಬೇರೆ ಭಾಷೆಗಳ ಅರ್ಥವಾಗಬೇಕು, ಸಂಭಾಷಣೆಯ ಸರಣಿಯಲ್ಲಿ ಸಹಜತೆ ಬೇಕು, ಪಾತ್ರಕಲ್ಪನೆಗೆ ಕುಂದು ಬರಬಾರದು, ಆ ದೃಷ್ಟಿಯಿಂದ ಇಲ್ಲಿ ಎರಡು ಮೂರು ಪ್ರಯೋಗಗಳನ್ನು ಮಾಡಿನೋಡಿದೆ. ಪಾತ್ರಗಳ ಕಲ್ಪನೆಯ ಮೇರೆಗೆ ಅವುಗಳ ಮುಖಾಂತರ ಮರಾಠಿ, ಇಂಗ್ಲಿಷ್ ಮೊದಲಾದ ಭಾಷೆಗಳನ್ನಾಡಿಸಿ ಅರ್ಥಗ್ರಹಣವಾಗಲೆಂದು ಕಂಸಿನಲ್ಲಿ ಕನ್ನಡ ಅನುವಾದ ಕೊಡುವದು; ದೊಡ್ಡ ದೊಡ್ಡ ವಾಕ್ಯಾವಳಿಗಳಿದ್ದಲ್ಲಿ ಮರಾಠಿಯ, ಇಂಗ್ಲಿಷಿನ, ತಮಿಳಿನ ಪಾತ್ರಗಳಲ್ಲೂ ಕನ್ನಡ ಭಾಷೆಯನ್ನೆ ಇಟ್ಟು ಅವರು ತಮ್ಮ ಭಾಷೆಯಲ್ಲೆ ಹೀಗೆ ಆಡಿದರೆಂದು ಸೂಚಿಸುವುದು; ಸುಲಭ ಅರ್ಥವಾಗುವಂತಿದ್ದಲ್ಲಿ ಯಾವ ಬಗೆಯ ಅನುವಾದವನ್ನೂ ಕೊಡದೆ ಮೂಲ ಭಾಷೆಯನ್ನೆ ಕನ್ನಡ ಲಿಪಿಯಲ್ಲಿ ಕಾಣಿಸುವುದು; ಒಮ್ಮೊಮ್ಮೆ ಇಂಗ್ಲಿಷ್ ಲಿಪಿಯಲ್ಲಿಯೆ ಕಾಣಿಸುವುದು. ಬೇರೆ ಬೇರೆ ಭಾಷೆಗಳನ್ನಾಡುವ ಪಾತ್ರಗಳು ಬಂದಲ್ಲಿ ಯಾವ ಭಾಷೆಯನ್ನು ಬಳಸಬೇಕೆಂಬ ದೃಷ್ಟಿಯಲ್ಲಿ ಭಿನ್ನಾಭಿಪ್ರಾಯಗಳಿವೆ. ಶ್ರೀ. ಗೋಕಾಕ ಅವರು 'ಇಜ್ಜೋಡಿ'ನ ಐದನೆಯ ಭಾಗದಲ್ಲಿ ಕನ್ನಡದಲ್ಲೆ ಅವರಿಂದ ಮಾತನಾಡಿಸಿದ್ದಾರೆ. ಇತ್ತೀಚೆ 'ಜೀವನ'ದಲ್ಲೂ ಈ ಬಗ್ಗೆ ಒಂದು ಲೇಖನವನ್ನು ಬರೆದಿದ್ದಾರೆ. ಇದು ಬಂಗಾಲಿ ಪಾತ್ರವೆಂದು ತೋರಿಸಲು ಕನ್ನಡ ಭಾಷೆಯಲ್ಲೇ ಅಲ್ಲಲ್ಲಿ ಕೆಲವು ಬಂಗಾಲಿ ಶಬ್ದಗಳನ್ನು ಬಳಸಬಹುದೆಂದು ಅವರ ಅಭಿಪ್ರಾಯ. ಅಂತೂ ಪಾತ್ರವು ಸಹಜವೆನಿಸಬೇಕಾದರೆ ಆಯಾ ಮೂಲಭಾಷೆ ಬೇಕೆಂಬುದು ಸ್ಪಷ್ಟವೆಂದಂತಾಯಿತು. ಮೂಲಭಾಷೆಯನ್ನು ಎಷ್ಟುಮಟ್ಟಿಗೆ ಬಳಸಿಕೊಳ್ಳಬಹುದೆಂಬುದೆ ಪ್ರಶ್ನೆ. ಆ ಪ್ರಶ್ನೆಗೆ ಇಲ್ಲಿ ಎಲ್ಲ ವಿಧದಲ್ಲೂ

ಉತ್ತರ ಕೊಡಲಾಗಿದೆ. ಹೀಗೆ ಉತ್ತರ ಕೊಡುವಲ್ಲಿ ಕಥೆಯ ಆಶಯಕ್ಕೆ, ಪಾತ್ರರಚನೆಗೆ ಚ್ಯುತಿ ಬಂದಿಲ್ಲವೆಂದು ನನಗೆನಿಸುತ್ತದೆ. ಓದುಗರಿಗೆ ನಿರಾತಂಕ ವಾಚನವಾದರೆ ಸಾಕು, ಯಾವ ಬಗೆಯ ಪ್ರಯೋಗವಿದ್ದರೂ ಅದು ಯಶಸ್ವಿಯೆಂದೇ ತಿಳಿಯಬೇಕು.

ಈ ಕಾದಂಬರಿಯನ್ನು ಬರೆದದ್ದೂ ಹೇಗೆಂಬುದನ್ನು ಸಂಪಾದಕರ ಪರಿಚಯದಿಂದ ತಿಳಿದುಕೊಳ್ಳಬಹುದಾಗಿದೆ. ಹೊಸ ಪ್ರಯೋಗದ ಮನೋರಂಜಕತೆಯೊಡನೆ ಹೊಸ ಪ್ರಯೋಗದ ಗಡಿಬಿಡಿಯೂ ಸ್ವಲ್ಪ ಅಲ್ಲಲ್ಲಿ ತಲೆದೋರಿದೆಯೆಂಬುದರ ಕಲ್ಪನೆ ಕಾದಂಬರಿಕಾರನಿಗಿದೆ. ಈ ಗಡಿಬಿಡಿಯಿಂದಾಗಿ ಕಾದಂಬರಿಯ ಸ್ವಾರಸ್ಯಕ್ಕೆ ಒಮ್ಮೊಮ್ಮೆ ಕೊರತೆಯುಂಟಾಗುವಂತಹ ಅಚ್ಚಿನ ದೋಷಗಳು ನುಸುಳಿಕೊಂಡಿವೆ. ಗಡಿಬಿಡಿಯಿಂದಾಗಿ ವಾಕ್ಯಕ್ಕೆ ವಾಕ್ಯವೇ ಲೋಪವಾಗಿದೆ ಒಂದೆಡೆಗೆ. ಅವುಗಳನ್ನೆಲ್ಲಾ ಒಟ್ಟಾಗಿಸಿ ಇನ್ನೊಂದೆಡೆಗೆ ತಿದ್ದುಪಡಿ ಕೊಡಲಾಗಿದೆ. ಸಹೃದಯರು ಇವುಗಳನ್ನೆಲ್ಲಾ ಸುಧಾರಿಸಿಕೊಂಡು ಓದಿದರೆ ಕಾದಂಬರಿಯ ಸ್ವಾರಸ್ಯಕ್ಕೆ ಚ್ಯುತಿ ಬರಲಿಕ್ಕಿಲ್ಲವೆನಿಸುತ್ತದೆ. ವಿಮರ್ಶಕವಾಚಕರಿಗೆ ಇಲ್ಲಿ ಒಂದು ಪ್ರಾಮಾಣಿಕ ಒಪ್ಪಿಗೆಯನ್ನು ಕೊಟ್ಟುಬಿಡುತ್ತೇವೆ- ಅಚ್ಚಿನ ದೋಷಗಳ ಮೇಲೇ ತಮ್ಮ ಶಕ್ತಿಮಸೆಯುವುದಾದರೆ ಮೊದಲೆ ನಾವು ಶಸ್ತ್ರವನ್ನಿಟ್ಟುಬಿಟ್ಟಿದ್ದೇವೆ ಎಂದು. ಇಷ್ಟೇ ಅಲ್ಲ ಕಾದಂಬರಿ ಬರೆದು ಮುಗಿಸುವ ಅವಸರದಲ್ಲಿ ಒಂದೆಡೆಗೆ ಮುಂಬಯಿಯಲ್ಲಿ 'ಕರ್ಫ್ಯೂ' ಇತ್ತೆಂದು ಹೇಳುವ ಸಂದರ್ಭದಲ್ಲೇ ಮಧ್ಯರಾತ್ರಿಗೆ 'ಸಿಟಿಲಾಯಿಟ' ದಿಂದ ಬಸ್ಸು ಬಂತೆಂದು ವರ್ಣಿಸಲಾಗಿದೆ. ಅನೇಕರಿಗೆ ಇದರ ವ್ಯತ್ಯಾಸ ಹೊಳೆಯಲಿಕ್ಕಿಲ್ಲ. ಆದರೆ ನನಗೆ ಅದು ಅಚ್ಚಾದ ಮೇಲೆ ಓದುವಾಗ ಹಳ್ಳ ಕಡಿದಂತೆನಿಸಿತಾದುದರಿಂದ ನನ್ನವಾಚಕ, ವಿಮರ್ಶಕ ಮಿತ್ರರೆಮರಿಗೆ ಈ ಒಂದು ಆಲಕ್ಷ್ಯಲೋಪವನ್ನು ತೋರಿಸಿಕೊಟ್ಟಿದ್ದೇನೆ. ಇದರಿಂದ ಕಾದಂಬರಿಯ ಲೇಸು ಕಾಣುವುದಕ್ಕೆ ಅವರ ದೃಷ್ಟಿ ಕದಡದಿರಲಿ ಎಂಬುವೆ ನನ್ನ ಉದ್ದೇಶ.

ಕತೆಗೊಬ್ಬ ನಾಯಕನಿರುವಂತೆ ಇಲ್ಲಿ ರಾಮನಾಥನಿದ್ದಾನೆ. ಆದರೆ ರಾಮನಾಥನೆಂದರೆ ಶ್ರೀರಾಮಚಂದ್ರನಲ್ಲ, ನಡೆಯುವಾಗ ಎಡಹುವ ಸಾಮಾನ್ಯ ಜೀವಿ. ಹಾಗೆ ಕತೆಗೊಬ್ಬ ಖಲನಾಯಕನು ಬೇಕೆಂದರೆ ಇಲ್ಲಿ ವಿದ್ಯಾವತಿಯನ್ನು ಖಲನಾಯಕಳೆಂದೆಣಿಸಲಿಕ್ಕೆ ಕಾದಂಬರಿಕಾರನು ಸಿದ್ಧನಿಲ್ಲ. ಮನುಷ್ಯನು

ಕೇವಲ ಸಾತ್ವಿಕನಿರುವುದಿಲ್ಲ, ಕೇವಲ ತಾಮಸಿಯಿರುವುದಿಲ್ಲ ಎಂಬುದೆ ಇಲ್ಲಿ ಗಮನಿಸಬೇಕಾದ ಮಾತು. ವಿದ್ಯಾವತಿಗೆ ಸೌಖ್ಯ ಬೇಕಿತ್ತು. ಅವಳಿಗೆ ಬೇಕಾದ ಸೌಖ್ಯ ರಾಮನಾಥನಿಂದ ದೊರಕಲಿಲ್ಲ. ಸೌಖ್ಯದ ಅರ್ಥವನ್ನು ಅವಳು ಸರಿಯಾಗಿ ಮಾಡಿಕೊಂಡಿರಲಿಲ್ಲವೆಂದೂ ಹೇಳಬಹುದು. ನರ-ನಾರಿಯರಲ್ಲಿ ನಾರಾಯಣತ್ವದ ಅಂಶವಿದ್ದೇ ಇರುತ್ತದೆಂದು ನಾವು ತಿಳಿಯಬೇಕು. ಎಂತಹ ರಾಕ್ಷಸೀ ಮನುಷ್ಯನಲ್ಲೂ ಮಹಾದೇವನ ಅಂಶವಿದ್ದೇ ಇರುತ್ತದೆ. ಹೀಗೆಂದೇ ವಿದ್ಯಾವತಿ ಮತ್ತೆ ರಾಮನಾಥನ ಮನೆಗೆ ಮರಳುತ್ತಾಳೆ. ಕುಂಕುಮದ ಕರಡಿಗೆ ಕೈಯಲ್ಲಿ ಹಿಡಿದುಕೊಂಡು ನಿಂತ ಮುಗ್ಧ, ಸಾತ್ವಿಕ ಮೂರ್ತಿ 'ಛಬಿ' ಅವಳಿಗೆ ಸ್ವಾಗತ ಕೋರುತ್ತಾಳೆ. ಛಬಿಯ ಪಾತ್ರ ಎಷ್ಟೆಂದರೂ ಕೋಮಲ, ನಿರ್ಮಲ. ಛಬಿಯಿದ್ದಳೆಂದೇ ರಾಮನಾಥ, ವಿದ್ಯಾವತಿ ಮತ್ತೆ ಕೂಡುತ್ತಾರೆ. ಛಬಿ ನಿರಂತರವೂ ಅವರ ನೆರೆಯವಳಾಗಿ ಉಳಿಯುತ್ತಾಳೆ.

ಹೆಚ್ಚೇನು ಹೇಳುವುದು? ನಾನು ಮೊದಲೆ ಓದುಗರ ಮುಂದೆ ಕೆಲವು ಕೊರತೆಗಳನ್ನಿಟ್ಟಿದ್ದೇನೆ. ಪಾತ್ರಗಳನ್ನು ನೋಡುವ ನನ್ನ ದೃಷ್ಟಿಯನ್ನು ಸ್ಪಷ್ಟಪಡಿಸಿದ್ದೇನೆ. ಸಂಭಾಷಣೆಯ ಶೈಲಿಯನ್ನು ಕುರಿತೂ ಹೇಳಿದ್ದೇನೆ. ಬಹಳ ಹೇಳುತ್ತ ಹೋದರೆ ಇದೇ ಒಂದು ಪ್ರಬಂಧವಾದೀತು.

ಮಿತ್ರ ಜಿ. ಬಿ. ಜೋಶಿಯವರು ನೂರಾಯೆಂಟು ಪುಷ್ಪಗಳನ್ನು ಅರಳಿಸಿದ್ದಾರೆ. ಈ ನೂರಾಯೆಂಟನೆಯ ಪುಷ್ಪವನ್ನರಳಿಸುವಲ್ಲಿ ಅವರು ಓದುಗರ ಮನಸ್ಸನ್ನೂ ನನ್ನ ಅಂತಃಕರಣವನ್ನೂ ಅರಳಿಸಿದ್ದಾರೆಂದು ತಿಳಿಯುತ್ತಿದ್ದೇನೆ. ಪುಷ್ಪ ಅರಳಿಸಿದ್ದಕ್ಕೆ ಪ್ರತಿಯಾಗಿ ವಾಚಕರು ಅವರಿಗೆ ಪುಷ್ಪ ಏರಿಸಲಿಕ್ಕಿಲ್ಲವೆಂದೂ ಭಾವಿಸುತ್ತಿದ್ದೇನೆ. ಪ್ರಕಾಶಕ ಜಿ. ಬಿ. ಯವರ ಸಂಬಂಧ ಬರದಿದ್ದರೆ ಈ ಎರಡನೆಯ ಸಂಬಂಧ ನನ್ನ ಮುಂಬಯಿ ವಾಸದಲ್ಲೇ ರೂಪುಗೊಂಡು ಬೆಳಕಿಗೆ ಬಾರದೆ ಹಾಗೇ ಉಳಿಯಬಹುದಾಗಿತ್ತು. ಎರಡನೆಯ ಸಂಬಂಧವನ್ನು ಬರೆಯಿಸಿ ಬೆಳಕಿಗೆ ತಂದ ಶ್ರೇಯಸ್ಸು ಅವರದು. ಇದಕ್ಕಾಗಿ ಅವರನ್ನು ಕೃತಜ್ಞತೆಯಿಂದ ನೆನೆಯದೆ ಹೇಗೆ ಈ ಮಾತು ಮುಗಿಸಲಿ?

—ಎನ್ಕೆ.

# ಕಾದಂಬರಿಗೆ ಮೊದಲು

ಓದುಗರು ದಯವಿಟ್ಟು ಇತ್ತ ಗಮನಿಸಿ ಇಲ್ಲಿ ಕಾಣಿಸಿದ ಕೆಲವು ಅಚ್ಚಿನ ಲೋಪ-ದೋಷಗಳನ್ನು ತಿದ್ದಿಕೊಂಡು ಮುಂದಿನ ಕಥಾಭಾಗವನ್ನೋದ ತೊಡಗಬೇಕೆಂದು ನಮ್ಮ ನಮ್ರ, ಆಗ್ರಹದ ಬಿನ್ನಹ. ಈ ದೋಷಗಳು ಕಾದಂಬರಿಯನ್ನು ಮುಗಿಸುವ ವಿಪರೀತ ಭರದಲ್ಲಿ ಹೇಗೊ ನುಸುಳಿಕೊಂಡಿವೆ, ಆದರೆ ಕಥೆಯ ಸ್ವಾರಸ್ಯಕ್ಕೆ ಇವು ಅಡ್ಡ ಬರಬಹುದಲ್ಲ ಎಂಬ ವಿಷಾದದಿಂದ, ನಮ್ಮ ವಾಚಕರು ಸಹಾನುಭೂತಿಯಿಂದ ಈ ದೋಷಗಳನ್ನು ತಿದ್ದಿಕೊಂಡು, ಕೊರತೆಗಳನ್ನು ತುಂಬಿಕೊಂಡು ಮುಂದೆ ಸಾಗಿದರೆ ಕಾದಂಬರಿಯ ರಸ, ರುಚಿಗಳಲ್ಲಿ ವ್ಯತ್ಯಯ ಬರಬಾರದೆಂದು ಭರವಸೆಪಟ್ಟು, ಅವುಗಳನ್ನಿಲ್ಲಿ ವಿವರಿಸುತ್ತಿದ್ದೇವೆ. ವಾಚಕರು ಕಥೆಯ ವಾಚನದಲ್ಲಿ ಸಂದರ್ಭಾನುಸಾರವಾಗಿ ಆ ಪುಟಗಳ ತಿದ್ದುಪಡಿಯನ್ನು ಓದುವಾಗಲೂ ಒಮ್ಮೆ ನೋಡಿದರೆ ಒಳ್ಳೇದು.

೬ನೆಯ ಪುಟದಲ್ಲಿ ಜಾನಕಿ ‘ತಪ್ಪಿದ್ದರ ಕ್ಷ್ಮಮಿಸಬೇಕು’ ಎಂದು ಬರೆದು ಕ್ಷಕ್ಕೆ ಮದೊತ್ತು ಕೊಟ್ಟ ತನ್ನ ಜಾಣ್ಮೆಯನ್ನು ತೋರಿಸುತ್ತಾಳೆ. ಇಲ್ಲಿ ತಪ್ಪಿ ‘ಕ್ಷಮಿಸಬೇಕು’ ಎಂದೆ ಬಿದ್ದಿದೆ. ಇದರಿಂದ ಅವಳ ಮದ ಒತ್ತಿನ ಮೋಜು ಪೂರ್ಣ ಕಂಡುಬರುವದಿಲ್ಲ. ‘ಲಕ್ಷ್ಮ್ಮೀವೆಂಕಟೇಶ ಪ್ರಸನ್ನ’ ಎಂದು ಬರೆಯುವಲ್ಲಿ ಮಾತ್ರ ‘ಲಕ್ಷೀವೆಂಕಟೇಶ ಪ್ರಸನ್ನ’ ಎಂದೆ ಬರೆದಿರುತ್ತಾಳೆ. ಅದೂ ಇಲ್ಲಿ ತಪ್ಪಿ ‘ಲಕ್ಷ್ಮೀ’ ಎಂದು ಬಿದ್ದಿದೆ.

೯ನೆಯ ಪುಟದಲ್ಲಿ ‘ಹೊಟ್ಟೆಯೊಳಗಿನ ಮಾತನ್ನು ಓಲೆಯ ಮುಖಾಂತರವೆ ಓದಿಕೊಳ್ಳುವುದು ನನಗೆ ಹೆಚ್ಚು ಇಷ್ಟ. ನಾವಿಬ್ಬರೂ ಕೂಡಿದ್ದಾಗ ನಿನ್ನ ಹೊಟ್ಟೆಯೊಳಗಿನ ಮಾತನ್ನು.......’ ಹೀಗೆ ಸಾಗಬೇಕು ಈ ಸಾಲು. ಇಲ್ಲದಿದ್ದರೆ ವಾಕ್ಯಪೂರ್ಣವೆನಿಸದೆ ಅಲ್ಲಿಯ ಭಾವನೆ ಪೂರ್ಣ ಕಲ್ಪನೆಗೆ ಬರುವುದಿಲ್ಲ.

೧೦೬ನೆಯ ಪುಟದ ಮೇಲೆ '**ವಾಮನ**ನಿನ್ನೂ ಹುಟ್ಟಿರಲಿಲ್ಲ,' ಎಂಬುದು '**ಮೋಹನ**ನಿನ್ನೂ ಹುಟ್ಟಿರಲಿಲ್ಲ' ಎಂದಾಗಬೇಕು.

೧೧೮ನೆಯ ಪುಟದ ಮೇಲೆ 'ಪ್ರೇಮಿಯಂತೆ **ಮಾತ್ರ ನಿನಗೂ**' ಎಂಬುದು 'ಪ್ರೇಮಿಯಂತೆ **ಮಿತ್ರನಿಗೂ**' ಎಂದಾಗಬೇಕು. ಇದನ್ನು ಗಮನಿಸಿಕೊಂಡು ಓದದಿದ್ದರೆ ಅರ್ಥದಲ್ಲಿ ವಿಶೇಷ ವ್ಯತ್ಯಯು ಬರುತ್ತದೆ.

೧೧೩ನೆಯ ಪುಟದಲ್ಲಿ ಒಂದೆಡೆ 'ತುಮ**ಚೀ** ಮನ' ಇನ್ನೊಂದೆಡೆ 'ತುಮ**ಚಾ** ಮನ' ಇವೆರಡೂ 'ತುಮಚೆ ಮನ್' ಎಂದಾಗಬೇಕು. ಇದೇ ಬಗೆಯ ಲಿಂಗ-ವಚನ ದೋಷಗಳು ಮರಾಠಿ ಮಾತುಗಳಲ್ಲಿ ಬಂದಿವೆ, ಇನ್ನೂ ಒಂದೆರಡು ಕಡೆಗೆ.

೧೩೦ನೆಯ ಪುಟದ ಮೇಲೆ '**ಛಬಿಲಾ** ಪಾರವತೊ' ಎಂಬುದು '**ವಿದ್ಯಾಲಾ** ಪಾರವತೊ' ಎಂದು ಬೇಕು.

೧೩೨ನೆಯ ಪುಟದಲ್ಲಿ ಸಂಭಾಷಣೆಯಲ್ಲಿ ರಾಮನಾಥನ ಮನಸ್ಸಿನ ಆವೇಗವನ್ನು ಹೆಚ್ಚಿಸುವ ವಿದ್ಯಾವತಿಯಾಡುವ ಒಂದು ವಾಕ್ಯವೆ ಹಾರಿ ಹೋಗಿ ರಸೋತ್ಕರ್ಷಕ್ಕೆ ಆತಂಕವುಂಟಾಗುತ್ತದೆ. ರಾಮನಾಥ 'ಹುಚ್ಚು ಹಿಡಿಸಬೇಡ' ಎಂದು ಮಾತು ಮುಗಿಸುತ್ತಾನೆ. ವಿದ್ಯಾ ಕೊಂಕು ನುಡಿಯಿಂದ, 'ಹುಚ್ಚು ? ಯಾರಿಗಾಗಿ ? ನಾನೇಕೆ ಹಿಡಿಸಬೇಕು?' ಎಂದು ಪ್ರಶ್ನೆ ಮಾಡುತ್ತಾಳೆ. ಆಮೇಲೆ 'ಶಟಪ್ ಯೂ' ಎಂದು ರಾಮನಾಥ ಆಕ್ರೋಶ ಮಾಡುತ್ತಾನೆ. ಇಲ್ಲದಿದ್ದರೆ ರಾಮನಾಥನ ಆಕ್ರೋಶಕ್ಕೆ ಅರ್ಥವೇ ಆಗುವುದಿಲ್ಲ.

೧೪೮ನೆಯ ಪುಟದ ಮೇಲೆ ' ಎಂದು **ರಾಮನಾಥ** ಮುಯ್ಯಿ ತೀರಿಸಿದ ಏಂಬುದು ' ಎಂದು **ಮನೂ** ಮುಯ್ಯಿ ತೀರಿಸಿದ ' ಎಂದು ಬೇಕು.

೧೫೧ನೆಯ ಪುಟದ ಮೇಲೆ '**ಕೆಂಪ**ವೊಂದನ್ನು ಬಿಟ್ಟರೆ' ಎಂಬುದು **ಕಂಪ**ವೊಂದನ್ನು ಬಿಟ್ಟರೆ ಎಂದಾಗಬೇಕು.

೧೭೫ನೆಯ ಪುಟದ ಮೇಲೆ 'ಮುಗುಳ್ನಗೆ **ನಕ್ಕರು**' ಎಂಬುದು 'ಮುಗುಳ್ನಗೆ **ನಕ್ಕಳು**' ಎಂದು ಬೇಕು. ಇದೇ ಬಗೆಯ ವಚನಭೇದಗಳು ಇನ್ನೂ ಒಂದೆರಡು ಕಡೆ ಅಲಕ್ಷ್ಯವಾಗಿ ತಪ್ಪಿ ಬಿದ್ದಿವೆ.

೧೮೭ನೆಯ ಪುಟದ ಮೇಲೆ ' **ಅಂಥ ಕಾರಣ**ದೊಳಗ ' ಎಂಬುದು ರುಕ್ಮಿಣಿಬಾಯಿ ಹೆಣ್ಣುಮಕ್ಕಳ ಮನೆತನದ ಮಾತಿನಲ್ಲಿ ಹೇಳುವ **ಅಂಥ-ಕ್ಕರಣ**ದೊಳಗ ' (ಅಂತಃಕರಣದೊಳಗ) ಎಂದಾಗಬೇಕು.

೨೨೧ನೆಯ ಪುಟದ ಮೇಲೆ–' ತೇ **ಭೇಟ್ಲೇ** ನಾಹಿ ? ' ಎಂಬುದರ ಬದಲು ' ತೇ **ಭೇಟ್ಲೆ** ನಾಹಿ ? ' ಎಂದು ಬೇಕು.

೨೪೧ನೆಯ ಪುಟದ ಮೇಲೆ ' ಶಾಕುಂತಲದ **ನಾಚಿಕೆ** ' ಎಂಬುದು ' ಶಾಕುಂತಲಗ **ನಾಯಿಕೆ** ' ಎಂದಾಗಬೇಕು.

ಇದಲ್ಲದೆ ಇಂಗ್ಲಿಷ್ ಸ್ಪೇಲಿಂಗ ದೋಷಗಳಾಗಿವೆ, ವಿರಾಮಚಿಹ್ನ, ಅಲ್ಪವಿರಾಮಚಿನ್ಹ, ವಿತರಣಚಿಹ್ನ, ಸ್ಪೆಸಿಂಗ್, ಮೊದಲಾದ ಅಲ್ಪ ಪ್ರಮಾಣದ ದೋಷಗಳೂ ನುಸುಳಿ ಕೊಂಡಿವೆ. ಅದನ್ನೂ ಕಡೆಗಣಿಸದೆ ಇಲ್ಲಿ ಪ್ರಾಮಾಣಿಕವಾಗಿ ಉಲ್ಲೇಖಿಸಬಯಸುತ್ತಿದ್ದೇವೆ. ಇಂತಹ ದೋಷಗಳ ಪುಟಗಳನ್ನೂ ಸಾಲುಗಳನ್ನೂ ಕೊಟ್ಟು ಓದುಗರನ್ನು ಬೇಸರಿಸದೆ ಅವುಗಳನ್ನ ವರು ಸುಧಾರಿಸಿಕೊಂಡು ಓದಬೇಕೆಂದು ಸೂಚಿಸಿ ಓದುವರೆಂದು ನಂಬಿ ಇಷ್ಟಕ್ಕೆ ಪೂರ್ಣವಿರಾಮ ಕೊಡುತ್ತೇವೆ.

—**ಪ್ರಕಾಶಕ**

ಹೊಸ ವರ್ಷದ ಮೊದಲ ಕುಸುಮ

# ಮರ್ಯಾದೆ ಮಹಲು

( ಸಾಮಾಜಿಕ ಕಾದಂಬರಿ )

ಬರೆದವರು :

'ಅಶ್ವತ್ಥ'

೩೦೦ ಪುಟಗಳು

ವಿಜಯಪುರ

ಪ್ರೀತಿಯ ಜಾನಕಿ, ..............

ಮದುವೆಯಾದರೂ ಮಾತನಾಡಬಾರದು ಎಂದರೆ ಎಲ್ಲಿಯ ನಿಯಮ? ನೀನಿನ್ನೂ ನನ್ನಾಕೆ ಅಲ್ಲವೆ? ನನ್ನಾಕೆ ಆಗುವ ಮೊದಲೆ ನನ್ನೊಡನೆ ಬೇಕಾದಷ್ಟು ಸಲುಗೆಯಿಂದ ಮಾತನಾಡುತ್ತಿದ್ದೆ; ಚೇಷ್ಟೆಮಾಡುತ್ತಿದ್ದೆ. ನೆನಪಿದೆಯೆ? ಒಮ್ಮೆ 'ಮಜಾಗಾಟಾ ಹಿಡಿ' ಎಂದು ನನಗೆ ತಮಾಷೆ ಮಾಡಲಿಕ್ಕೆ ಬಂದೆ. ನಾನು ಕೈ ಚಾಚಿದೆ. ಛಪ್ಪನೆ ಏಟು ಕೊಟ್ಟೆ ನೀನು. ಆಲ್ಲಿಯೇ ನಿನ್ನ ಕೈಯನ್ನು ನಾನು ಗಟ್ಟಿಯಾಗಿ ಹಿಡಿದುಬಿಟ್ಟೆ. ಈಗ ಪಾಣಿಗ್ರಹಣ ಮಾಡಿದ ಮೇಲೆ ನನಗೆ ಪರಕೀಯಳೇನೋ ಎಂಬಷ್ಟು ದೂರವಾಗಿಬಿಟ್ಟಿದ್ದೀ.

ನಾನು ಊರಿಗೆ ಹೋಗುವ ಮುನ್ನಾದಿನ ಹಾಗೇಕೆ ಮಾಡಿದಿ? ನನಗೂ ಜೀವದಲ್ಲಿ ಜೀವವಿರಲಿಲ್ಲ. ಆದರೂ ಜೀವ ಕೇಳಲಿಲ್ಲ. ನಿನ್ನನ್ನು ಮಾತಾಡಿಸಿಯೆ ಬಿಡಬೇಕೆಂದು ಜೀವ ಧಾವಿಸಿತು. ಇನ್ನು ಮತ್ತೆ ಕಾಲೇಜು ಆರಂಭವಾಗುವ ವರೆಗೆ, ಎಂದರೆ ಮೂರು ತಿಂಗಳು—ಸರಿ, ನೂರು ದಿನಗಳೆ ಅನ್ನು— ನಿನ್ನ ಮುದ್ದು ಮುಖದ ದರ್ಶನವಿಲ್ಲ, ಎಂದು ತಿಳಿದು ನಿನ್ನ ಕಿವಿಯೊಳಗೆ, ನಿನ್ನ ಹೃದಯಕ್ಕೆ ಒಂದೇ ಮಾತು ಉಸಿರಿ ಹೋಗಬೇಕೆಂದು ನಿನ್ನ ಸಮೀಪಕ್ಕೆ ಬಂದೆ. ಅಡುಗೆ-ಮನೆಯಲ್ಲಿ ನಿಮ್ಮವ್ವನಿದ್ದಿರಲಿಲ್ಲವೆಂದು ನನಗೆ ಗೊತ್ತಿತ್ತೆಂದೇ ನಿನ್ನೊಡನೆ ಸರಸವಾಡುವ ಸಾಹಸ ಮಾಡಿದ್ದು. ಅಡುಗೆ-ಮನೆಯೊಳಗಿಂದ ಹಾಯ್ದು ನಾನು ಬಚ್ಚಲ-ಮನೆಗೆ ಬರುತ್ತಲೆ ನೀನು ಬಚ್ಚಲ ಕಟ್ಟೆಗೆ ನೀರು ತುಂಬಿಟ್ಟೆ. ಅಂತೂ, ನೀರು ಕೊಡುವ ಮಟ್ಟಿಗಾದರೂ ವ್ಯಕಳೆ ಬಿಟ್ಟಿದ್ದೀ ಎಂದು ಹಿಗ್ಗಿದೆ. ಸುತ್ತುಮುತ್ತು ಇನ್ನಾರೂ ಇರಲಿಲ್ಲ. ಇನ್ನೂ ಎಲ್ಲರಿಗೆ ಗಾಢನಿದ್ರೆ. ನೀನೊಬ್ಬಳೆ ತವರುಮನೆಯಲ್ಲೂ ಮೊದಲುಗಿತ್ತಿಯಂತೆ ಅಡುಗೆ ಮನೆಯ ಕೇಗೆಸ ಸಾಗಿಸುತ್ತಿದ್ದೆ. ಕಸಗುಡಿಸುವುದು ಬಿಟ್ಟು ಬಂದೆಯಲ್ಲ, ನನಗೆಷ್ಟು ಸಂತೋಷವಾಯಿತು ಗೊತ್ತೆ ಜಾನಕಿ? ತಂಬಿಗೆ ಇಡಲು ನೀನು ಕೆಳಗೆ ಬಗ್ಗಿದೆ. ನಿನ್ನ ಬಾಗಿದ ಬೆನ್ನ ಮೇಲೆ ನಾನು ಬೆರಳಾಡಿಸಿದೆ. ವಿದ್ಯುತ್ತಿನ ತಂತಿ ಹಿಡಿದವರ ಹಾಗೆ ನೀನು ಪುಟಿದು ಬಿದ್ದೆ. ಓಡಿ ಹೋದೆ. ಕೈಗೆ ಸಿಕ್ಕ ಮಿಂಚು ಬಯಲಾಗಿ ಹೋದಂತಾಯಿತು ನನಗೆ.

ಅದೇ ರಸನಿಮಿಷವನ್ನು, ಅದೇ ಮಿಂಚಿನ ಮಿನೀಟನ್ನು ನೆನಸುತ್ತ, ಅದೇ ಸವಿನೆನಪಿನಿಂದ ಖಾಯಿ ಚಪ್ಪರಿಸುತ್ತ ಈ ಆರಣ್ಯದಲ್ಲಿ ನಿಮಿಷ ನಿಮಿಷ

ನೂಕುತ್ತಿದ್ದೇನೆ. ನೀನು ಕೆಳಗೆ ಬಾಗಿದಾಗ ತಲೆಯೊಳಗಿನ ಬಾಡಿದ ಹೂ-ಮಾಲೆಯ ಕಂಪು ಇನ್ನೂ ಗುಂಗುಹಿಡಿಸಿದೆ. ಎಷ್ಟು ಅದರ ಮದ!

ಧಾರವಾಡಕ್ಕೆ ಒಮ್ಮೆ ಬಂದು ಹೋಗಬೇಕೆಂದು ಜೀವ ಹಾತೊರೆಯುತ್ತಿದೆ. ಮನೆಯಲ್ಲಿ ಅಣ್ಣ-ಅತ್ತಿಗೆಯವರೆದುರು ಏನು ಹೇಳಿ ಬರಲಿ? ಧೈರ್ಯ ಸಾಲದು. ನಿನ್ನಿಂದ ಒಂದು ಓಲೆ ಬಂದರೆ, ನಿಮ್ಮಪ್ಪ ನಿನಗೆ ಬೆಂಡೋಲೆ ಮಾಡಿಸಿ ಕೊಟ್ಟದಕ್ಕಿಂತಲೂ ಹೆಚ್ಚಿನ ಸಂಭ್ರಮ ನನಗೆ. ಬರೆಯುವಿಯಾ ಜಾನಕಿ?

ನಿನ್ನ ಪ್ರಾಣಪ್ರಿಯ,
—ರಾಮಚಂದ್ರ

* * * *

ಶ್ರೀ. ಲಕ್ಷ್ಮಿ ವೆಂಕಟೇಶ ಪ್ರಸನ್ನ.

ಕ್ಷೇಮ ಧಾರವಾಡ
...........

ಮಾಡುವ ನಂಸ್ಕಾರಗಳು—

ತರುವಾಯ ಕ್ಷೇಮ. ನಿಮ್ಮ ಕ್ಷೇಮಸಮಾಚಾರ ಮ್ಯಾಲಿಂದ ಮ್ಯಾಲೆ ತಿಳಿಸುತ್ತಿರಬೇಕು. ತರುವಾಯ ಈಗ ಪತ್ರ ಬರೆಯಲಿಕ್ಕೆ ಕಾರಣಾ ಅಂದರ ಜರೂರ ಉತ್ತರಾ ಹಾಕಬೇಕು. ನಿಮ್ಮ ಪತ್ರಾ ಅಪ್ಪನ ಕೈಗೆ ಹೋಗಿತ್ತು. ಹಾಂಗ ಹೆಸರು ತಗೊಂಡು ಪತ್ರಾ ಬರೀಬ್ಯಾಡ್ರಿ. ಮನ್ಯಾಗ ಎಲ್ಲಾರು ನನಗ ಚ್ಯಾಷ್ಟಿ ಮಾಡಿದರು. ಗುಡುಗು ಮಿಂಚು ಅಂತ ಯೇನೇನೋ ಕಂಡಾಬಟಿ ಬರದೀರಿ. ಹಾಂಗೆಲ್ಲಾ ಬರೀಬಾರದು. ತಿಳೀತೇನು? ನಿಮ್ಮ ಪತ್ತೆ ಬರದು ಹಾಸಿಗಿ ತಲೆಗಿಂಬದ್ದಸೀಲಿ ಇಟ್ಟು ಹೋದ ಪಾಕೀಟು ಒಂದೇ ಇತ್ತು. ಈಗ ಅದನ್ನೇ ಬರದೀನಿ. ಮುಂದ ಮತ್ತ ಪತ್ತೆ ಬರದು ಕಳಸರಿ. ಇದು ಅಪ್ಪಗ ಗೊತ್ತಾದರ ಪಂಚೀತಿ. ಅಪ್ಪ ಮನ್ಯಾಗಿಲ್ಲದಾಗ ಮುಟ್ಟೋ ಹಾಂಗ ಪತ್ರಾ ಬರೀಬೇಕು.ಜರೂರ ಉತ್ರಾ ಬರೀಬೇಕು.ಜರೂರ ತಪ್ಪಿದ್ದರ ಕ್ಷಮಿಸಬೇಕು.

ನಿಮ್ಮ
ಕು. ಸೌ. ಜಾನಕಿಬಾಯಿ

ವಿಜಯಪುರ

..........

ಅಷ್ಟಪುತ್ರ ಕುಂಕುಮಸೌಭಾಗ್ಯವತಿ ಜಾನಕೀಬಾಯಿ ಇವರಿಗೆ—

" ತರುವಾಯ ಕ್ಷೇಮ. ತರುವಾಯ ಈ ಪತ್ರ ಬರೆಯಲಿಕ್ಕೆ ಕಾರಣ ವೇನಂದರೆ ಜರೂರ ಉತ್ತರಾ ಹಾಕಬೇಕು. ಜರೂರ ತಪ್ಪಿದ್ದರ ಕ್ಷಮಿಸ ಬೇಕು."

ಹ-ಹ! ಇರಲಿ ಜಾನಕಿ, ನೂರಾಯೆಂಟು ಅಚ್ಚಿನ (?) ದೋಷ ಗಳಿದ್ದರೂ ಅವು ನನಗೆ ಅಚ್ಚುಮೆಚ್ಚಿನ ದೋಷಗಳೇ ಅಲ್ಲವೆ?

ಇನ್ನೂ ನಗೆ ಬರುತ್ತಿದೆ ನೋಡು. ಜಾನಕಿ, ನಿಮ್ಮಪ್ಪ ಮನೆಯಲ್ಲಿಲ್ಲ ದಾಗ ಓಲೆ ಮುಟ್ಟುವಂತೆ ಬರೆಯಬೇಕೆ? ಅಲ್ಲಾ, ಈ ಮೂಢ ಅಂಚೆ ಯವರಿಗೆ ಇಷ್ಟೂ ತಿಳಿಯಬಾರದೆ? 'ಎಕ್ಸಪ್ರೆಸ್' ಡಿಲಿವರಿ ಅನ್ನುತ್ತಾರೆ ಎರಡಾಣೆ ಹಚ್ಚಿದರಾಯಿತು. 'ಲೇಟ್ ಫೀ' ಅನ್ನುತ್ತಾರೆ, ಒಂದಾಣೆ ಹಚ್ಚಿದ ರಾಯಿತು. 'ನೋ ಫಾದರ ಡಿಲಿವರಿ' ಅಂತ ನಾಲ್ಕಾಣೆ ಬಿಟ್ಟು ಎಂಟಾಣೆ ಕಸಿಯಲಿ ಬೇಡವೆನ್ನುವರಾರು?— ಅಂತಹದೇನಾದರೂ ಒಂದು ವ್ಯವಸ್ಥೆ ಮಾಡಬಾರದೆ? ಆದೀತು. ಆದೀತು ಅಂ? ಸ್ವರಾಜ್ಯ ಸಿಕ್ಕ ಮೇಲೆ ತಾನೇ ಆದೀತು.

ಅಥವ ಈ ಸರಕಾರದ ಅಂಚೆ ಬಿಟ್ಟು ಸಾರಸದ ಅಂಚೆ – ಎಂದರೆ ಹಂಸಪಕ್ಷಿ—ಯನ್ನೆ ನಾವು ಹಿಡಿಯೋಣವೇನೊ ಎನಿಸುತ್ತದೆ. ಪ್ರಣಯದ ಓಲೆಯನ್ನು ರಹಸ್ಯವಾಗಿ 'ನೋ ಫಾದರ ಡಿಲಿವರಿ' ಮಾಡಬೇಕು ಈ ಅಂಚೆಗಳೇ! ದಮಯಂತಿ ನಳರಾಜನಿಗೆ ಒಲುಮೆಯ ಓಲೆ ಕಳಿಸಿದುದು ಸರಕಾರೀ ಅಂಚೆಯಿಂದಲ್ಲ, ಖಾಸಗೀ ಅಂಚೆಯಿಂದ.

ಅಂಚೆಯ ಒಂದು ಇತಿಹಾಸವನ್ನೇ ಬರೆಯುವ ಹಾಗಿದೆ ನೋಡು. ಕಾಳಿದಾಸ ಹೆಂಡತಿಗೆ ಟಪಾಲು ಕಳಿಸಿದ್ದು ಮೇಘದೂತನಿಂದ. ಮೊಗಲರ ಬೇಗಂ ಪ್ರಣಯಪತ್ರ ಕಳಿಸಿದ್ದು ಪಾರಿವಾಳದ ಮೂಲಕ. ನಳ-ದಮಯಂತಿ ಯರಂತೂ ಹಂಸದ ಮೂಲಕ ಕಳಿಸಿದರು. ಇಂದಿನ 'ರೂಟರ' ಎಂಬ ಸುದ್ದಿಗಾರರೂ ಸಹ ಹಕ್ಕಿಯ ಮೂಲಕವೇ ಸುದ್ದಿ ಕಳಿಸುತ್ತಿದ್ದರಂತೆ.

ಇಷ್ಟೆಲ್ಲಾ ಅವತಾರ ತಾಳಿದ ಅಂಚೆ ಇಂದು ಸರಕಾರದ ಕೈಯಲ್ಲಿ 'ತಂತಿ'ಯ ಸಮಾಚಾರವಾಗುತ್ತದೆ, ನೆಲವೋಲೆಯಾಗುತ್ತದೆ, ನೀರೋಲೆಯಾಗುತ್ತದೆ, --ಬಚ್ಚಲಮನೆಯಲ್ಲಿಯ ನೀರೊಲೆಯಲ್ಲ ಮತ್ತೆ !—ಬಾನೋಲೆಯಾಗುತ್ತದೆ, ಮತ್ತೇನು?'ಮೇಘದೂತ'ವೆಂಬರೆ'ವಾಯರ್‌ಲೆಸ್'ಎ ಇದ್ದಿರಬೇಕು.

ಸರಿ, ನಿನಗೆ ಬೇಸರ ಬಂತು; ನನಗೆ ಗೊತ್ತಿದೆ. ಮತ್ತೊಂದು ಕ್ಷೇಮ ಸಮಾಚಾರವಿಲ್ಲ, ಶುಭಾಶೀರ್ವಾದವಿಲ್ಲ ಎಂದು ನೀನು ಮೂಗು ಮುರಿಯಬಹುದು. ಮುರಿಯುತ್ತೀ, ನನಗೆ ಗೊತ್ತಿದೆ. ಆದರೆ ಜಾನಕಿ, ನಿನ್ನನ್ನು ಹೀಗೆ ಓಲೆಯ ಮೂಲಕವೇ ತಿದ್ದಿ ರಸಿಕಳನ್ನಾಗಿ ಮಾಡಬೇಕೆನ್ನುತ್ತೇನೆ. ಏಕೆಂದರೆ ನನ್ನ ಸವಿ, ನನ್ನ ಸರಸ, ನನ್ನ ಅಭಿರುಚಿಗಳಿಗೆ ತಕ್ಕಂತೆಯೇ ನಿನ್ನ ಒಲವುಗಳೂ ಮಾರ್ಪಟ್ಟು ರೂಪಗೊಳ್ಳಬೇಡವೆ ?

ನನ್ನ ಜಾನಕಿ ಚದುರೆಯಾಗಬೇಕು, ಬೆಡಗು-ಬಿನ್ನಾಣಗಿತ್ತಿಯಾಗಬೇಕು (ಇವು ಬೈಗುಳಲ್ಲ ಮತ್ತೆ!) ಧೀಮಂತಳಾಗಬೇಕು, ಶ್ರೀಮಂತಳಲ್ಲದಿದ್ದರೂ ಶ್ರುತಿವಂತಳಾಗಬೇಕು ಎಂದು ನನ್ನ ಹಂಬಲ. ನಿನಗೆ ಹೊಸತನದ ಸಂಸ್ಕಾರ ಹೇಗೆ ಕೊಡಬೇಕೆಂದು ಹವಣಿಸುತ್ತಿದ್ದೇನೆ. ನೀನಾದರೊ 'ಅಪ್ಪ ಗುರ್‌ರ್ ಅನ್ನುತ್ತಾನೆ,ಅವ್ವ ಕುಂಯ್ ಅನ್ನುತ್ತಾಳೆ'ಎಂದು ಅಂಗೈಯಲ್ಲಿ ಜೀವ ಹಿಡಿದುಕೊಂಡು ಪತ್ರ ಬರೆಯುತ್ತೀ. 'ಅವ್ವಯ್ಯಾ ! ತನ್ನ ಮದುವೆಯಾದ ಗಂಡನಿಗೆ ಹೆಂಡತಿ ಪತ್ರ ಬರೆಯುತ್ತಾಳೆ—ನೋಡಿದಿರಾ! ' ಎಂದು ಜನರೆಲ್ಲಾ ಛೀ ಹಾಕುತ್ತಾರೆಂದು ಜಿಂಕೆಯಂತೆ ಬೆದರುತ್ತೀಯಲ್ಲವೆ ?

ಕೋರ್ಟಿನಲ್ಲಿ ಡಿಕ್ರಿ ಆದರೂ ಇನ್ನೂ ಜಮೀನು ನಮ್ಮ ಕಬ್ಜಾಕ್ಕೆ ಬಂದಿಲ್ಲ ಅನ್ನೋ ಹಾಗೆ ಮದುವೆಯಾದರೂ ಮದುಮಗಳು ನಮ್ಮ ಕಬ್ಜಾಕ್ಕೆ ಬಂದಿಲ್ಲ ಅನ್ನಬೇಕೆ ?

ನನ್ನ ಜಾನಕಿ ಈಗ ನನ್ನ ಅರ್ಧಾಂಗಿ, ನನ್ನ ಉತ್ತಮಾಂಗಿ, ನನ್ನ ಹೆಂಡತಿ—ಅವರಪ್ಪನ ಮಗಳಲ್ಲ. ತಿಳಿಯಿತೆ ? ಎಂದ ಮೇಲೆ ಬೇಗ ಉತ್ತರ ಬರೆ. ಧೈರ್ಯವಾಗಿ ಉತ್ತರ ಬರೆ. ' ಲಕ್ಷ್ಮೀ ವೆಂಕಟೇಶ ಪ್ರಸನ್ನ''ದಿಂದ ಪ್ರಾರಂಭಿಸಿ ಪತ್ರ ಬರೆಯಲಿಕ್ಕೆ ಕಾರಣವೇನೆಂಬುದಕ್ಕೇ ವಿನಾಕಾರಣವಾಗಿ ಮುಗಿಸಿ, ನಿಮ್ಮ ಕು. ಸೌ. ಎಂದು ಅಂಕಿತ ಹಾಕಿಬಿಟ್ಟರೆ ನಡೆಯಲಿಕ್ಕಿಲ್ಲ ನೋಡು. ಹೌದು. ನೀನು ನನ್ನ ಕು. ಸೌ. ಒಪ್ಪಿಕೊಳ್ಳುತ್ತೇನೆ,ಆದರೆ ಅದನ್ನು

ಬಿಟ್ಟು ಇನ್ನೊಂದೇನಾದರೂ ಸೊಗಸಿನ ವಿಶೇಷಣ ಹಚ್ಚಲ್ಲ. ನಾನಿರುವ ತನಕ ನಿನ್ನ ಕು. ಸೌ. ಎಲ್ಲಿ ಹೋಗುತ್ತದೆ? ನಿಮ್ಮ ಕರದ ಅರಗಿಳಿ, ನಿಮ್ಮ ಕೊರಳ ಕೋಗಿಲೆ, ನಿಮ್ಮ ಎದೆಯ ಸುಧೆ--ಹೀಗೇನಾದರೂ ಬರೆಯಲ್ಲ ?

ಹಾ ! ಜೋಕೆ ! ನಿಮ್ಮಪ್ಪನ ಚಪ್ಪಲಿಯ ಸಪ್ಪಳಾಯಿತೇನೊ ನೋಡು. ಗಂಡನ ಪತ್ರ ಓದುವುದನ್ನು ಕಂಡರೆ ಪಿಸ್ತೂಲು ಹಿಡಿದುಕೊಂಡೇ ಬಂದಾನು! ಉತ್ತರ ಬರೆ.

ನಿನ್ನ ಕನಸಿನ ರಾಜ,
—ಜಾನಕೀರಮಣ

* * * *

ಲಕ್ಷ್ಮೀ ಪ್ರಸನ್ನ

ಧಾರವಾಡ
..........

..........ರಾಯರಿಗೆ,

ಪ್ರೀತಿಯ ಜಾನಕಿ ಮಾಡುವ ಶಿರಸಾಷ್ಟಾಂಗ ನಮಸ್ಕಾರಗಳು. ತರುವಾಯ ಇಲ್ಲಿ ಕ್ಷೇಮ. ತರುವಾಯ ನಿಮ್ಮ ಕ್ಷೇಮಸಮಾಚಾರ ತಿಳಿಸಬೇಕು. ತರುವಾಯ ನನಗೆ ಚಡಪಡಿಕೆ ಆಗಿದೆ. ಇವೆಲ್ಲಾ ಹ್ಯಾಂಗ ಬರೀಲಿ ಅಂತ ನಾಚಿಕೆ ಆಗತದ. ಆದರೂ ನಿಮ್ಮದೇ ನೆನಪು ಆಗತದ. ಮನೆಯಲ್ಲಿ ಹಿರೇರು ಇದ್ದಾಗ ಹ್ಯಾಂಗ ಸ್ವತಂತ್ರ ಬರೀಲಿಕ್ಕೆ, ಮಾತಾಡಲಿಕ್ಕೆ ಆಗಬೇಕು? ನೀವು ಸಿಟ್ಟಿಗೇಳಬಾರದು. ನಮ್ಮಪ್ಪ ಪಿಸ್ತೂಲು ಹಿಡೀತಾನ ಅಂತೀರಿ. ಆತ ಬಹಳ ಒಳ್ಳೆಯವ ಇದ್ದಾನ. ಅವನ ಮ್ಯಾಲೆ ಸಿಟ್ಟಿಗೇಳಬಾರದು. ನಿಮಗೆ ದೀಪಾವಳಿಯೊಳಗ ಅಳಿಯತನ ಮಾಡಿಸಿ, ವಾಚು, ಬಂಗಾರದ ಚೇನು ಕೊಡಸರಿ ಅಂತ ಅವ್ವ ಊಟಾ ಬಿಟ್ಟು ಹಟಾ ಹಿಡಿದದ್ದಕ್ಕ ಒಪ್ಪಿಕೊಂಡಾನ. ಅದಕ್ಕ ಅವನ ಮ್ಯಾಲೆ ಸಿಟ್ಟಿಗೆ ಬರಬ್ಯಾಡ್ರಿ. ನೀವು ಸಿಟ್ಟಿಗೆದ್ದು ಕಳವಾಟದಾಗ ಸೆಟಕೊಂಡಿದ್ದಕ್ಕ ಈಗಾದರೂ ಒಂದು ಉಂಗರಾ ಕೊಡಬೇಕು ಅಂತ ಮನಸ್ಸು ಗಟ್ಟಿ ಕಲ್ಲು ಮಾಡ್ಯಾನ.

ನಮ್ಮವ್ವಗ ಮಾತ್ರ ನಿಮ್ಮ ಮನೀಯವರು ಹೊಟ್ಟೆ ಥಣ್ಣಗ ಮಾಡಿದ ಸೀರಿ ಕೊಡಲಿಲ್ಲಾ ಅಂತ ಅವ್ವ ಅಪ್ಪಾ ಇಬ್ಬರೂ ಸಿಟ್ಟಿಗೆದ್ದಾರ. ಆದರೂ

ನಿಮ್ಮ ಮ್ಯಾಲೆ ಮಾತ್ರ ಅವ್ವ ಸಿಟ್ಟಿಗೆದ್ದಿಲ್ಲ. ನಿಮ್ಮಣ್ಣ ದರವೊಂದಕ್ಕೂ ಶಾಣ್ಯಾತನ ಮಾಡಿದರೂ ನೀವು ಬಹಾಳ ಶ್ಯಾಣ್ಯಾರು ಇದ್ದೀರಿ. ಎಲ್ಲಾ ಪರೀಕ್ಷಾದಾಗೂ ಪಯಿಲಾ ನಂಬರು ಬರತೀರಿ ಅಂತ ಬಂದವರ ಮುಂದೆಲ್ಲಾ ವರ್ಣನಾ ಮಾಡತಾಳ. ಆಕಿ ನಿಮ್ಮ ವರ್ಣನ ಮಾಡೂ ಮುಂದ ನನ್ನ ಹೊಟ್ಯಾಗ ಹಿಡಿಸಲಾರದಷ್ಟು ಸಂತೋಷ ಆಗಿರತದ. ಯಾರಾದರೂ ಚ್ಯಾಷ್ಟಿ ಮಾಡ್ಯಾರು ಅಂತ ಸುಮ್ಮನೆ ಇರುತೀನಿ. ನಗೋದಿಲ್ಲ ಕೂಡ.

ಮಂಗಳಗೌರಿ ಸಾಮಾನೆಲ್ಲಾ ಕಳಿಸಿಕೊಡಲಿಕ್ಕೆ ಹೇಳ್ರಿ ನಿಮ್ಮಣ್ಣಗ. ಅವನ್ನೂ ಸುದ್ಧಾ ಅಪ್ಪನ ಕೊಳ್ಳಿಗೇ ಕಟ್ಟಬ್ಯಾಡ್ರಿ. ಮದಿವಿ ಮಂಗಳಸೂತ್ರ ಸುದ್ಧಾ ಅಪ್ಪನ ಕೊಳ್ಳಿಗೇ ಕಟ್ಟದಿರಿ. ಖರೋಖರ ಅಂದರ ತಾಳಿಮಣಿ ಗಂಡಿನವರು ಮಾಡಿಸಬೇಕು ಅಂತ ಆಚಾರು ಸುದ್ಧಾ ಹೇಳಿದರು. ಈ ಸಾರೆ ಪತ್ರಾ ದೊಡ್ಡದು ಬರದೀನಿ. ಬೈಯಬ್ಯಾಡ್ರಿ. ನೀವು ಶ್ಯಾಣ್ಯಾರು. ನಾನು ಕಲಿತಾಕಿ ಅಲ್ಲಾ. ತಪ್ಪಿದ್ದರ ಕ್ಷಮಿಸಬೇಕು. ಕ್ಷಣಕ್ಕ ಮನಸ್ನೊಸ್ತು ಕೊಡೂದುಲ್ಲಾ ಅಂತೀರಿ. ಈ ಸಾರೆ ಕೊಟ್ಟೇನಿ.

ನಿಮ್ಮ ಕೊರಳೊಳಗಿನ,
ಕು. ಸೌ. ಜಾನಕಿ

* * * *

ವಿಜಯಪುರ
.................

ನನ್ನ ಕೊರಳೊಳಗಿನ ಕು. ಸೌ. ಜಾನಕಿ,

ಮಂಗಳಸೂತ್ರ ನಿಮ್ಮಪ್ಪನ ಕೊರಳಿಗೆ ಕಟ್ಟಿದ್ದು ನನಗೆ ಗೊತ್ತಿಲ್ಲ ಬಿಡು. ತಪ್ಪಿದ್ದರೆ ಕ್ಷಮಿಸಬೇಕು. ಈಗ ಮಂಗಳಸೂತ್ರ ಯಾರ ಕೊರಳಲ್ಲಿದೆ ತಿಳಿಸಬೇಕು. ಮಂಗಳಗೌರಿ ನಿಮ್ಮಪ್ಪನ ಕೊರಳಿಗೆ ಕಟ್ಟೋದಿಲ್ಲ. ತಾಳೀ ಕಟ್ಟಿದ ನಿಮ್ಮಪ್ಪನ ಕೊರಳಿಗೆ ಬೇಕಾದರ ತಾಳಾ ಕಟ್ಟೋಣು, ಒಂದು ಜೋಡಿ. ಸಿಟ್ಟು ಬಂತೇನು ?

ಅಂತೂ ನಿಮ್ಮಪ್ಪ ನಿಮ್ಮವ್ವನ ಸತ್ಯಾಗ್ರಹಕ್ಕೆ ಸೋತದ್ದು ಸಂತೋಷದ ಸಂಗತಿ. ಹಾಂಗೆಲ್ಲಾ ನಿಮ್ಮಪ್ಪನೂ ಒಳ್ಳೇ ಮನುಷ್ಯ ಅಲ್ಲವೇನು ?

ಮಧ್ಯಾನ್ಹದಲ್ಲಿ ಬೇಸರ ಬಂದಾಗ ಏನು ಮಾಡುತೀ? ನಿಮ್ಮವ್ವನ ಜೊತೆಗೆ ಅಕ್ಕಿ ಬೇಳೆ ಹಳವಮಾಡುವುದರಲ್ಲಿ ನೆರವಾಗುವಿಯೊ, ಇಲ್ಲವೆ ಏನಾದರೂ ಕತೆ ಕಾದಂಬರಿ ಓದುವಿಯೊ, ಇಲ್ಲವೆ ಯಾವ ಗೋಜೂ ಬೇಡವೆಂದು ಮುಸುಕೆಳೆದು ಗೊರಕೆ ಹೊಡೆಯುತ್ತೀಯೊ?

ಪತ್ರಕ್ಕೆ ಉತ್ತರ ಜರೂರ ಬರೆ.

ನಿಮ್ಮಪ್ಪನ ಕೋರಳೊಳಗಿನ ತಾಳವಲ್ಲ, ನಿನ್ನ ಕೊರಳೊಳಗಿನ ಸ್ನೇಹ-ಸೂತ್ರವಾಗಿರುವ,

–ನಿನ್ನ ಚಂದ್ರಾಮ

* * * *

ಧಾರವಾಡ

............

ರಾ। ರಾ। ಚಂದ್ರಾಮಾಚಾಯರಿಗೆ,

ಹೆ-ಹ! ಮದಿವಿಕಿಂತ ಮೊದಲು ಉರುಟಣಿ ಪಾಠ ಮಾಡೋವಾಗ ಚಂದ್ರಾಮರಾವ್ ಅಂತ ಮಾಡಿದ್ದೆ. ಮದುವೆಯಲ್ಲಿ ಉರುಟಣಿ ಮಾಡುವಾಗನೂ ಚಂದ್ರಾಮರಾವ ಅಂತಲೇ ಹೆಸರು ಬಾಯಿಗೆ ಬಂದಾಗ ಬಾಯಿಗೆ ಸೆರಗು ಹಿಡಿದುಕೊಂಡು ನಕ್ಕುಬಿಡುತ್ತಿದ್ದೆ. ನೀವೂ ನಗುತ್ತಿದ್ದಿರಿ ಅಲ್ಲs?

ಅಲ್ಲಾ, ಇದೇನಿದು, ಅಪ್ಪಗ ಹೀಂಗೆಲ್ಲಾ ಚ್ಯಾಷ್ಟಿ ಮಾಡಿದರ? ನನಗ ಸುದ್ಧಾ ಸಿಟ್ಟು ಬಂದ್ಹಾಂಗ ಆಗಿತ್ತು. ಪಾಪ! ನಮ್ಮ ಸಲುವಾಗೇ ಆತ ಇಷ್ಟೆಲ್ಲಾ ಖರ್ಚು ಮಾಡಿ ಮನೆ ತೊಳೆದು ಹೋದರೂ ಕೊಳ್ಳಿಗೆ ತಾಳಾ ಕಟ್ಟಬೇಕೂ ಅಂತೀರಲ್ಲಾ? ಕಾಶೀಯಾತ್ರಾಕ್ಕ ಕಳಿಸಬೇಕಂತ ಮಾಡೀರೇನು? ಸೋಡಮುಂಜಿವೆಯ ಕಾಶೀಯಾತ್ರಾ ಸುಳ್ಳು, ಇದು ಖರೇ ಆದೀತು. ಹೀಂಗೆಲ್ಲಾ ಇನ್ನೊಮ್ಮೆ ಪತ್ರಾ ಬರೀಬ್ಯಾಡ್ರಿ. ಅಪ್ಪನ ಕೈಗೆ ಸಿಕ್ಕುಬಿದ್ದರ ಫಜೀತಿ!

ನಿಮ್ಮ ಸಲುವಾಗಿ ಯಾವಾಗಲೂ ಜೀವ ಚಡಪಸಲಿಕ್ಕ ಹತ್ತೇದ. ಆ ದಿವಸ ನನ್ನ ಮಾತಾಡಿಸಿದಿರಲ್ಲ. ಅದನ್ನ ನೆನಸಿಕೊಂಡರ ಮೈ ಇನ್ನೂ "ಝುಂ' ಅಂತದ.

ಇಲ್ಲಿದ್ದಾಗ ನೀವು ದಿನಾಲು ತಲೆಗಿಂಬಿಗೆ ಚೀಟಿ ಬರದು ಇಡುತ್ತಿದ್ದಿರಿ. ಸಂಜೆಯ ಮುಂದೆ ಹಾಸಿಗೆ ಹಾಸುವಾಗ ನನ್ನ ಕೈಗೇ ಸಿಗುತ್ತಿತ್ತು. ಪತ್ರ ಓದಿಕೋತ ಪಲ್ಲಂಗಪೋಸು ಕೈಯಾಗ ಹಿಡಿದುಕೊಂಡು ಹಾಂಗೇ ಕೂತು ಬಿಡುತಿದ್ದೆ. ಚಹಾ ಮಾಡಿಟ್ಟು ಎಷ್ಟೊತ್ತಾತು ಅಂತ ಅವ್ವ ಒದರಿದಾಗs ಎಚ್ಚರ. ದಿನಾಲು ಸಂಜೆಯ ಮುಂಚ ನೀವು ಹೊರಗ ಹೋದ ಕೂಡಲೇ ನನಗೆ ಹಾಸಿಗೆ ಹಾಸೂದು ಅಂದರ ಬಹಳೇ ಆನಂದ ಆಗುತ್ತಿತ್ತು. ಮತ್ತ ಒಕ್ಕಲಗಿತ್ತಿ ಎಲ್ಲಿ ಹಾಸಲಿಕ್ಕೆ ಬರತಾಳೋ ಅಂತ ಓಡಿ ಬರುತ್ತಿದ್ದೆ. ಅಂತೂ ನಿಮ್ಮ ತಲೆಗಿಂಬು ಅಂದರ ಒಂದು ಟಪಾಲಪೆಟಿಗಿ ಆಗಿತ್ತು. ನಿಮ್ಮ ತಲೆ ಯೊಳಗಿನ ಮಾತೆಲ್ಲಾ ಅದೇ ಹೇಳುತಿತ್ತು. ನಿಮ್ಮ ಜೋಡಿ ಅಲ್ಲದಿದ್ದರೂ ನಿಮ್ಮ ತಲಿಗಿಂಬಿನ ಜೋಡಿ ಆದರೂ ಮಾತಾಡಲಿಕ್ಕೆ ಸಿಕ್ಕಹಾಂಗ ಆತೂ ಅಂತ ಅಷ್ಟೇ ಸಮಾಧಾನ ಆಗತಿತ್ತು.

ಬರೆ ನಿಮ್ಮ ಹಳೇ ಪತ್ರಾನs ಓದಿ ಈಗ ವ್ಯಾಖ್ಯಾ ಕಳೀತೀನಿ ಒಂದೊಂದು ಪತ್ರದೊಳಗ ಒಂದೊಂದು ಮೋಜು ಬರದೀರಿ. ಒಮ್ಮೊಮ್ಮೆ ಅಂತೂ 'ಇದೇನು ನ ಮ್ಮವಾ!' ಅಂತ ನಾಚಿಗಿ ಬಂದು ನನ್ನೊಳಗ ನಾನು ಹುಚ್ಚುಚ್ಚಾರ ನಕ್ಕು ಬಿಡತೀನಿ.

ಸಾಕು. ಬರೇ ಪತ್ರದೊಳಗ ವ್ಯಾಖ್ಯಾ ಕಳದರ ಮೇಲಗೆಲಸಾ ಯಾರ್‍ಕ್ಕ ಮಾಡಬೇಕು ? ಒಲಿಮ್ಯಾಲಿನ ಹಾಲು ಉಕ್ಕಲಿಕ್ಕೆ ಹತ್ಯಾವಂತ. ಅವ್ವ ಒದರಿ ಕೋಳಿಕ್ಕೆ ಹತ್ಯಾಳ. ಚಹಾ ಇಳಿಸಿಟ್ಟು ಬಂದೀನಿ. ಇನ್ನು ಹೋಗಿ ಸೋಸ ಬೇಕು. ಚಹಾ ಗಂಟಲದಾಗ ಇಳಿಯೂ ಮುಂದ ನಿಮ್ಮ ನೆನಪು ಅಡ್ಡ ಬಂದು ಚಹಾ ಇಳಿಯೂದೇ ಇಲ್ಲ. ನಡುವೆ ಒಮ್ಮೆ ಬಂದು ಹೋಗ್ರಿ. ಮಾತಾಡ-ದಿದ್ದರೂ ಮಾರೀನಾರ ನೋಡಲಿಕ್ಕೆ ಸಿಗತದ.

ನಿಮ್ಮ
—ನಾನು

* * * *

ಬೆಳಗಾವಿ

..........

ನನ್ನ ಪ್ರೀತಿಯ ಜಾನಕಿ,

ನಾವು ಪತ್ರವ್ಯವಹಾರ ಮಾಡದೆ ಎಷ್ಟೋ ದಿನ ಆಗಿಹೋದುವಲ್ಲವೆ? ನಗೂ ಬಂತೇನು ? ಹೌದು, ನಾವೇ ಚಕ್ರವಾಕಗಳಂತೆ ಒಬ್ಬರಿಗೊಬ್ಬರು ಹೊಂದಿಕೊಂಡಿದ್ದಾಗ ಓಲೆಗೆಲ್ಲಿಯ ಸ್ಥಾನ ಎಂದಿಯಾ ? ಅದೂ ಸರಿಯೆ. ಆದರೂ ನೋಡು ಜಾನಕಿ, ನನಗೇಕೊ ನಿನ್ನ ಮಾತನ್ನು ಕೇಳುವುದಕ್ಕಿಂತ ನಿನ್ನ ಹೊಟ್ಟೆಯೊಳಗಿನ ಮಾತನ್ನು—ನೀನು ನನ್ನ ಮುಂದೆ ಹೇಳುತ್ತಿರಲೇ ಇಲ್ಲ. ಅಷ್ಟು ನಾಚಿಗೆ ನಿನಗೆ. ಆದರೆ ನಾವಿಬ್ಬರೂ ಅಗಲಿದಾಗ ನಿನಗೇ ಬಹಳ ಚಡಪಡಿಕೆಯಾಗಿ ನೀನೇ ಉಸುರಿಬಿಡುತ್ತೀ—ನಿನ್ನ ಅಂತರಂಗದ ಪತ್ರದಲ್ಲಿ. ಇಲ್ಲದಿದ್ದರೆ ಹೇಳು,ನಾನು ಬಿ. ಟಿ. ಪರೀಕ್ಷೆಗೆಂದು ಬೆಳಗಾಂವಿಗೆ ಬರುವ ಮುಂದೆ ಎಷ್ಟು ಸಲ ಗದ್ದ ಹಿಡಿದು ರಮಿಸಿ ಕೇಳಿದರೂ ನಿನ್ನ ಹೊಟ್ಟೆಯೊಳಗಿನ ಮಾತನ್ನು ಹೇಳಿದ್ದಿಯಾ ? ಆದರೆ ಮೊನ್ನಿನ ಪತ್ರದಲ್ಲಿ ನೀನೇ ಪಳಕ್ಕನೆ ಹೇಳಿಬಿಟ್ಟಿರುವೆ. ಇರಲಿ, ಸಂತೋಷ ಜಾನಕಿ. ಈ ನಿನ್ನ ಹೊಟ್ಟೆಯೊಳಗಿನ ಗುಟ್ಟು ಒಂಬತ್ತು ತಿಂಗಳ ಮೇಲಾದರೂ ಹೊರ ಬೀಳಲೇಬೇಕಲ್ಲವೆ ? ಹೇಳು, ನಗುವೆಯಾ ? ಮುನಿಸಿನಿಂದ ಮುಖ ಮುದರಿಸುವಿಯೋ ?

ಆದರೆ ಇದೇನೋ ನಡುವೆ ಒಂದು ಅಪಶ್ರುತಿಯ ರಾಗ ಎಳೆದಿದ್ದೀಯಲ್ಲ? ಇಷ್ಟು ಬೇಗ ಬೇಕಾಗಿರಲಿಲ್ಲವೆ? ಹೂಂ! ನಿಜ. ನನಗೂ ಬೇಕಾಗಿರಲಿಲ್ಲ, ಆದರೇನು ಮಾಡುವುದು ಪ್ರಿಯೆ, —'ಕರ್ಮಣ್ಯೇವಾಧಿಕಾರಸ್ತೆ' ಎಂದು ಹೇಳಿಲ್ಲವೆ ? ಮತ್ತೆ ನಗು ಬಂತೇನೊ !

ನಿಜ, ಬೇಗನೆ ತಾಯ್ತನ ಬಂದುಬಿಟ್ಟರೆ ಸ್ವಚ್ಛಂದಶೃಂಗಾರಲಹರಿಗೆ ಕಟ್ಟುಹಾಕಿದ ಹಾಗಾಗುವದು. ಒಂದೈದು ವರುಷವಾದರೂ, ನನಗೂ ಆಸೆಯಿತ್ತು, ನಾವು ಸ್ವೇಚ್ಛೆಯಿಂದ ಮುದ್ದಣ ಮನೋರಮೆಯರಾಗಿ ಕಾಲ ಕಳೆಯಬೇಕೆಂದು. ಮುದ್ದಣನಂತೆ ನಾನೂ ಸಂಜೆಗೆ ಕೆಲಸ ಮುಗಿಸಿ ಬರುತ್ತಲೆ ನೀನು ಬಿಸಿ ಬಿಸಿ ಚಹ, ರುಚಿಕಟ್ಟಾದ ಅವಲಕ್ಕಿ ಸಿದ್ಧಮಾಡಿ

ಇಟ್ಟಿರಬೇಕು. ನಾನು ಬರುತ್ತಲೆ ಕಾಲು ತೊಳೆಯಲು ನೀರು ಟಾವೆಲ್ಲು ಕೊಟ್ಟು ನನ್ನನ್ನುಪಚರಿಸಬೇಕು. ಆಮೇಲೆ ಇಬ್ಬರೂ ಕೂಡಿಯೆ—ಎಂದರೆ ಸಾಧ್ಯವಾದರೆ ಒಂದೇ ಬಸಿಯಲ್ಲಿ ಚಹಾಪಾನ ಮಾಡಬೇಕು. ಚಹಾ ಮುಗಿಸಿ, ರುಚಿಕಟ್ಟಾದ ವೀಳೆಯ ಮಡಿಕೆಯನ್ನು ನಿನ್ನ ಹಸ್ತದಿಂದ ಸ್ವೀಕರಿಸಿ, ನಿನಗೆ ಸೊಗಸಾದ ಕತೆಕಾದಂಬರಿಗಳನ್ನು ಓದಿತೋರಿಸಬೇಕು ಎಂದು. ಹೋಗಲಿ ಬಿಡು. ಈಗಲಾದರೂ ಬಂದಿರುವ ಅಂತಹ ಮಹಾ ಆಪತ್ತೇನು? ಇಬ್ಬರಿದ್ದಲ್ಲಿ ಮೂವರಾಗುವೆವು ಅಷ್ಟೆ. ಜಗತ್ತಿನ ನಿಯಮಕ್ಕೆ ನಾವೇನು ಹೊರತಾದವರೆ ? ಹೇಳು.

ಜಾನಕಿ, ಈಗೀಗ ನಿನ್ನ ಬರವಣಿಗೆಯ ಶೈಲಿಯನ್ನು ನಾನು ಒಳ್ಳೇ ಮೆಚ್ಚಿದ್ದೇನೆ. ನೆನಪಿದೆಯೆ ? ಆಗ ಹೇಗೆ ಬರೆಯುತ್ತಿದ್ದಿ ? 'ಲಕ್ಷ್ಮೀವೆಂಕಟೇಶ ಪ್ರಸನ್'ದಿಂದ ಪ್ರಾರಂಭಿಸಿ 'ಇಂತೀ ಶಿರಸಾಷ್ಟಾಂಗ ನಂಸ್ಕಾರಗಳು' ಎನ್ನುವುದರಲ್ಲಿಯೆ ಪತ್ರ ಮುಗಿದು ಹೋಗುತ್ತಿತ್ತು. ಹೌದು. ನಿಜ ಇರಬಹುದು, ನನ್ನ ಓಲೆಗಳನ್ನೋದಿ ನಿನ್ನ ತಲೆ ಕುದುರಿರಬಹುದು. ಆದರೆ ನೀನು ಚದುರೆ ಯಾಗಿರದೆ ತಲೆ ಕುದುರೀತೆಂತು ?

ನನ್ನ ಬಿ. ಟಿ. 'ಬಿಟ್ಟಿ'ಯಾಗಿ ಸಾಗಿದೆ. ಬೇಸರ ಬಂದು ಹೋಗಿದೆ ನೋಡು ಜಾನಕಿ. ದಿನಾಲು ಶಾಲೆಯೊಳಗೊಂದು ಸುರುಳಿ-ಹಲಗೆ (ಸುರಳಿ-ಹೋಳಿಗೆಯಲ್ಲ ಮತ್ತೆ !) ಕೈಯಲ್ಲಿ ಹತ್ತಾರು ಚಿತ್ರಗಳು, ತಲೆಯ ಮೇಲೆ ಹೆಗಲ ಮೇಲೆ ಅಡಕಲೇರಿದ ಪುಸ್ತಕಗಳು ಇಷ್ಟೆಲ್ಲಾ ಹೊತ್ತಿಗೆ ಸಾಧನಗಳ ಬೆಟ್ಟ ಹೊತ್ತುಕೊಂಡು, ನಿತ್ಯ ಕ್ಲಾಸರೂಮಿಗೆ ಹೋಗಿ ಪಾಠಕೊಟ್ಟು ಬರುವು ದೆಂದರೆ ಒಂದು ಯಜ್ಞಮಾಡಿದ ಹಾಗಾಗುತ್ತದೆ. ಈಗ ನೋಡು ಜಾನಕಿ, ನಾವೂ ಬಿ. ಟಿ. ವಿದ್ಯಾರ್ಥಿಗಳೇ. ಮತ್ತೊಮ್ಮೆ ಹುಡುಗತನ ಬಂದಿದೆ ನಮ-ಗೆಲ್ಲಾ. ಹುಡುಗರಂತೇ ಆಡುತ್ತೇವೆ, ಹಾಡುತ್ತೇವೆ, ಕುಣಿಯುತ್ತೇವೆ. ಅಂತರ ಇಷ್ಟೆ—ಶಾಲೆಯ ಮಕ್ಕಳು ಹಾಲುಗಲ್ಲದ ವಿದ್ಯಾರ್ಥಿಗಳು, ನಾವೊ ಗಡ್ಡಮೀಸೆಯ ವಿದ್ಯಾರ್ಥಿಗಳು. ನಗೆ ಬಂತೆ ? ಹೂಂ ! ನಿನಗೂ ಗಡ್ಡಮೀಸೆ ಇದ್ದರೆ ಹೇಳುತ್ತಿದ್ದೆ.

ಮೊನ್ನೆ ಹುಡುಗರಿಗಾಗಿ ಒಂದು ಪಾಠ ತೆಗೆದುಕೊಳ್ಳುತ್ತಿದ್ದೆ. ಕಾವ್ಯ ವಿಮರ್ಶೆಯ ಪಾಠ. 'ಗುಲಾಬಿ' ಹೂವಿನ ಬಗ್ಗೆ ಪಾಠವಿತ್ತು. ಎಂತಹ

ಮೃದುವಾದ ಹೂ! ಎಂತಹ ಮುಳ್ಳಿನ ಕಂಟಿ! ಗುಲಾಬಿಹೂವಿಗೆ ಮುಳ್ಳಿನ ಕಂಟಿ ಹೇಗನಿಸುತ್ತಿರಬೇಕು? ಎಂದು ಪ್ರಶ್ನೆ ಕೇಳಿದಾಗ ಒಬ್ಬ ಹುಡುಗ ಉತ್ತರ ಕೊಟ್ಟ. ಏನೆಂದು ಉತ್ತರ ಕೊಟ್ಟಿರಬಹುದು ಹೇಳು? ನಾನೇ ಹೇಳಲೆ? "ಅಪ್ಪನ ಗಡ್ಡವಿನ್ನೂ ಚುಚ್ಚುವಾಗ ಬಗಲೊಳಗೆ ಒದ್ದಾಡುವ ಕೂಸಿನ ಹಾಗೆ ಎನಿಸಿರಬೇಕು" ಎಂದು ಉತ್ತರ ಕೊಟ್ಟ. 'ಇದು ನಿನಗೆ ಹೇಗೆ ಹೊಳೆಯಿತು?' ಎಂದು ಕೇಳಿದಾಗ, 'ನಮ್ಮಪ್ಪ ನಮ್ಮ ಚಿಕ್ಕ ತಮ್ಮನನ್ನು ಎತ್ತಿಕೊಂಡಾಗೆಲ್ಲಾ ನಮ್ಮ ತಮ್ಮ ಹೀಗೇ ಒದ್ದಾಡುತ್ತಾನೆ.' ಎಂದು ಹುಡುಗ ಉತ್ತರ ಕೊಟ್ಟ. ಜಾಣ ಮಗೂ ನೋಡು!

ಅಂತಹ ಮುಳ್ಳಿನ ಕಂಟಿ ಗುಲಾಬಿ ಹೂವಿಗಾಗಿ ಹಾತೊರೆಯುತ್ತಿದೆ ನೋಡು ಜಾನಕೀ! ಈ ಪತ್ರ ಎಲ್ಲಿಂದ ಬರೆಯುತ್ತಿದ್ದೇನೆ ಗೊತ್ತೆ? ಇಲ್ಲಿಯ ಉತ್ಕೃಷ್ಟ ಉಡುಪಿಯ ಉಪಹಾರ ಗೃಹದಿಂದ. ದೋಸೆಗೆ ಅಪ್ಪಣೆ ಮಾಡಿದ್ದೇನೆ. ಬಿಸಿ ಬಿಸಿ ದೋಸೆ ಬರುವುದರೊಳಗೇ ನಿನಗೊಂದು ತಾಜಾ ಪತ್ರ ಬರೆದುಬಿಡಬೇಕೆಂದು ಕೂತೆ. ಸರಿ, ದೋಸೆ ಬಂತು. ನಿನಗೆ ವಾಸನೆ ಬರುತ್ತಿದೆಯಲ್ಲವೆ? ಮಸಾಲಿದೋಸೆ! ವಾಸನೆ ಬರದೆ ಏನು? ನಿನಗೂ ಮಸಾಲೆ ದೋಸೆ ಬೇಕೆ? ಸರಿ, ನನ್ನ ಓಲೆಯೆ ಇದೆಯಲ್ಲ? ನೀನೂ ದೋಸೆ ಕಳಿಸು.

ನಿನ್ನ
—ರಾಮಚಂದ್ರ

* * * *

ಧಾರವಾಡ
........ .. ....

ನನ್ನ ಜೀವದ ಜೀವ ಶ್ರೀರಾಮರಾಯರಿಗೆ,

ನಿಮ್ಮ ಗುಲಾಬಿಹೂವಿನ ಪಾಠ ಓದಿ ಬಹಳ ನಗೆ ಬಂತು. ಇಂತಹ ಮೋಜಿನ ಮಸಾಲೆಯಿಂದ ಕೂಡಿದ ನಿಮ್ಮ ಈ ಓಲೆಯ ದೋಸೆಗಿಂತ ಉಡಿಪಿ ಅಂಗಡಿಯ ದೋಸೆ ರುಚಿಯಾಗಿದ್ದೀತೇನು? ಅದೂ ಇರಲಿ. ನೀವು ಅಲ್ಲಿ ಮಸಾಲಿ ದೋಸೆ ತಿಂದಾಗಲೆ ನಾನು ಇಲ್ಲಿ 'ಅಬ್' ಅಂತ

ತೇಗಿದ್ದೇನೆ: ಯಾಕಂದರೆ ನಿಮ್ಮ ಹೊಟ್ಟೆಯೊಳಗೇ ಇಲ್ಲವೇನು ನಾನು ? ನಿಮ್ಮ ಹೊಟ್ಟೆಯೊಳಗೆ ನಾನು ನನ್ನ........ಇಶ್, ನಾಚಿಕೆಯಾಗುತ್ತದೆ. ಯಾರೆಂದು ಬರೆಯಲಿ ? ನನ್ನ ಹೊಟ್ಟೆಯೊಳಗೆ ನೀವು ಅಂದರೆ ನೀವೂ ನಾಳಿಗೆ ಮಗುವೇ ಆಗಿಬಿಡುತ್ತೀರಲ್ಲ ? ಏನೇನೊ ಬರೆದುಬಿಡುತ್ತೇನೆ. ಆ ಮೇಲೆ ನನಗೇ ನಾಚಿಕೆ ಸಾವು ಬರುತ್ತದೆ, ನಿಮ್ಮ ಗೆಳೆಯರು ಯಾರಾದರೂ ತೆಗೆದು ಓದಿದರೆ ಏನು ಫಜೀತಿ ಅಂತ ! ಹಾಗೇನೂ ಮಾಡಬೇಡಿರಿ ಮತ್ತೆ.

ಬೇಗನೆ ನಿಮ್ಮ ವಿದ್ಯಾರ್ಥಿ ಆಶ್ರಮ ಮುಗಿಸಿ ಬರ್‍ರಿ. ಬೆಳಗಾಂವಿಯಲ್ಲೇ ನೌಕರಿ ಸಿಗಬಹುದು ಅಂದೀರಲ್ಲ. ಹೌದು. ಬೆಳಗಾಂವಿಯೆ ಇರಲಿ. ಮತ್ತೂ ಗದಗು, ಮತ್ತೂ ಧಾರವಾಡ ನನಗೆ ಬೇಸರಿಟ್ಟು ಹೋಗಿದೆ ಇವೆರಡೂ ಊರು ಅಂದರೆ ನನಗೆ ಕೊಂಡವಾಡ ಇದ್ದ ಹಾಗೆ. ಆದ್ದರಿಂದ ಬೆಳಗಾಂವಿಯಲ್ಲೇ ನೌಕರಿ ಮಾಡಿರಿ. ಬೇಕಾದರೆ ಕೊಲ್ಹಾಪುರ, ಪುಣೆ, ಮುಂಬಯಿ ಇಂಥಾ ಊರು ಆದರೆ ಇನ್ನೂ ನೆಟ್ಟಗೆ. ನನಗಂತೂ ನಮ್ಮ ಕರ್ನಾಟಕ ಅಂದರೇನೆ ಬೇಸರಿಟ್ಟುಹೋಗಿದೆ. ಮತ್ತೂ ಜಗಳ ಮತ್ತೂ ದ್ವೇಷ. ಒಬ್ಬರನ್ನು ಕಂಡರೆ ಒಬ್ಬರಿಗೆ ಆಗೋದಿಲ್ಲ.

ಎಲ್ಲಿ ಆದರೇನು, ಮತ್ತೂ ಒಂದು ಮಾಸ್ತರಿಕೆ ತಪ್ಪಿದ್ದಲ್ಲ. ನನ್ನ ಮನಸ್ಸಿನೊಳಗ ದೊಡ್ಡ ಹಾಫೀಸರರ ಹೆಂಡತಿ ಆಗಬೇಕು ಅಂತ ಇತ್ತು. ನಿಮ್ಮನ್ನೆಲ್ಲಿಯಾದರೂ ಸಭಾಕ್ಕೆ ಕರಿಸಿದಾಗ ನಾನೂ ಜೊತೆಗೆ ಬರಬೇಕು. ನನ್ನ ಕೈಯಿಂದ ಸಭೆಯಲ್ಲಿ ಇನಾಮು ಕೊಡಿಸಬೇಕು. ನಿಮ್ಮ ಕೊರಳೊಳಗ ಮಾಲಿ ಹಾಕಿದ್ದು ಕಣ್ತುಂಬ ನೋಡಬೇಕು. ನೀವು ಭರ್ಜರಿ ಸೂಟು, ಪ್ಯಾಂಟು, ನೆಕ್‌ಟಾಯಿ ಹಾಕಿಕೊಂಡದ್ದು ಹೊಟ್ಟೆತುಂಬ ನೋಡಿ ದಣಿಯಬೇಕು ಅಂತೆಲ್ಲಾ ಇತ್ತು. ಹೋಗಲಿ, ಸುಮ್ಮನೆ ಹಿಂದಿನಿದೆಲ್ಲಾ ನೆನೆದು, ಏನು ಪ್ರಯೋಜನ ? ನಿಮ್ಮಲ್ಲಿರುವ ಗುಣ, ಯೋಗ್ಯತೆ, ಇಂದಿಲ್ಲ ನಾಳೆ ಬಯಲಿಗೆ ಬಾರದೆ ಹೋದೀತೇನು ? ಕಸ್ತೂರಿ ಮುಚ್ಚಿ ಟ್ರಂಕಿನೊಳಗ ಇಟ್ಟರೂ ವಾಸನಿ ಇಡಗದೇ ಬಿಡತದ ಏನು ? ನಿಮ್ಮಲ್ಲೆ ಇಷ್ಟು ದೊಡ್ಡ ಬರೆಯೋ ಕಲಾ ಅದ. ಬೇಕಾದಷ್ಟು ಓದಿಕೊಂಡೀರಿ. ಇಷ್ಟೇ ನೀವು ಕನ್ನಡ ಬಿಟ್ಟು ಇನ್ನೊಂದು ಭಾಷಾದೊಳಗ ಬರೀತಿದ್ದರ ಇಷ್ಟೊತ್ತಿಗೆ ಇಂತಹ ಮಾಸ್ತರಿಕೆ ಮಾಡೋ ಜರೂರೀನೆ ಬೀಳತಿದ್ದಿಲ್ಲ.

ಮತ್ತೊ ಹಾಡಿದ ರಾಗಾನೇ ಹಾಡೂದ್ಯಾಕ ? ಭಲೋ ದಿವಸ ಬರ ತಾವ ಅಂತ ನೆನೆಸಿಕೊಂಡರ ಅಲ್ಲೇನು ? ಲಗೂನೆ ಬೆಳಗಾಂವಿಯೊಳಗೇ ಒಂದು ಸ್ವಂತ ಮನೆ ಮಾಡೋಣ. ನಾವಿಷ್ಟೇ ಇರೋದು. ಬೇಕಾದಷ್ಟು ಸ್ವಾತಂತ್ರ್ಯ ! ಒಂದು ಪುಟ್ಟ ಮನೆ ಇರಲಿ. ಒಂದು ಪಡಸಾಲೆ, ಒಂದು ಕೋಣೆ, ಒಂದು ನಡುಮನೆ, ಒಂದು ಅಡಿಗೀ ಮನೆ ಇಷ್ಟು ಸಾಕು. ಇಪ್ಪತ್ತು ನಾಲ್ಕು ತಾಸೂ ನಳಾ ಇರಲಿ ಮತ್ತ, ಅಡಿಗೀ ಮನೆಯೊಳಗೊಂದು, ಬಚ್ಚಲ ಮನೆಯೊಳಗೊಂದು. ಸದಾ ಧವಳಗಂಗೀ ಹಾಂಗ ತಿಕ್ಕಿ ಮೇಲೆ ಏರಿಸಿ ಇಟ್ಟರೆ ಅಡಿಗೀ ಮನೆ ಝುಗಝುಗ ಅಂತಿರಬೇಕು. ಬೆಳಗಾಂವಿಯೊಳಗ ನಳಾ ಇಲ್ದಿದ್ದರ ಬೆಳಗಾಂವಿ ಬ್ಯಾಡೇಬ್ಯಾಡ ಹಾಂಗಾರ. ಪುಣೆ—ಮುಂಬಯಿ ಇರಲಿ ಆತ್ಯೇ. ಪಡಸಾಲಿಯೊಳಗ ಒಂದು ದುಂಡ ಟೇಬಲ್ಲು ತರ್ರಿ. ನಾನೊಂದು ಟೇಬಲ್ ವಸ್ತ್ರ ಹೆಣದೇನಿ. ಅದರ ಮ್ಯಾಲೊಂದು ಹ್ಲಾವರ ಪಾಟು. ನಿಮ್ಮ ಕೋಣೆ ಯೊಳಗ ನಿಮ್ಮ ಕಾಲೇಜಿನ ಫೋಟೊ ಎಲ್ಲಾ ಹಾಕಿರಿ. ಅಡಿಗೀ ಮನ್ಯಾಗ ನಾಯೆಲ್ಲಾ ನನ್ನ ವಟಸಾವಿತ್ರೀ ಫೋಟೊ, ದೇವರದು, ಸ್ವಾಮಿಗೋಳದು ಫೋಟೊ ಹಕ್ಕೋತೀನಿ. ಪಡಾಸಾಲ್ಯಾಗ ಚಪ್ಪಲಿ ಬಿಡಲಿಕ್ಕೆ ಒಂದು ಸಣ್ಣ ಸೆಲ್ಫ ಹಚ್ಚೋಣಂತ. ಒಂದೊಂದು ಮನೀಗೆ ಒಂದೊಂದು ಪಡದೆ ಇರಲಿ. ಬೇಕಾದರ ನನ್ನ ಪ್ರಿಂಟಿನ ಪತ್ಲ ಅವ ಅಲ್ಲಾ ಹಳೇವು—ಅದರವೇ ಪಡದೇ ಮಾಡತೀನಿ. ಅಲ್ಲಾ ಮತ್ತ ನಾ ಪ್ರಿಂಟಿನ ಪತ್ಲಾ ಉಟಗೊಂಡಾಗೊಮ್ಮೆ ಛಂದ ಕಾಣಸತೇನಿ ಅಂತ ಚಹಾದ ಕೈ ಒರಸಲಿಕ್ಕೆ ಬರತಿದ್ದಿರಿ. ನಾಳೆ ದಿನಕ್ಕ ಹತ್ತಬ್ಯಾರೆ ಪಡದೇಕ್ಕ ಕೈ ಒರಸಲಿಕ್ಕೆ ಹೋದೀರಿ.

ಹುಚ್ಚಿ ಅಂದೀರಿ ಮತ್ತ ನನಗ. ನಾನಾರೆ ಏನು ಮಾಡ್ಲಿ ? ನನ್ನ ಮನಸ್ಸಿನೊಳಗಿನ ಆಸ್ಥಾ ಎಲ್ಲಾ ನಿಮುಗ ತಿಳಿಸಿಬಿಟ್ಟೇನಿ. ಅಂತೂ ಮುಂದಿನ ಶ್ರಾವಣಮಾಸದ ಕಿಂತಾ ಮುಂಚೇನ್ಸ ಮನಿ ಮಾಡಿಬಿಡಿರಿ. ಅಷ್ಟರೊಳಗ ಬಾಣಂತಿತನಾನೂ ಮುಗಿದಿರತದ. ಮೂರರಾಗ ಗುಡಿಗೆ ಹೋಗಿ ಬಂದು ಬಿಡತೇನಿ. ಇಲ್ಲದಿದ್ದರ ಮತ್ತ ಅಪ್ಪ 'ಐದರಾಗ, ಯೋಳರಾಗ ಹೋಗು' ಅಂತ ಕೂಡತಾನ. ಮಕ್ಕಳು ಎಷ್ಟು ದಿವಸ ತೌರಮನಿ ಮಾಡಿದರೂ ಸಾಲದು ಆತಗ. ಆದರ ಮಾಡಿಕೊಂಡವರ ಸಲುವಾಗಿ ನಮ್ಮ ಜೀವ ಎಷ್ಟು ಚಡಪಸತಿರತ್ತದ ಇದಾರೆ ಗೊತ್ತಿದ್ದರೆ ಚಿಂತಿಲ್ಲ.

ಹ್ಯಾಂಗದ ಮುಸಾಲಿ ದೋಸಿ? ಹೊಸಾ ಕಥಿ ಬರದೇನಿ ಅಂದಿರೆಲ್ಲ? ನಿಮ್ಮ ಹೆಂಡತ್ಯಾಗಿ ನಾನೂ ಮಂದೀ ಹಾಂಗ ಛಾಪಿಸಿ ಬಂದ ಮ್ಯಾಲೆ ಓದ ಬೇಕೇನು? ನಿಮ್ಮ ಕಡೀಗೆ ಒಂದು ಪ್ರತಿ ಇರತsದಲ್ಲ, ಅದನ್ನೇ ಕಳಿಸಿರಿ. ಈ ಸಾರೆ ನಿಮಗೆ ಪ್ರತಿ ಯಾರು ಮಾಡಿಕೊಟ್ಟರು? ನೀವೇ ಕೂತು ಬರದಿರಾ? ನಿಮ್ಮ ಎಲ್ಲಾ ಚಟುವಟಿಕೀನೂ ಬರೀರಿ.

ನಿಮ್ಮ ಜೀವದ ಜೀವ,
— ಜಾನಕಿ

*   *   *   *

ಬೆಳಗಾಂವಿ
.........

ಮನೋರಮೆಗೆ,

ಮುದ್ದಣನ ಮಧುರ.......ಗಳು. ನಿನ್ನೆ ಶಾಲೆಯಲ್ಲಿ ಪಾಠ ತೆಗೆದು ಕೊಳ್ಳುವಾಗ ಸ್ಥಳ ಬಿಟ್ಟಲ್ಲಿ ಶಬ್ದ ತುಂಬರಿ ಅಂತ ಒಂದು 'ಎಕ್ಸರಸಾಯಿಜ' ಕೊಟ್ಟಿದ್ದೆ. ನಿನ್ನ ಪತ್ರ ಈ ಸಲ ಹೇಗೆ ಆರಂಭಮಾಡಬೇಕು ಎಂದು ವಿಚಾರ ಹಾಕುತ್ತಿದ್ದಾಗ ಮೇಲಿನಂತೆ ಎಂದು ಹೊಳೆಯಿತು. ಹುಡುಗರಿಗೆ ಪಾಠ ಹೇಳುವಾಗ ಶಬ್ದ ತುಂಬುವ ವಾಕ್ಯದಲ್ಲಿ ಇದೇ ಎಲ್ಲಿ ಬಂದುಬಿಡುವುದೋ ಎಂದು ಗಾಬರಿಯಾಗಿತ್ತು.

ನಿನ್ನೆ ಇಲ್ಲಿ ಬಾಂಬೇ ಟಾಕೀಜನವರ 'ಪುನರ್ಮಿಲನ' ಎಂಬ ಚಿತ್ರ-ಪಟ ಬಂದಿತ್ತು. ನಿನ್ನ ಪತ್ರವೂ ಬಂದಿತ್ತು. ಓದಿ ನನ್ನ ಹೊಟ್ಟೆ ತುಂಬಿ ಹರುಷ ಹೊರಸೂಸಿತ್ತು. ಅಂತೇ ಸಿನೇಮಕ್ಕೆ ಹೋದೆ. ಆದರೆ ಜಾನಕಿ, ನೋಡಲು ಏನೂ ಮನಸ್ಸಾಗಲಿಲ್ಲ—ನೀನಿಲ್ಲದೆ. ಎಂತಹ ಮಧುರ ಗೀತ! ಎಂತಹ ಸೊಗಸಾದ ಕತೆ! ನೀನಿದ್ದರೆ ಹಾಡು ಕೇಳಿ ಹುಚ್ಚಳಾಗಿಬಿಡುತ್ತಿದ್ದೆ. ಆದರಲ್ಲಿಯೂ 'ಆವೊ ಬನಾಯೆ ಘರವಾ ಪ್ಯಾರಾ। ಪ್ಯಾರಾ ಪ್ಯಾರಾ ಜಗಸೇ ನ್ಯಾರಾ'—ಎಂಬ ಹಾಡು, ನಿನ್ನ ಪತ್ರದ ಪಡಿಯಚ್ಚೇ ಆಗಿತ್ತು. ಹಾಡು ಕೇಳುವಾಗ ನಿನ್ನ ಪತ್ರದ ನೆನಪು. ಮರಳಿ ನಿನ್ನ ಪತ್ರ ಓದುವಾಗ ಹಾಡಿನ ನೆನಪು.

ಮೊನ್ನೆ ಚಾದಂಗಡಿಯಲ್ಲಿ ಕೂತಾಗ 'ಕುಂಕೂ' ಸಿನೇಮಾದೊಳಗಿನ 'ಏಕ ಹೋತಾ ರಾಜಾ। ಏಕ ಹೋತಿ ರಾಣಿ' ಎಂಬ ಹಾಡು ಹಚ್ಚಿದ್ದರು. ನೆನಪಿದೆಯೆ ? ಆಗ ನಾನು ಎಂ. ಎ.ದಲ್ಲಿ ಅಭ್ಯಾಸ ಮಾಡುತ್ತಿದ್ದೆ. ಕೊಲ್ಹಾ-ಪುರದಿಂದ ನಿನಗೆ ಪತ್ರ ಬರೆದಿದ್ದೆ—'ಕುಂಕೂ' ಸಿನೇಮ ನೋಡಿ ಕಣ್ಣೀರು ಹಾಕಿ ಬಂದೆ—ಎಂದು. ಆಮೇಲೆ ನಾನು ಎಂ. ಎ. ಮುಗಿಸಿ ಬಂದ ಮೇಲೆ ಧಾರವಾಡಕ್ಕೂ ಬಂದಿತ್ತು. ಇಬ್ಬರೇ ರಾತ್ರಿ ಟಾಂಗಾ ಮಾಡಿಕೊಂಡು ಹೋಗಿದ್ದೆವು. 'ಬಾಲ್ಕನಿ' ಟಿಕೀಟು ತೆಗೆದಿದ್ದೆ. ಬರುವಾಗ ಬೆಳದಿಂಗಳು ಹರವಿತ್ತು. ಮತ್ತೆ ಟಾಂಗಾ ಮಾಡಿಕೊಂಡೇ ಬಂದೆವು. ಭಗ್ಗನೆ ರಾತ್ರಿ-ರಾಣಿಯ ವಾಸನೆ ಬಡೆದಾಗ, ನಾನು ನಿನ್ನ ಭುಜದ ಮೇಲೆ ಕೈಯಿಟ್ಟೆ. ನೀನು 'ಏಕ ಹೋತಾ ರಾಜಾ। ಏಕ ಹೋತಿ ರಾಣಿ' ಎಂಬ ಹಾಡು ಗುಣುಗುತ್ತಿದ್ದೆ. ನನ್ನ ಕೈ ಸರಿಸಿ—'ಇದೇನು ಚೆಂದ ರಸ್ತೇದೊಳಗ—' ಎಂದು ಮುಖ ಮುದುರಿಸಿದೆ. ಆಗ ನಾವು ರಾಜಾರಾಣಿಯಾಗಿದ್ದೆವೆಂಬು ದನ್ನು ನೀನು ಮರೆತುಬಿಟ್ಟಿದ್ದೆ. ಉದ್ದಕ್ಕೂ ಹಬ್ಬಿದ ಮುಗಿಲಮಲ್ಲಿಗೆಯ ಗಿಡ ಗಳ ಸಾಲಿಗೆ ಕವಿನೆರಳು ಬಿದ್ದಿತ್ತು. ಬೆಳುದಿಂಗಳಿಗೆ ಆಸ್ಪದವಿರಲಿಲ್ಲ. ಆ ಕವಿನೆರಳಿನಲ್ಲಿ ಕವಿಯ ಸ್ಫೂರ್ತಿ ಮತ್ತೆ ಉಕ್ಕಿತ್ತು. ನೆನಪಿದೆಯೆ ?

ಇಂದಿಗೂ 'ಏಕ ಹೋತಾ ರಾಜಾ' ಎಂಬ ಹಾಡು ಕೇಳಿದಾಗ, ರಾತ್ರಿರಾಣಿಯ ವಾಸನೆ ಬಡಿದಾಗ, ಮೈ ಜುಂ ಎಂದು ಹೋಗುತ್ತದೆ. ಆದ ರೇನು ಮಾಡುವುದು?—'ಪುನರ್ಮಿಲನ' ಇನ್ನೂ ಎಂದಿಗೊ ಎಂದು ಕ್ಯಾಲೆಂಡರ ನೋಡುವುದೇ ಆಗಿದೆ ನನ್ನ ಹಣೇಬರಹ. ಇಂತಹ ವೇಳೆಯಲ್ಲಿ ನೀನು ಖೊಕ್ಕನೆ ನಕ್ಕರೆ ಕೆನ್ನೆಗೇ ಏಟು ಕೊಟ್ಟೇನು ?

ನನ್ನ ಕತೆ ಕಳಿಸಿದ್ದೇನೆ. ನಿನ್ನ ಬಳಿಗೆ ಅದನ್ನು ಭದ್ರವಾಗಿರಿಸಿಕೋ. ಅದನ್ನು ಪ್ರತಿ ಮಾಡಿದವರು ಯಾರು ಎನ್ನುವಿಯಾ ? ಬಿ. ಟಿ. ಕಾಲೇಜಿನ ಶಾಲೆ ಇದೆಯಲ್ಲ, ಶಾಲೆಯ ಒಬ್ಬ ಶಿಷ್ಯಿಣಿ. 'ಪ್ರಿಯಂವದಾ' ಆಕೆಯ ಹೆಸರು. ಕನ್ನಡಿತಿ. ಒಳ್ಳೇ ಚಾಣಾಕ್ಷೆ. ಚಾಣಾಕ್ಷೆಯೆಂದು ಅವಳ ಕಣ್ಣು ಮೇಲೇ ಓದಿಕೊಳ್ಳಬಹುದು. ಹೋಗಲಿ. ಪ್ರತಿಮಾಡಿದ ವ್ಯಕ್ತಿಯ ವರ್ಣನೆ ಇಷ್ಟೇಕೆ, ನಹಿಪ್ರತಿಯೆನಿಸುವಷ್ಟು ? ಕತೆ ಹ್ಯಾಗಿದೆ ತಿಳಿಸು.

ಬೇಗನೆ ಈ ಬಿ. ಟಿ. ಯ ಕಾಟವೊಂದು ತಪ್ಪಿತೆಂದರೆ ನೀನು ಹೇಳಿ

ದಂತೆ ನಳರಾಜನಿದ್ದ ಊರನ್ನೇ ಹುಡುಕುವೆ. ಬೆಳಗಾವಿಯಲ್ಲಿ ನಳವಿಲ್ಲ. ಪುಣೆ, ಮುಂಬಯಿಯಲ್ಲಿ ಕನ್ನಡವಿಲ್ಲ. ನಳವೂ ಬೇಕು, ಕನ್ನಡವೂ ಬೇಕು, ಅಂದರೆ ಹುಬ್ಬಳ್ಳಿ, ಧಾರವಾಡ. ಹೇಳು ಎಲ್ಲಿ ನೌಕರಿ ನೋಡಲಿ ?

ಹುಂ ! ನಗೆ ಬರುತ್ತದೆ ನೋಡು. ಬೇಕೆಂದಲ್ಲಿ ಸಿಗಲಿಕ್ಕೆ ನೌಕರಿ ಅಂದರೇನು ಲೌಕರಿಯ ಲಡಿಯೆ ! ಅದು ಕೂಡ ಅಪರೂಪ ಈ ತುಟ್ಟಿಯ ದಿನಗಳಲ್ಲಿ. ಏಕೆಂದರೆ ಯುದ್ಧ ಆರಂಭವಾಗಿ ಉಣ್ಣೆಯೆಲ್ಲಾ ರಣರಂಗಕ್ಕೇ ಹೋಯಿತು. ಚಳಿಯಲ್ಲಿ ನಡುಗುವ ವೀರ (ವಿರಹ) ಯೋಧರಿಗಾಗಿ. ಸುಮ್ಮನೆ ಮಿಲಿಟರಿ ಖಾತೆಯಲ್ಲಿ ನೌಕರಿ ನೋಡಿಬಿಡಲೇ ಎನಿಸುವುದು. ಸಮುದ್ರದಾಚೆ ಕಳಿಸಿದರೂ ಚಿಂತೆಯಿಲ್ಲ. ಇಲ್ಲ, ಜಾನಕಿ—ಇಲ್ಲ. ಮೊದಲೇ ನೀನು ಬೆದರುವ ಸ್ವಭಾವದವಳು. ಸರಿ, ಬೇಗನೆ ಬಿ. ಟಿ. ಮುಗಿಸಿ ಆದಷ್ಟು ಬೆಳಗಾವಿಯಲ್ಲೇ ನೌಕರಿ ಹಿಡಿಯುತ್ತೇನೆ. ಬೇಗನೆ 'ಏಕಾ ಬಂಗಲ ಬನೆ ನ್ಯಾರಾ' ಎಂದು ಹಾಡುತ್ತೇನೆ, ಆಯಿತೆ ? ನೀನು ನಿನ್ನ ಹೆತ್ತನಿಬ್ಬಣ ದೊಂದಿಗೆ ಬೆನ್ನಿಗೆ ತೊಟ್ಟಿಲು ಕಟ್ಟಿಕೊಂಡು ಬೇಗ ಬರುವಿಯಂತೆ.

ಹೌದು, ನನಗೂ ಆಸೆಯಿತ್ತು, ಎಂ. ಎ. ಆಗಬೇಕು, ಪ್ರೊಫೆಸರನಾಗ ಬೇಕು, ಸೂಟು ಬೂಟಿನಲ್ಲಿ ಓಡಾಡಬೇಕು ಎಂದು. ಆದರೆ ನಿನ್ನ ಕಸ್ತೂರಿ, ಕನ್ನಡ ಕಸ್ತೂರಿ ಕಂಪು ಬೀರದೆ ಹೋದೀತೆ ? ಆ ವಿಶ್ವಾಸ ನನಗಿದೆ ಜಾನಕಿ. ಜಾನಕಿಯನ್ನು ರಾಣಿಯಂತೆ ಇಡುವೆ. ಜಾನಕಿ ನನ್ನ ಸ್ವಪ್ನಸಾಮ್ರಾಜ್ಯದ ಸಾಮ್ರಾಜ್ಞಿ. ನನ್ನ ಕನಸಿನ ರತ್ನೂರ ಚೆನ್ನಮ್ಮ. ಪಗಾರ ಎಷ್ಟಿದ್ದರೇನು ? ಮುದ್ದಣ ಮನೋರಮೆಯಂತೆ ಇರೋಣ. ಹಿಂದಿನ ನಿರಾಸೆಯ ಕತ್ತಲನ್ನು ನೆನೆದು ಕಂಗೆಡುವುದು ಬೇಡ, ನಾಳಿನ ಬಂಗಾರದ ಅರುಣೋದಯ ನೆನೆದು ಉದಯರಾಗ ಹಾಡೋಣ. ಕೇಳಿಲ್ಲವೆ ?

"ನಾನೂ ಬಡವಿ ಆತಾ ಬಡವಾ | ಒಲುವೆ ನಮ್ಮ ಬದುಕೂ
ಬಳಸಿಕೊಂಡೆವದನೆ ನಾವು | ಅದಕು ಇದಕು ಎದಕು.
ಹೆಚ್ಚುಕಡಿಮೆ ತೋರಲಿಲ್ಲ ಬೇಕು ಹೆಚ್ಚಿಗೇನು;
ಹೊಟ್ಟೆಗಿತ್ತು ಜೀವಫಲವ ತುಟಿಗೆ ಹಾಲು-ಜೇನು."

ನಿನ್ನ,
ಕಸ್ತೂರಿ

ಧಾರವಾಡ

........ ........

ನನ್ನ ಮುದ್ದಣನಿಗೆ,

ನಿಜವಾಗಿಯೂ ಈ ಕಸ್ತೂರಿಯನ್ನು ಎಲ್ಲಿ ಕದ್ದಿಡಲೋ ತಿಳಿಯದಾಗಿದೆ. ಎಲ್ಲಿಂದಲೊ ವಾಸನೆ ಬಡಿದು ಯಾರೋ ಬಂದು ಎತ್ತಿಕೊಂಡು ಹೋದರೆ? ನನ್ನ ಕಸ್ತೂರಿ ನನ್ನ ಹೃದಯದ ಟ್ರಂಕಿನೊಳಗೇ ಇರಲಿ.

ಹೌದು, ನಿಮ್ಮ 'ಪ್ರಿಯಂವದೆ' ಬಹಳ ಚತುರಳಿರಬೇಕು. ಚೆಲುವೆಯೂ ಇರಬೇಕು. ಅಕ್ಷರಗಳಂತೂ ಮುತ್ತು ಪೋಣಿಸಿದಂತಿವೆ! ಅಂತೂ ಎಷ್ಟು ಭಕ್ತಿಯಿಂದ ಬರೆದುಕೊಟ್ಟಿದ್ದಾಳೆ ನಿಮ್ಮ ಪ್ರಿಯ–ವಧೆ! ಇನ್ನು ಮುಂದೆ ಎಲ್ಲಾ ಪ್ರತಿಗಳನ್ನೂ ಅವಳೇ ಮಾಡಿಕೊಡಲಿ. ಚೆನ್ನಾಗಿ ಬರೆಯುತ್ತಾಳೆ. ಬೇಕಾದರೆ ಖರಡು ತೀಡುವವಳು ಅಂತ ಪಗಾರ ಕೊಟ್ಟು ಮನೆಯಲ್ಲೇ ಇಟ್ಟುಕೊಂಡರೂ ಅಡ್ಡಿಯಿಲ್ಲ. ಯಾಕಂದರೆ ದಿನಕ್ಕೆ ನೂರು ಪುಟ ಗೀಚಿ ಹಾಕುವ ಗಂಡು ಲೇಖಕರು ನೀವು. ಅಷ್ಟೊಂದು ಭರಾಟೆಗೆ ಹೆಜ್ಜೆ ಹಾಕಬೇಕಲ್ಲ ಮತ್ತೆ? ನಿಮ್ಮ ಪ್ರಿಯಂವದೆಗೆ ನನ್ನ ನಮಸ್ಕಾರ ಹೇಳಿರಿ.

ನಿಮ್ಮ ಗಿರ್ಧಾಂಗಿ,

—ಜಾನಕಿ

*  *  *  *

ಬೆಳಗಾಂವಿ

............

ನನ್ನ ಪೋಣಾಂಗಿಗೆ,

ಇಕೋ ಪ್ರಿಯಂವದೆಯ ಫೋಟೊ ಕಳಿಸಿದ್ದೇನೆ. ಇದಿಷ್ಟು ಫೋಟೊ ದೊರಕಿಸಬೇಕಾದರೆ ಪರಾಕಷ್ಟವಾಯಿತು. ನೋಡು, ಪರಕಾರ ಪೋಲಕ ಹಾಕಿಕೊಂಡು ಹೇಗೆ ನಗುತ್ತ ನಿಂತಿದ್ದಾಳೆ! ಅವಳ ವಯಸ್ಸು ಎಷ್ಟು ಹೇಳು ನೋಡೋಣ? ಹನ್ನೊಂದು ತುಂಬಿ ಹನ್ನೆರಡರಲ್ಲಿ ಬಿದ್ದಿರಬಹುದೆ? ಪ್ರಿಯಂವದೆ ನನಗೆ ತಂಗಿಯೇಕೆ ಮಗಳೂ ಆಗಬಹುದು. ಫೋಟೊ ಪ್ರಿಯಂವದೆಯದೇ ಮತ್ತೆ! ವಿಶ್ವಾಸವಿರಲಿ.

ಹಾ ! ಒಂದು ವಿಷಯ ನೆನಪಾಯಿತು ನೋಡು ಜಾನಕಿ ! ಕಳೆದ ವಾರ ನಮ್ಮ ಕಾಲೇಜಿನಲ್ಲಿ ಕರ್ನಾಟಕ ಸಂಘದ ವಾರ್ಷಿಕೋತ್ಸವ ನಡೆಯಿತು. ಬಹಳ ವಿಜೃಂಭಣೆಯಿಂದಲೆ ನಡೆಯಿತು. ' ಸಂಶಯಪಿಶಾಚಿ ' ಎಂಬ ನಾಟಕ ಮಾಡಿದ್ದೆವು. ನಾನು ' ಹೀರೊ ' ಆಗಿದ್ದೆ. ನಮ್ಮ ಕನ್ನಡ ಮೈತ್ರಿಣಿಯೊಬ್ಬರು—ಮೀನಾಕ್ಷಿ ಎಂದು ಅವರ ಹೆಸರು—' ಹೀರಾಯಿನ್ ' ಆಗಿದ್ದರು. ಮೀನಾಕ್ಷಿ ಹೆಸರಿಗೆ ತಕ್ಕಂತೆ ಮೀನಾಕ್ಷಿಯೆ ಆಗಿದ್ದಾಳೆ. ನಡೆ ನುಡಿಗಳೂ ಅಷ್ಟೆ ಸುಭಗ.

ನಾಟಕಕ್ಕೆ ಜನ ಕಿಕ್ಕಿರಿದು ತುಂಬಿದ್ದರು. ಕನ್ನಡರಂಗಭೂಮಿಯಲ್ಲಿ ಟೋಪಣ ಹಾಕಿದ ಸ್ತ್ರೀಪಾತ್ರಗಳೇ ಅಲ್ಲವೇ? ಆದರೆ ಈ ಸಲ ನಮ್ಮಿಂದಲೆ ಈ ಹೊಸಕ್ರಾಂತಿ ಉಂಟಾಯಿತು. ಕ್ರಾಂತಿ ಮಾಡಿದ ಶ್ರೇಯಸ್ಸು ನಮ್ಮ ದಲ್ಲವೆ ? ಇದು ಕ್ರಾಂತಿಯಾಯಿತು. ಇನ್ನೂ ಮಹಾಕ್ರಾಂತಿ ಮಾಡ ಬೇಕೆಂದಿದ್ದೇನೆ. ಏನು ಗೊತ್ತೆ? ನಾನು 'ಹೀರೊ' ನೀನು 'ಹೀರಾಯಿನ್!' ಸಿದ್ಧಳಾಗಬೇಕು; ತಿಳಿಯಿತಿಲ್ಲೊ.

ನಿನ್ನ
—ಮನೋರಾಮ

* * * *

ಧಾರವಾಡ
............

ಮಾಡುವ ನಮಸ್ಕಾರಗಳು—

ನಿಮ್ಮ ಶಿಷ್ಯಣಿಯ ಫೋಟೊ, ನೋಡಿದೆ. ಆಕೆಯ ವಯಸ್ಸು,ಆಕೆಯ ಫೋಟೊ, ಆಕೆಯ ರೂಪ-ಚೆಲುವಿಕೆ ತಗೊಂಡು ನಾನೇನು ಮಾಡಲಿ ?

ಬೇಕಾದರ ಇನ್ನೂ ಒಂದು ವರುಷ ಮೀನಾಕ್ಷಿಯೊಂದಿಗೆ ನಾಟಕ ಮಾಡುತ್ತ ಅಲ್ಲೇ ಇರ್ರಿ. ಆ ಮಹಾಕ್ರಾಂತಿ ಸಂಕ್ರಾಂತಿ ಎಲ್ಲಾ ನಿಮಗೇ ಇರ್ಲಿ. ನಮಗೇನು ಮಾಡುವದಿದೆ? ನಾವೇನು ಚೆಲುವರಲ್ಲ. ಕಲಿತವರಲ್ಲ. ನನ್ನಂಥವಳ ಕೈ ಹಿಡಿದುದಕ್ಕೆ ನೀವೇನು ಸುಖ ಸುರಿದುಕೊಂಡಿರಿ ? ಎಂ. ಎ. ಬಿ. ಟಿ., ಸೀಟಿ ಆದಾಕಿ ದೊರೆತಿದ್ದರೆ ಮತ್ತೊಂದು ಐವತ್ತ ಸಾರೆ ನಾಟಕಾ, ನಾಚು ಎಲ್ಲಾ ಮಾಡಲಿಕ್ಕೆ ಬರುತ್ತಿತ್ತು.

ಇರಲಿ, ನಾನೇನೊ ಹುಚ್ಚಳಂತೆ ಚಡಪಡಿಸುತ್ತ ದಿನ ಹಾಕುತ್ತಿದ್ದೆ. ಕಸೋತಿ ಬಿಟ್ಟು ಕನಸು ಹೆಣೆಯುತ್ತಿದ್ದೆ. ನಾನೆಂಥಾ ಧಡ್ಡಿ ಅಂತ ನನಗೇ ಅನಿಸತದ. ನಿಮ್ಮಿಷ್ಟಕ್ಕೆ ನೀವು ಸುಖದಿಂದ ಇರ್ರಿ.

ನಿಮ್ಮ,
—ದುರ್ದೈವಿ

* * * *

ಬೆಳಗಾಂವಿ
..........

ಪ್ರೀತಿಯ ಜಾನಕಿ,

ಜಾನಕಿ, ನಾಟಕಾ ಮಾಡೋದು ಅಂದರೆ ನಿನ್ನ ಮುಂದೆ ಕಣ್ಣು ಮುಚ್ಚಾಲೆ ಆಡೋದು, ಸುಳ್ಳು ಹೇಳೋದು ಎಂದು ತಿಳಿದೆಯಾ ? ನೀನು ಪ್ರಿಯಂವದೆಯ ಬಗ್ಗೆ ವಿಪರೀತ ಭಾವನೆ ಮಾಡಿಕೊಂಡಿದ್ದಿಲ್ಲವೆ? ಆಮೇಲೆಯೂ ನಿನ್ನ ಸಿಟ್ಟು, ನಿನ್ನ ಸಂಶಯ ದೂರಾಗಿಲ್ಲವೆಂದು ನಿನ್ನ ಪತ್ರ ಸಾರಿಸಾರಿ ಹೇಳು ತ್ತದೆ. ಇದರ ಮೇಲೆ ' ಸಂಶಯಪಿಶಾಚಿ ' ನಾಟಕದ ವಿಷಯ. ' ಸಂಶಯ ಪಿಶಾಚಿ ' ಎಂಬ ನಾಟಕ ಇಂತಹದೇ ಇತ್ತು ನೋಡು. ಅಂತೇ ವಿನೋದ ಕ್ಕೆಂದು ಬರೆದೆ. ಅದು ವಿಷವಾಯಿತು ನಿನಗೆ. ನಗೆಗಾಗಿ ಬರೆದರೆ ಹೊಗೆ ಯಾಯಿತು ನಿನಗೆ.

ಜಾನಕಿ, ಗಂಡಸು—ಹೆಂಗಸು ಕಾಮುಕ ವಿಷಯವೊಂದನ್ನು ಬಿಟ್ಟು ಇನ್ನೊಂದು ಸಂಬಂಧದಲ್ಲಿ ಕೂಡಲು ಸಾಧ್ಯವೇ ಇಲ್ಲವೆಂದು ನಿನ್ನ ಅಭಿಪ್ರಾ ಯವೆ ? ನನ್ನ ಬಗ್ಗೆ ನೀನು ಸಂಶಯ ತೆಗೆದುಕೊಳ್ಳುವುದೆಂದರೇನು ? ನಾನು ನಿನ್ನನ್ನು ಪ್ರೀತಿಸುವುದಿಲ್ಲ ಎಂದರ್ಥವಲ್ಲವೆ ? ನನ್ನ ಮೈಯೊಳಗಿನ ರಕ್ತದಿಂದ ಬರೆದಂತಿರುವ ನನ್ನ ಓಲೆಗಳು ನಿನಗೆ ನನ್ನ ಪ್ರಾಮಾಣಿಕತನವನ್ನು ತೋರಿಸಿ ಕೊಡುವುದಿಲ್ಲವೆ ? ಜಾನಕಿ, ನನ್ನ ಬಗ್ಗೆ ನೀನು ಇಷ್ಟೊಂದು ಸಂಶಯ

ಪಟ್ಟುಕೊಂಡು ಮುಸಿಯಬೇಕೆ ? ನಾನು ದುಷ್ಟಬುದ್ಧಿಯಿಂದಲೆ, ಕುಹಕ ಸಂಬಂಧಕ್ಕಾಗಿ ಎಳಸಿದ್ದರೆ ನಿನ್ನ ಮುಂದೆ ಕೂಸಿನಷ್ಟು ನಿರ್ಮಲ ಮನಸ್ಸಿನಿಂದ ನಡೆದ ವಿಷಯವನ್ನು ವಿವರಿಸುತ್ತಿದ್ದೆನೆ? ಇದನ್ನೊಂದು ಈಗಳೆ ನೀನು ಚಿವುಟಿ ಒಗೆಯದಿದ್ದರೆ ನಮ್ಮಿಬ್ಬರ ಪ್ರೀತಿಯ ಹಬ್ಬುಗೆಗೆ ಇದೊಂದು ಭೂತವಾಗಿ ನಿಲ್ಲುವುದು. ಸಂಶಯವೃತ್ತಿಯೆಂಬುದು ಮನುಷ್ಯನನ್ನು ಜೀವಂತವಾಗಿ ಕೊಲ್ಲುತ್ತದೆ. ಅದೇ ರೀತಿ ನಾನೂ ನಿನ್ನ ಬಗ್ಗೆ ಸಂಶಯ ತೆಗೆದುಕೊಳ್ಳ ಹತ್ತಿದರೆ ನಾವು ಎಲ್ಲಿ ಹೋಗಿ ಮುಟ್ಟಬಹುದು, ವಿಚಾರಿಸು. ನಿನಗೆ ನನ್ನ ಹಾಗೆ ಸಂಶಯಕ್ಕೆ ಆಸ್ಪದವಿಲ್ಲವೆಂದು ನೀನು ವಾದಿಸಬಹುದು. ಆದರೆ ಸಂಶಯವನ್ನೆ ತೆಗೆದುಕೊಳ್ಳಬೇಕೆಂದು ಹೊರಟ ಮೇಲೆ ಸಂಶಯಕ್ಕೆ ಎಷ್ಟು ಅನ್ನ ಸಿಕ್ಕರೇನು ? ಮಧ್ಯರಾತ್ರಿ ಸಾವಿರ ತರುಣರ ಮಧ್ಯದಲ್ಲಿ ನೀನಿದ್ದರೂ ನನಗೆ ನಿನ್ನ ಆಚಾರದ ಬಗ್ಗೆ ಏನೂ ಸಂಶಯ ಬರಲಾರದೆಂದು ನನ್ನ ನೆತ್ತರದಿಂದ ಬರೆದುಕೊಡುತ್ತೇನೆ. ಸಾವಿರ ತರುಣಿಯರ ಮಧ್ಯದಲ್ಲಿ ನಾನಿದ್ದಾಗ ನಿನಗೆ ಸಂಶಯದ ಸುಳಿವು ಬರಲಾರದೆಂದು ನನ್ನ ಮುಂದೆ ಪ್ರಮಾಣ ಮಾಡಿ ಹೇಳುವಷ್ಟು ಮನಸ್ಸಿನ ಔದಾರ್ಯ, ಗಟ್ಟಿಗತನ ನೀನು ತಂದುಕೊ.

ಜಾನಕಿ, ನನ್ನ ಮನಸ್ಸು ಕನ್ನಡಿಯಂತಿದೆಯೆಂಬುದಕ್ಕೆ ಯಾವ ಪ್ರಮಾಣ ಕೊಡಲಿ ? ನಿನ್ನ ಹೃದಯದಲ್ಲಿ ಮೂಡಿರುವ ನನ್ನ ಪ್ರತಿಬಿಂಬದ ಪ್ರಮಾಣವೇ ಸಾಕಲ್ಲವೆ ? ಇರಲಿ. ನಮ್ಮ ಜೀವನದಲ್ಲಿ ಇದೊಂದು ಸಣ್ಣ ಅನಿಷ್ಟಪ್ರಸಂಗ ಬಂದು ಹೋದುದು ಒಳ್ಳೇದೇ ಆಯಿತು. ಯಾಕೆಂದರೆ ಇಷ್ಟರಿಂದಲೆ ನಮ್ಮ ಮುಂದಿನ ಬಾಳಿನ ನಯವಾದ ಹಾದಿಯಲ್ಲಿ ಬರುವ ತೊಡಕಿನ ಬಳ್ಳಿಯನ್ನು ಸವರಿ ಒಗೆದಂತಾಯಿತು. ಅಲ್ಲವೇ ? ಹಾಗೆಂದು ನಾನು ತಿಳಿಯಲೆ ?

ನಿನ್ನಿಂದ ಒಂದು ಸಮಾಧಾನದ ಓಲೆ ಬರಬಹುದೆ ಜಾನಕಿ ?

ನಿನ್ನ
—ಹೃದಯ ಕನ್ನಡಿ,

* * * *

ಧಾರವಾಡ
........ .. ....

ನನ್ನ ಹೃದಯೇಶ್ವರನಿಗೆ

ನನ್ನಿಂದ ಸರ್ವಥಾ ತಪ್ಪಾಯಿತು. ಕ್ಷಮಿಸುವಿರಾ ? ನಿಮ್ಮ ಆವೇಶದ ಪತ್ರ ಓದಿದ ಹಾಗೆಲ್ಲ ಕಣ್ಣೊಳಗೆ ನೀರು ಧಾರೆಯಿಟ್ಟು ಹರಿಯಹತ್ತಿದವು. ನಿಮಗೆ ನಾನು ಬಹಳ ನೋವು ಮಾಡಿದೆನೆ ? ನನಗೇಕೊ ನೀವು ಇನ್ನೊಬ್ಬ ಳೊಡನೆ ನಾಟಕದಲ್ಲಿ ಪಾರ್ಟ ಮಾಡಿದಿರಿ ಎಂದು ಕೇಳಿ ಏನೊ ಒಂದು ತರಹ ಅನಿಸಿತು. ಅದೇನೋ ನಾನು ಹೇಳಲಾರೆ. ನಾನು ಪ್ರೀತಿ ಮಾಡುವ ವಸ್ತು ನನ್ನದಾಗಿಯೆ ಉಳಿಯಬೇಕೆಂದು ನಾನು ಬಯಸಿದರೆ ನನ್ನ ತಪ್ಪೆ ? ನೀವು ನನ್ನ ಬಗ್ಗೆ ವಿಶ್ವಾಸದಿಂದಿರುವಿರೆಂಬ ಬಗ್ಗೆ ಏನೂ ಪ್ರಮಾಣ ಬೇಡ. ಸಾವಿರ ಹೆಂಗಸರ ಮಧ್ಯದಲ್ಲಿ ನೀವಿದ್ದರೆ ಸಂಶಯ ತೆಗೆದುಕೊಳ್ಳಬಾರದೆಂದು ಹೇಳು ತ್ತೀರಿ. ಆದರೆ ಗಂಡಸರ ಮನಸ್ಸೆಂದರೆ ಬೆಂಕಿಯ ಮುಂದಿನ ಬೆಣ್ಣೆಯಿದ್ದ ಹಾಗೆ. ಕರಗದೇ ಬಿಟ್ಟೀತೆ, ನೀವೇ ಹೇಳಿರಿ? ಸಾವಿರ ಹೆಂಗಸರ ಮಧ್ಯದಲ್ಲಿ ನಿಂತೂ ತಪಶ್ಚರ್ಯ ಮಾಡಿ ಹೊರಗೆ ಬರುವದಕ್ಕಿಂತ ಆ ಉಸಾಬರಿಯನ್ನೆ ಬಿಟ್ಟುಬಿಡುವುದು ಒಳ್ಳೇದಲ್ಲವೆ? ಇದೇನೊ ನನಗನಿಸಿದ ಮಾತು. ನಾನೇನೂ ನಿಮ್ಮಷ್ಟು ಓದಿದವಳಲ್ಲ, ಚೆಲುವೆಯಲ್ಲ.

ಇರಲಿ. ಆದದ್ದಾಯಿತು. ಸುಳ್ಳೇ ರಸಕಸಿ ಯಾಕೆ ? ನಾವಿಬ್ಬರೂ ಸುಖದಿಂದಲೇ ಇರೋಣಂತೆ. ಆಯಿತೆ ? ಇನ್ನು ಬಹುಶಃ ನನಗೆ ಪತ್ರ ಬರೆ ಯಲಿಕ್ಕೆ ಸವಡು ಆಗಲಿಕ್ಕಿಲ್ಲ. ಯಾಕೆಂದರೆ ತೀರ ದಿನದೊಳಗೆ ಇದ್ದೀನಿ. ಬೇಗನೆ ನಿಮ್ಮ ಬಿ. ಟಿ. ಪರೀಕ್ಷೆ ಮುಗಿಸಿಕೊಂಡು ಬರ್‍ರಿ.

ನಿಮ್ಮ ಹಿಂದಿನ ಪತ್ರದೊಳಗೆ ನಾವು 'ಕುಂಕೂ' ಸಿನೇವಾಕ್ಕೆ ಹೋಗಿದ್ದ ವರ್ಣನೆಯನ್ನೆಲ್ಲಾ ಓದಿ ನನಗೇ ಮೋಜು ಎನಿಸಿತು. 'ಪುನ ರ್ಮಿಲನ' ಬೆಳಗಾವಿಯಲ್ಲೇ ನೋಡೋಣಂತೆ. ನಾವಿಬ್ಬರೇ ಇರುತ್ತೇವೆ. ಹೌದು, ಹೊಸಾ ಅರ್ಧಾ ತಿಕೀಟೊಂದು. ಬೇಕಾದಲ್ಲಿಗೆ ತಿರುಗಾಡಲಿಕ್ಕೆ ಹೋಗ

ಬಹುದು. ಬೆಳಗಾವಿಯಲ್ಲೇ ನೌಕರಿ ನೋಡಿರಿ. ತಾರು ಬಂದ ಕೂಡಲೇ ಒಮ್ಮೆ ಬಂದು ಹೋಗಿರಿ, ಲೈನಬಜಾರ ಫೇಡೆ ಒಯ್ಯಲಿಕ್ಕೆ. ತಿಳಿಯಿತೇನು ?

ನಿಮ್ಮ ಅರ್ಧಾಂಗಿ

—ಜಾನಕಿ

* * * *

ಬೆಳಗಾಂವಿ

..........

ಜಾನಕಿ,

ಅಂತೂ ಗಂಡುಮಗುವಿನ ತಾಯಿ ಆದೆಯಾ ? ತಾಯಿ ಮಕ್ಕಳು ಆರೋಗ್ಯದಿಂದಿದ್ದೀರಷ್ಟೆ ? ಯಾರ ಹಾಗೆ ಇದೆ ಮಗು ? ಇಬ್ಬರ ಹಾಗೂ ಇದ್ದರೆ ಬರ್ನಾರ್ಡ ಶಾ ಓರ್ವ ಮಹಿಳೆಗೆ ಹೇಳಿದಂತೆ ನಿನ್ನ ವೈಮಾಟ ನನ್ನ ಬುದ್ಧಿ ಇರಲಿ. ನನ್ನ ವೈಮಾಟ ನಿನ್ನ ಬುದ್ಧಿ ಬೇಡ! ಇದು ಚೇಷ್ಟೆ ಮತ್ತೆ! ಚೇಷ್ಟೆ ಎಂದು ಸ್ಪಷ್ಟ ಮಾಡದಿದ್ದರೆ ಚೇಳು ಕಡಿದವರಂತೆ ಮತ್ತೆ ಗಂಗಾ-ಯಮುನಾ ಪ್ರತ್ಯಕ್ಷವಾದಾರು !

ಇರಲಿ. ಮಗುವಿಗೆ ಹೆಸರೇನು ? ಸೊಗಸಾದ ಹೆಸರು ಬೇಡವೆ ? 'ಮೋಹನ' ಎಂದಿರಲಿ. ಯಾಕೆ ಒಪ್ಪಿಗೆಯಾಗಲಿಲ್ಲವೆ ? ಅಥವಾ ದೇವರ ನಾಮವಿರಲೇಬೇಕೆಂದು ಸಂಕಲ್ಪವಿದ್ದರೆ ಹಾಗೂ ಆಗಲಿ. ಕರೆಯುವುದು 'ಮೋಹನ' ಎಂದರಾಯಿತು.

ನನ್ನ ಪರೀಕ್ಷೆಯೂ ಸಮೀಪಕ್ಕೆ ಬಂತು. ಶೀಘ್ರದಲ್ಲೇ ಹಾರಿ ಬರುವೆ, ಸಾರಿ ಬರುವೆ. ತೀರ್ಥರೂಪರು ಬರಲಿದ್ದಾರೆಂದು ತಿಳಿಸು ಚಿರಂಜೀವನಿಗೆ.

ನಿನ್ನ

—ಶ್ರೀರಾಮಚಂದ್ರ

* * * *

ಬೆಳಗಾಂವಿ
........

ಮೋಹನಕಿ ಮಾ,

ಹೊಂ! ಹಿಂದೀ ಚಿತ್ರಗಳಲ್ಲೆಲ್ಲಾ ಹೆಂಡತಿಯನ್ನು ಕರೆಯುವುದು ಹೀಗೆಯೆ! ನಗೆ ಬಂತಲ್ಲವೆ ನಿನಗೆ? ನಿನ್ನ ಮಗನೂ ನಗುತ್ತಿದ್ದಾನೇನು ಮತ್ತೆ? ಅವನಿಗೇನು. ಯಾವಾಗಲೂ ಮರುಳಿ ನಗಿಸುತ್ತಿರಬಹುದು. ನಿನಗೆ ಯಾವ ಮರುಳಿ ನಗಿಸುತ್ತಿದೆಯೆನ್ನಬೇಕು? ಇರಲಿ. ತಾಯಿ-ಮಗ ಹೀಗೇ ಸದಾ ಹಸನ್ಮುಖಿಗಳಾಗಿಯೆ ಇರಲಿ ದೇವರೆ ಎಂದು ಬೇಡಿಕೊಳ್ಳುವೆ.

ಯಾಕೆ ಗೊತ್ತೆ ಜಾನಕಿ? ಮಗನು ಹುಟ್ಟಿದ! ನಮ್ಮ ಜೀವನ ಗ್ರಂಥ ಮಾಲೆಯ ಪ್ರಥಮ ಪ್ರಕಟನೆಯಿದು. ಮೊದಲನೆಯ ಪುಷ್ಪ! ಮಗನ ತಂದೆ ಯಾದ ನಾನು ಇನ್ನೂ ನನ್ನ ವಿದ್ಯಾರ್ಥಿದೆಸೆಯಲ್ಲೇ ಇದ್ದೇನಲ್ಲ? ಸಂಸಾರ ಬೆಳೆಯಹತ್ತಿತು. ಸಂಸಾರದ ಹೊಣೆ ಹೆಚ್ಚುತ್ತ ಬಂತು. ಹೊಣೆಯನ್ನು ಹೊರುವ ನೀಗುವ ಶಕ್ತಿ ಮಾತ್ರ ಇನ್ನೂ ಬರಲೊಲ್ಲದಾಗಿದೆ ಜಾನಕಿ.

ನಿನ್ನೆ ರೇಸಕೋರ್ಸಿನತ್ತ ತಿರುಗಾಡಲಿಕ್ಕೆಂದು ಹೊರಟಿದ್ದೆ. ತಿರುಗಾಟ ದಲ್ಲೆಲ್ಲ ಇದೇ ವಿಚಾರದ ಸುಳಿಯಲ್ಲಿ ಸಿಕ್ಕಿದ್ದೆ. ವಿಚಾರಭರದಲ್ಲಿ ಇಂತಹ ರೇಸಕೋರ್ಸನ್ನು ಹೇಗೆ ಸುತ್ತಿ ಬಂದೆನೆಂಬುದು ತಿಳಿದಿರಲಿಲ್ಲ. ದಿನ ಬೆಳಗು ವುದರೊಳಗೇ ಹೊಸ ಜೀವನದ ರೇಸಕೋರ್ಸ ಸುರುವಲ್ಲವೆ ಜಾನಕಿ? ಅದನ್ನು ಹೇಗೆ ಈಸುವುದು, ಹೇಗೆ ಸವಿ ಮಾಡುವುದು ಎಂಬುದೆ ನನ್ನ ವಿಚಾರವಾಗಿತ್ತು. ಎಡಬಲಕ್ಕೆ ಮರಗಳು ದಟ್ಟನಾಗಿ ಇಂಬಾಗಿ ಹಬ್ಬಿಕೊಂಡಿ ದ್ದವು. ಮರಗಳ ಸಂದುಗಳೊಳಗಿಂದ ಚಂದ್ರನ ಕಿರಣಗಳನ್ನು ನೋಡಿದಾಗ ಫಕ್ಕನೆ, ಮೋಡಗವಿದ ಮನಸ್ಸಿಗೆ ಸುಖದ ವಿಚಾರ ಕಿರಣ ಹೊಳೆದು ಮನಸ್ಸು ಬೆಳಕು ಕಂಡಂತೆನಿಸುತ್ತಿತ್ತು........ಹೌದು, ನಾನಿನ್ನುಮೇಲೆ ನಿರುದ್ಯೋಗಿ ಯಾಗಿ ಉಳಿಯಲಿಕ್ಕಿಲ್ಲ. ಬಿ. ಟಿ. ಆದರೆ ಯಾವ ಶಾಲೆಯಲ್ಲೂ ಶಿಕ್ಷಕ ವೃತ್ತಿಗೇನೂ ಕೊರತೆಯಿಲ್ಲ........ಎನ್ನುತ್ತ ದಾರಿ ಸಾಗುತ್ತಿರುವಾಗ ಮತ್ತೆ ವಿಚಾರ. ಆದರೆ ನಾನು ಗಳಿಸಬಹುದಾದರೂ ಎಷ್ಟು?........ಬಿ. ಟಿ. ಆಗಿರುವನೆಂದು ಬಹಳಾದರೆ ನಾಲ್ವತ್ತೈದು ರೂಪಾಯಿ!

………ಹೀಗೇ ಹಾದಿ ಸಾಗುತ್ತ ರೇಸಕೋರ್ಸ ದಾಟಿ ಊರೊಳಗೆ ಬಂದೆ. ಎಡಬಲದ ಬೀಡಿಯ ಅಂಗಡಿಗಳಲ್ಲಿ ಗಂಡು-ಹೆಣ್ಣಾಳುಗಳು ಬೀಡಿ ಕಟ್ಟುತ್ತ ಹಾಡು ಹೇಳುತ್ತಿದ್ದರು. ಕ್ಷಣ ಹೊತ್ತು ನಿಂತು ಯೋಚಿಸಿದೆ. ಈ ದಿನಗೂಲಿಗಳಿಗಿಂತ ನಾನೇನು ಹೆಚ್ಚು ಗಳಿಸುತ್ತೇನೆ ? ಇವರಿಗಿರುವ ಸುಖ-ಸಂತಸಗಳು ನನಗಿವೆಯೆ ? ಇಮ್ಮಡಿ ಮೂರುಮಡಿ ಗ್ರ್ಯಾಜುಯೇಟ ಆದರೂ ಸಾಕಷ್ಟು ಸುಖ, ಹಣ ಗಳಿಸುವ ಶಕ್ತಿ ನನಗಿಲ್ಲ. ಈ ಕೂಲಿಗಳಿಗಿಂತಲೂ ಕೀಳೇ ನನ್ನ ಬಾಳು ? ನಾನಿಟ್ಟುಕೊಂಡಿದ್ದ ಗುರಿಯೇನು ? ಕಟ್ಟಿಕೊಂಡಿದ್ದ ಕನಸೇನು ?…………ಶಿಕ್ಷಕನು ನಾಳಿನ ನಾಗರಿಕತೆಯ ಶಿಲ್ಪಿಯಂತೆ ! ಎಳೆಯ ಮಕ್ಕಳನ್ನು ಆದರ್ಶ ನಾಗರಿಕರನ್ನು ಮಾಡುವ ಪ್ರತಿಬ್ರಹ್ಮನಂತೆ ! ಅಂತೇ ಅವನ ಹೊಣೆ ತಂದೆತಾಯಿಗಳಿಗಿಂತಲೂ ಹೆಚ್ಚಿನದು. ಅಂತೆಯೇ ಶಿಕ್ಷಕವೃತ್ತಿ ಯಾವ ವೃತ್ತಿಗಿಂತಲೂ ಉದಾತ್ತವಾದದ್ದು……… ದಿನವೂ ಪ್ರಾಧ್ಯಾಪಕರು ಹೇಳುವ ಶ್ರುತಿಮಂತ್ರವಿದು. ಶಿಕ್ಷಕರು ಮತ್ತೊಂದು ಕಡೆ ನೌಕರಿಗೆ ಗತಿಯಿಲ್ಲದೆ ಈ ಉದಾತ್ತ ಧ್ಯೇಯದತ್ತ ಹೊರಳಿದ್ದಾರೆ ಎಂಬುದು ಪ್ರಾಧ್ಯಾಪಕರಿಗೆ ಗೊತ್ತಿದ್ದರೂ ಅವರು ತಮ್ಮ ಕರ್ತವ್ಯದಂತೆ ಲೆಕ್ಚರ ಕೊಡಲೇಬೇಕಲ್ಲವೆ ?………ಅಮೇರಿಕಾ, ಚಾಯಿನಾ ದೇಶಗಳಲ್ಲಿ ಶಿಕ್ಷಣಸೌಕರ್ಯಗಳೆಷ್ಟು ? ಶಿಕ್ಷಣದ ಮಟ್ಟವೆಂತಹದು ? ಶಿಕ್ಷಣವು ಪಾಠವಲ್ಲ; ಆಟವೆಂದು ಬಗೆದು ಲೀಲಾಮಾತ್ರವಾಗಿ ಕಲಿಸುತ್ತಾರೆ. ನಮ್ಮಲ್ಲಿ ಶಿಕ್ಷಣವು ಆಟವಲ್ಲ, ಹೊಟ್ಟೆಯ ಹೋರಾಟ !

ಇರಲಿ. ಈ ಒಣಾ ರಗಳೆ ಈಗೇಕೆ ? ' ಹುಟ್ಟಿದ ದೇವರು ಹುಲ್ಲು ಮೇಯಿಸುವನೆ ? ' ಎಂಬ ಗಾದೆಯ ಆಧಾರದ ಮೇಲೆಯೆ ಸುಖದ ಭರವಸೆಯ ಜಾಲವನ್ನು ಹೆಣೆಯುತ್ತಿದ್ದೇನೆ ಆಯಿತು. ಜಾನಕಿ, ನನ್ನ ನೌಕರಿ ಎಂತಹದೇ ಇರಲಿ, ನನ್ನ ಪಗಾರ ಎಷ್ಟೇ ಸಣ್ಣದಾಗಿರಲಿ ಅದನ್ನೆಲ್ಲಾ ಕಾಣುವ ಕಣ್ಣು, ಮನಸ್ಸು ನಿನಗಿದೆ. ನನಗದೇ ಒಂದು ಪರಮ ಸಂತೋಷ.

ಬೇಗನೆ ನಿನ್ನ ಬಳಿ ಬಂದುಬಿಟ್ಟರಾಯಿತಲ್ಲವೆ ? ಆ ಸವಿನೆನಪಿನ ಆಹಾರದ ಮೇಲೇ ಈಗ ಬದುಕುತ್ತಿದ್ದೇನೆ ನೋಡು ಜಾನಕಿ. ಭವಭೂತಿ ' ಉತ್ತರ-ರಾಮ-ಚರಿತ ' ನಾಟಕದಲ್ಲಿ ಒಂದೆಡೆಗೆ ಬಣ್ಣಿಸಿದ್ದಾನೆ, ರಾಮನ ಬಾಯಲ್ಲಿ. ರಾಮಚಂದ್ರನೂ ವನವಾಸದಲ್ಲಿ ಕಳೆದ ರಮಣೀಯ ಸ್ಥಳಗಳ

ನ್ನೆಲ್ಲಾ ಮತ್ತೊಮ್ಮೆ ಕಂಡಾಗ ಒಂದು ರಾತ್ರಿ ದಂಪತಿಗಳಿಬ್ಬರೂ ಪ್ರಣಯದ ರಸನಿಮಿಷಗಳನ್ನು ಕಳೆದ ಬಗೆ ಚಿತ್ರಿಸಿದ್ದಾನೆ. ಪಾಪ, ರಾಮ ಸೀತೆಯನ್ನು ಗೆದ್ದು ತಂದ ಹೌಸಿನಲ್ಲಿದ್ದ. ಸೀತೆಯೊಡನೆ ಸುಖಸಾಮ್ರಾಜ್ಯದ ಪಟ್ಟವನ್ನೇರ ಬೇಕೆಂದಿದ್ದ. ಆದರೆ ವಿಧಿ ಇನ್ನೊಂದು ಬಗೆದು ಅವರನ್ನು ಅಡವಿಗಟ್ಟಿತು. ಹೊಸದಂಪತಿಗಳ ಶೃಂಗಾರ-ಸಂಭ್ರಮವು ವನವಾಸದಲ್ಲೇ ಅವರಿಗೆ ನಂದನ ವನವನ್ನು ತಂದಿತು. ಇಂತಹ ಒಂದು ರಾತ್ರಿ ದಂಪತಿಗಳು ಗಲ್ಲಕ್ಕೆ ಗಲ್ಲ ಹಚ್ಚಿ, ಒಬ್ಬರ ತೋಳ ತೆಕ್ಕೆಯಲ್ಲಿ ಇನ್ನೊಬ್ಬರು ಬಿಗಿಯಲ್ಪಟ್ಟು ಸವಿಸವಿ ಯಾದ ಕಿವಿಮಾತುಗಳಲ್ಲಿ ಕಾಲಕಳೆಯುತ್ತಿರಲು, ರಾತ್ರಿಯೆ ಮುಗಿಯಿತಲ್ಲದೆ ಅವರ ಕಿವಿಮಾತು ಮುಗಿಯಲಿಲ್ಲವಂತೆ! ನಾವೂ ಇಂತಹ ರಾತ್ರಿಗಳನ್ನು ಕಳೆದಿದ್ದೇವಲ್ಲವೆ ಜಾನಕಿ? ವನವಾಸದಲ್ಲಲ್ಲ, ಮನೆಯಲ್ಲಾಗಿರಬಹುದು. ಮನೆಯಲ್ಲೇ ನನ್ನೊಡನೆ ವನವಾಸವನ್ನು ನೀನು ಎಷ್ಟು ಸಲ ಕಳೆದಿಲ್ಲ? ಇನ್ನುಮೇಲೂ ಕಳೆಯಲಿಕ್ಕೆ ನೀನು ಸಿದ್ಧಳಾಗಿಯೆ ಇದ್ದೀ. ನಿನಗೆ ನೆನಪಿ ದೆಯೆ ಜಾನಕಿ? ನಾನು ನಾಲ್ಕೆಂಟು ದಿನ ಹಳ್ಳಿಯ ಮೇಲೆ ಹೋಗಿದ್ದೆ. ನಾಲ್ಕೆಂಟು ದಿನಗಳನ್ನು ನಾಲ್ಕೆಂಟು ವರುಷಗಳಾಗಿ ಕಳೆದೆ. ಒಂದು ಮಧ್ಯಾಹ್ನ ಮನೆಗೆ ಬಂದೆ. ರಾತ್ರಿಯ ವರೆಗೂ ಕಾಲ ಕಳೆಯುವದು ಅಸಾಧ್ಯವಾಯಿತು. ರಾತ್ರಿಯೆ ಯಾಕೆ ಬರಲಿಲ್ಲವೊ ಎನಿಸಿತು. ಅಂತೂ ಸಾಯಂಕಾಲದ ಹೊತ್ತಿಗೆ ಕಸ, ಹಾಸಿಗೆಗೆಂದು ನೀನು ಕೋಣೆಗೆ ಬಂದೆ. ನೀನು ಬಾಗಿ ಕಸ ಗುಡಿಸುತ್ತಿರುವಾಗ ನಾನು ಬೇಗಿ ಬೆನ್ನ ಹಿಂದಿಂದಲೆ ನಿನ್ನನ್ನಪ್ಪಿದೆ. ಆ ಸ್ಪರ್ಶದಲ್ಲಿ ಮೊದಲ ಸ್ಪರ್ಶದ ಮಿಂಚು ಮತ್ತೆ ಬಂದಿತ್ತು! ನಾನೂ ಹಸಿ ದಿದ್ದೆ. ನೀನೂ ಹಸಿದಿದ್ದಿಯೆಂಬುದು ನಿನ್ನ ಮರುಳುನಗೆಯಲ್ಲಿ ಮೂಡಿತ್ತು. 'ನನ್ನಿಚ್ಛೆಯಂತೆ ಇಂದು ನೀನು ಸಿಂಗಾರವಾಗಿ ಬರಬೇಕು' ನಾನೆಂದೆ. ನಗುತ್ತ ಹೂಂಗುಟ್ಟಿದೆ ನೀನು. ನಿನಗೆ ಒಲ್ಲದಿದ್ದರೂ ನನ್ನ ಒಲವಿಗಾಗಿ ಜೋಲು ಮುಡಿ, ಓರೆ ಬೈತಿಲು ಇನ್ನೆಲ್ಲಾ ಬೇಕಾದ ಹುಚ್ಚುಚ್ಚಾರವನ್ನು ನನಗಾಗಿ ಮಾಡಿದೆ ಜಾನಕಿ. ನಿನ್ನ ಗಂಡನಿಗೆ ಯಾವುದು ಮೆಚ್ಚೊ--ಅದು ಹುಚ್ಚು ಎನಿಸಿದರೂ—ನಿನಗೂ ಅದೇ ಮೆಚ್ಚು ಎಂದು ನಂಬಿರುವ ನಿನ್ನ ಪ್ರೇಮವೇ ನನಗೊಂದು ಸಂಜೀವನೌಷಧಿ. ಜಾನಕಿ, ಅಂದಿನ ಆ ರಾತ್ರಿ

ಕಳೆದೆವಲ್ಲಾ, ಅದೂ ಶ್ರೀರಾಮ ಜಾನಕಿಯರು ಕಳೆದ— ‘ ರಾತ್ರಿರೇವ ವ್ಯರಂಸೀತ್ ’ ಎಂಬ ರಾತ್ರಿಯಾಗಿರಲಿಲ್ಲವೆ ? ಹೇಳು ?

ಆದರೆ ಜಾನಕಿ, ಇನ್ನು ನಿನ್ನ ಮೋಹನನ ಕಿರುಚಾಟದಲ್ಲಿ ಆ ರಾತ್ರಿಗಳು ಬರಬಹುದೆ ಎಂಬಂಜಿಕೆ ನನಗೆ ! ಇರಲಿ. ಇದೂ ಒಂದು ಹೊಸ ಸವಿ; ಇದೂ ಒಂದು ಹೊಸ ಸುಖ. ಸುಖದಲ್ಲಿ ರುಚಿ, ವೈವಿಧ್ಯಗಳನ್ನು ಮಾಡಿಕೊಂಡರೆ ಉಂಟು ಇಲ್ಲದಿದ್ದರೆ ಇಲ್ಲ. ಸುಖವು ಕಾಣುವ ಕಣ್ಣಿನಲ್ಲಿದೆ, ವಸ್ತುಸ್ಥಿತಿಯಲ್ಲಿಲ್ಲ.

ನಮ್ಮ ಪ್ರೇಮವು ಬಡತನಕ್ಕೆ ಬೆದರದಿರಲಿ ಜಾನಕಿ. ದುಃಖಕ್ಕೆ ಮಣಿಯದಿರಲಿ, ನೋವಿಗೆ ಹಣಿಯದಿರಲಿ. ಎಂದ ಮೇಲೆ ನನಗೆಷ್ಟು ಪಗಾರ ದೊರಕಿದರೇನು ? ದೈನಂದಿನಲ್ಲೇ ಇಂದ್ರಸೃಷ್ಟಿಯನ್ನು ಮಾಡಬಹುದು.

ನಾನು ನನ್ನ ಬಿ ಟಿ. ಮುಗಿಸಿ ಬರುವ ಮೊದಲೇ ನೀನು ನಾಳಿನ ಸುಖವನ್ನು ಸವಿಯುವ ಕಣ್ಣು-ನಾಲಗೆಗಳನ್ನು ತಿದ್ದಿಕೊಂಡಿರಬೇಕೆಂಬ ಉದ್ದೇಶದಿಂದ ಈ ಪತ್ರ ಇಷ್ಟುಸುದೀರ್ಘವಾಗಿ ಬರೆಯುತ್ತಿದ್ದೇನೆ. ಒಮ್ಮೊಮ್ಮೆ—ನನಗೂ ಉಚ್ಚಶಿಕ್ಷಣದ ಪದವೀಧರ ಹೆಂಡತಿಯೊಬ್ಬಳು ಸಿಕ್ಕಿದ್ದರೆ ?—ಎಂಬ ಭಾವನೆ ಬಂದುಹೋಗಿದೆ. ಆದರೆ ಅದರಲ್ಲಿ ಹುರುಳಿಲ್ಲ ಎಂಬ ಮಾತಿನಲ್ಲಿ ವಿಶ್ವಾಸ ಬೆಳಸುತ್ತಲಿದ್ದೇನೆ. ಈ ಬಗೆಯ ಅತೃಪ್ತಿ ನನ್ನ ಜೀವನದ ಸವಿರಸವನ್ನು ವಿರಸಮಾಡೀತು ಎಂದು ನನಗನಿಸದೆ ಇಲ್ಲ. ಪರಿಸ್ಥಿತಿಗೆ ನನ್ನ ಮನಸನ್ನು ಪರಿವರ್ತಿಸಿಕೊಳ್ಳಲೆತ್ನಿಸುತ್ತಿರುವುದರಿಂದ ನಿನಗೆ ಈ ಮಾತು ನೋವು ಮಾಡಲಿಕ್ಕಿಲ್ಲವೆಂದು ಈಗ ಬರೆಯುತ್ತಿದ್ದೇನೆ. ಶ್ರೀಮಂತ ಕನ್ನೆಯನ್ನು ಮಾಡಿಕೊಳ್ಳಬಾರದು ಎನ್ನುತ್ತಾರೆ, ಗೊತ್ತೆ ಜಾನಕಿ ? ಹಾಗೇ ಕಲಿತ ಕನ್ನೆಯನ್ನು ಮಾಡಿಕೊಳ್ಳಬಾರದು ಎಂದೂ ನನ್ನ ಮತ. ಕಲಿಯದ ಅರಿಯದ ಮುಗ್ಧಪ್ರೇಮದಲ್ಲೇ ಬಹಳ ಸುಖವಿದೆ ಎನ್ನಬಹುದಲ್ಲವೆ ? ನಾನು ಹೇಳಿದುದೆಲ್ಲಾ ವೇದವಾಕ್ಯವೆಂದುಕೊಂಡು ನೀನು ಭಕ್ತಿಯಿಂದ ನಡೆದುಕೊಳ್ಳುತ್ತಿದ್ದೀಯಲ್ಲಾ, ನಿನಗೆ ಎಷ್ಟು ಮಾಡುಮಟ್ಟಿದರೂ ಕಡಿಮೆ ಎಂದು ನನಗನಿಸುತ್ತದೆ. ಭಿನ್ನಾಭಿಪ್ರಾಯ, ಒಣಚರ್ಚೆಗಳು ನಮ್ಮ ಪ್ರೇಮಸಾಮರಸ್ಯವನ್ನು ಕದಡಲಾರವು, ಕಲಕಲಾರವು. ನಾನು ನಟ್ಟು ಬೆಳೆದ ಒಂದು ಅಗಿಯ ಬೆಳವಣಿಗೆಯನ್ನು ನೋಡುವಲ್ಲಿ ನನಗೆ ಆನಂದಾಭಿ

ಮಾನಗಳು ಹೆಚ್ಚು. ಹಾಗೆ ನನ್ನ ಪ್ರೇಮದ ಅಗಿ ನೀನು ಜಾನಕಿ. ಆ ಅಗಿಯೀಗ ಚಿಗಿತು, ಹೂತು, ಕಾತು, ಫಲವನ್ನು ತಾಳಿದೆ.

ಅದರ ಸವಿಯನ್ನು ಸವಿಯಲು ತೋಟಿಗನು ಬರುತ್ತಿದ್ದಾನೆ. ಜಾನಕಿ ಇನ್ನು ಬಹಳ ದಿನಗಳುಳಿಯಲಿಲ್ಲ. ಬಿ. ಟಿ. ಎಂಬ ಯಕ್ಷನ ವರ್ಷಭೋಗ್ಯ ಶಾಪವು ಮುಗಿಯುತ್ತ ಬಂದಿದೆ. ಮುಗಿಯುತ್ತ ಬಂದಂತೆಲ್ಲ ಮನಸ್ಸು ಅಭ್ಯಾಸ, ಪರೀಕ್ಷೆಗಳನ್ನು ಬಿಟ್ಟು ನಾಳಿನ ಬಾಳಿನ ಬಂಗಾರದ ಹೊಳಪಿಗೆ ಹರಿಯುತ್ತಿದೆ.

ಇರಲಿ. ಏನು ಮಹಾಪರಿಕ್ಷೆ! ಬಿ.ಟಿ.ಯಲ್ಲಿ ನಪಾಸಾಗುವುದೆಂದರೇನೆ ಆಶ್ಚರ್ಯ. ಅಂತಹ ಆಶ್ಚರ್ಯವನ್ನುಂಟುಮಾಡುವ ಪ್ರಾಣಿ ನಾನಲ್ಲ. ಜೀವನ ಪರೀಕ್ಷೆಗೆ ಅಭ್ಯಾಸ ನಡಸಿರುವ ನಮಗೆ, ಈ ಪರೀಕ್ಷೆ ಏನು ಮಾಡೀತು, ಅಲ್ಲವೆ ಜಾನಕಿ ?

ನಿನ್ನ ಮೋಹನನ ಕಿರುಚಾಟದಲ್ಲಿ ಈ ಉದ್ದ ಪತ್ರ ಓದುವುದಕ್ಕೆ ನಿನಗೆ ಅವಕಾಶ ಹೇಗೆ ದೊರೆತೀತೊ ಎಂಬ ಕಾತರ.

ನಿನ್ನ ಹರಣ,
—ಜಾನಕೀರಮಣ

* * * *

ಬೆಳಗಾಂವಿ
..........

ಸೌಭಾಗ್ಯವತಿ ಜಾನಕಿಗೆ,

ಸರಿ, ಉತ್ತರ ಬರೆಯುವುದಕ್ಕೆ ನಿನ್ನ ಮುಂಗುಡಿಯದೊಂದು ಒಳ್ಳೇ ನೆವ ಸಿಕ್ಕುಬಿಟ್ಟಿದೆ ನಿನಗೆ. ಯಾಕೆ ನಿನ್ನ ಮಗ ಮಲಗಿದಾಗಲಾದರೂ ಒಂದೆರಡು ಸಾಲು ಗೀಚಿ ಹಾಕುವುದಕ್ಕೆ ಬೇಸರವೆ? ಆವಾಗ ಓಲೆಗೆ ಮಾರೋಲೆ ಬರೆಯುತ್ತಿದ್ದಿ. ಇದರಿಂದ ನಿನ್ನ ಭಾಷಾಶೈಲಿಯೂ ಸುಧಾರಿಸುತ್ತ ಬಂದಿರಲಿಲ್ಲವೆ ? ಆದರೆ ಈಗ ಮತ್ತೆ ನಿನ್ನ ಲೇಖನಿ ಜಂಗು ತಿನ್ನ ತೊಡಗಿರಬೇಕು. ನಿನ್ನ ವಿಚಾರವೂ ಅದೇ ಹಾದಿ ಹಿಡಿಯಬಾರದಲ್ಲವೆ ? ಬರಿ ನನ್ನ ಓಲೆಗಳನ್ನೋದಿದರಲ್ಲ, ಅವಕ್ಕೆ ಪ್ರತಿಯಾಗಿ ಉತ್ತರ ಬರೆಯುತ್ತಿದ್ದರೇನೇ ನಿನ್ನ ಶೈಲಿ ಸುಧಾರಿಸಬಲ್ಲದು.

ಅಲ್ಲಿಗೆ ಬಂದು ಹೋಗಬೇಕೆಂದು ನಿತ್ಯವೂ ಧ್ಯಾನಿಸುತ್ತಿದ್ದೇನೆ. ಆದರೆ ಈ ವರ್ಕಶಾಪಿನಲ್ಲಿ ಬಿಡುವೇ ದೊರಕದಾಗಿದೆ. ಹೌದು, ನಿನ್ನ ಅಕ್ಕರೆಯ ಆಮಂತ್ರಣಕ್ಕೆ ಓಗೊಡಬೇಕಾಗಿದೆ. ಆದರೆ ಜಾನಕಿ ನಿನ್ನ ಆ ಬಾಣಂತಿಯ ಕೋಣೆ, ಅಲ್ಲಿಯ ಲೋಭಾನದ ವಾಸನೆ, ಎಣ್ಣೆ-ಅರಿಷಣದ ನಿನ್ನ ಹಸಿ ಮೈ, ಗಾಳಿಗೂ ಬೆಳಕಿಗೂ ಪ್ರವೇಶವಿಲ್ಲದ ಆ ಬ್ಲಾಕ್‌ಹೋಲು, ಕೋಣೆಯೊಳಗೆ ಬಂದರೆ ಹೊರಸಿನ ಮೇಲೆಯೇ ಕೂಡಬೇಕಾದ ಪರಿಸ್ಥಿತಿ—ಇವನ್ನೆಲ್ಲಾ ನೆನೆದುಕೊಂಡರೆ ಇಲ್ಲಿಂದ ಸ್ಥಳ ಕಿತ್ತುವುದಕ್ಕೆ ಸ್ಫೂರ್ತಿಯೇ ಬರುವುದಿಲ್ಲ ನೋಡು. ಆದರೆ ಇಷ್ಟೇ ಸಮಾಧಾನ, ತಾಯಿ-ಮಗುವಿನ ಸಾನ್ನಿಧ್ಯ ದೊರಕುವುದು.

ಜಾನಕಿ, ಇಂದು ಬೆಳಿಗ್ಗೆ ಒಂದು ರೋಮ್ಯಾಂಟಿಕ್ ಎಂದರೆ ರೋಮಾಂಚಕ ಕವನವೊಂದನ್ನು ಓದಿದೆ. ರಾಯರು ಮಾವನ ಮನೆಗೆ ಬಂದ ವರ್ಣನೆಯಿದೆ. ರಾಯರು ಬರುತ್ತಾರೆ, ಪಾಯಸದೂಟವಾಗುತ್ತದೆ, ತಾಂಬೂಲವಾಗುತ್ತದೆ. ಕೋಣೆಗೆ ಬರುತ್ತಾರೆ – ಪದ್ಮಳು ಹಾಕಿದ ಕಸೂತಿಯ ಗಾದೆ-ದಿಂಬು ಅಲಂಕೃತವಾಗಿರುತ್ತವೆ. ಆದರೇನು ? ಪದ್ಮಳೇ ಕಾಣಲೊಲ್ಲಳು. ಕಣ್ಣು ಕಡಿದರೂ ನಿದ್ರೆ ಬಾರದು. ರಾಯರಿಗೆ ಮಾವನ ಮನೆಗೆ ಬಂದೂ ಪ್ರಯೋಜನವಿಲ್ಲದಾಯಿತು. ಪದ್ಮಳು ಮನೆಯಲ್ಲಿಲ್ಲವೆನ್ನಬೇಕೆ ? ಹಾಗೇನೂ ಇಲ್ಲ. ಆದರೆ ತಾಂಬೂಲ ತಂದು ಕೊಟ್ಟವಳು ನಾದಿನಿ, ಊಟಕ್ಕೆ ಬಡಿಸಿದವರು ಅತ್ತೆ, ಕಾಲಿಗೆ ನೀರು ಕೊಟ್ಟವರು ಮಾವ. ನಿನಗೆ ಗೊತ್ತಾಯಿತೆ ಪದ್ಮಳೇಕೆ ಕಾಣಲಿಲ್ಲ ಎಂಬುದು ? ಹೂಂ. ಗೊತ್ತಾಗದೆ ಏನು ? ರಾಯರ ಅವಸ್ಥೆಯನ್ನು ನಾನೆಷ್ಟು ಸಲ ಅನುಭವಿಸಿರಲಿಕ್ಕಿಲ್ಲ ! ಹೌದು, ಹಾಗೆಂದೇ ನನಗೆ ಆ ಕವನ ಅಷ್ಟೊಂದು ಹಿಡಿಸಿತೇನೊ ! ಆ ಕವಿತೆಯನ್ನು ಓದುತ್ತಿರುವಾಗಲೆಲ್ಲಾ ಜಾನಕಿ, ನನಗೆ ನಿನ್ನದೇ ನೆನಪು, ಒಮ್ಮೊಮ್ಮೆ ರಾತ್ರಿ ಊಟದ ಹೊತ್ತಿಗೆ ಬರಬೇಕು. ಇಲ್ಲವೆ ಶನಿವಾರ ರಾತ್ರಿ ಫಲಹಾರವೆಂದು ಒಂದು ಡಬರಿ ಅವಲಕ್ಕಿ ಹಚ್ಚಿಕೊಂಡು ಸುತ್ತಲೂ ನಿಮ್ಮ ಎಂದರೆ ನೀನು, ನಿಮ್ಮಪ್ಪ, ನಿಮ್ಮ ಹುಡುಗರು ಎಲ್ಲರ, ದುಂಡು-ಪರಿಷತ್ತು ನೆರೆದಿರಬೇಕು. ಅವಲಕ್ಕಿ ಚಹದ ರುಚಿ ಮಿಗಿಲೊ ನಿಮ್ಮ ಹರಟೆಯ ರುಚಿ ಮಿಗಿಲೊ ಎಂಬಂತೆ ಸ್ಪರ್ಧೆ ನಡೆದಿರಬೇಕು. ನಾನು ಬಂದು ತಲೆಬಾಗಿಲು ತಟ್ಟಿದಾಗಲೂ

ನಿಮ್ಮ ಹರಟೆ ಭರಾಟೆಯಿಂದ ನಡೆದಿರಬೇಕು. ಜಾನಕಿ, ಆಗ ನಡೆದಿರ ಬೇಕೇನು ? ನಿನ್ನ ಬಾಯಿಂದ ನನ್ನ ವರ್ಣನೆ! 'ಅವರು' ಹಾಗೆ, 'ಅವರು' ಹೀಗೆ! 'ಅವರು' ಹೊಸ ಕರೀಕೋಟು ಹಾಕಿದಾಗ ಹೇಗೆ ಕಾಣುತ್ತಾರೆ, ಅವರಿ ಗೊಂದು ಬಹುಮಾನ ದೊರಕಿತು, ಕಥಾಸ್ಪರ್ಧೆಯಲ್ಲಿ. ಹೀಗೆಲ್ಲಾ ಕಡ್ಡಿಯನ್ನೆ ಗುಡ್ಡ ಮಾಡಿ ಹೇಳುವ ನಿನ್ನ ಕೈವಾಡ; ಅದನ್ನೆ ಭಾಗ್ಯಮಾಡಿಕೊಂಡು ಸಂತೋಷ ಪಡುವ ನಿಮ್ಮವ್ವ, ಅಪ್ಪನ ಅಭಿಮಾನ, ಇವೆಲ್ಲಾ ನನಗೊಂದು ಅಪೂರ್ವ ಮನರಂಜನೆಯಾಗಿ ಬಾಗಿಲು ತಟ್ಟಿ, ನಿಮ್ಮ ರಸನಿಮಿಷದ ಹರಟೆಗೆ ರಸಭಂಗ ಮಾಡುವುದಕ್ಕಿಂತ ತಲೆಬಾಗಿಲಿಗೆ ಕಿವಿಗೊಟ್ಟು ಕೇಳುತ್ತ ನಿಲ್ಲಬೇಕು ಎಂದೆ ನಿಸಿ ಹಾಗೇ ಮಾಡುತ್ತಿದ್ದೆ. ಅದೊಂದು ಹಬ್ಬವಾಗುತ್ತಿತ್ತು ನನಗೆ. ಅಲ್ಲವೆ ಹುಚ್ಚಿ, ನನ್ನ ಮುಂದೇ ನನ್ನನ್ನು ಎಷ್ಟೊಂದು ಬೈಯುತ್ತೀ, ನಿಮ್ಮಪ್ಪನ ಮುಂದೆ ನಾನೇ ಇಂದ್ರ, ನಾನೇ ಚಂದ್ರನೆಂಬಷ್ಟು ಹೊಗಳುತ್ತೀಯಲ್ಲ ? ಒಳ್ಳೇ ಸ್ವಭಾವ ನಿನ್ನದೂ !

ಅಂತೂ ಮತ್ತೊಮ್ಮೆ ಬೇಗನೆ ಒಮ್ಮೆ ಬಂದುಹೋಗುತ್ತೇನೆ. ನಿನ್ನ ಆ ಬಾಣಂತಿ ಬಜಿಪುಡಿಯನ್ನು ಅಂದಿನ ಮಟ್ಟಿಗಾದರೂ ಬಿಟ್ಟು ಒಂದಿಷ್ಟು 'ಕುಟಿಕುರಾ' ಪುಡಿ ಹಚ್ಚಿಕೊ ! ಆ ಖಮುಟು ಬಾಣಂತಿಯ ಸೀರೆ ಬಿಟ್ಟು ಪತ್ತಲ ಉಟ್ಟುಕೋ ! ಕಾಲೊಳಗೆ ನಿಮ್ಮಪ್ಪನ ಮೊಚ್ಚೆ ಹಾಕಿಕೊಂಡು ಮನೆ ಯೊಳಗೆ ಓಡಾಡುವುದನ್ನು ಬಿಟ್ಟು ನಿನ್ನವೇ ಚಿಕ್ಕ ಚಪ್ಪಲಿಗಳನ್ನು ಮೆಟ್ಟಿಕೊ. ಕಿವಿಯೊಳಗೆ ಓಲೆಗಳನ್ನು ಬೇಕಾದರೆ ಇಟ್ಟುಕೊ; ಇಲ್ಲವೆ ನನ್ನ ಓಲೆಗಳೇ ನಿನ್ನ ಕಿವೆಗೆ ಸವಿಮಾತುಹೇಳುವ 'ಮೆಚ್ಚಿನೋಲೆ' ಗಳೆಂದು ಇವನ್ನೇ ಕತ್ತರಿಸಿ ಕಿವಿಗೆ ಸುತ್ತಿಕೊಳ್ಳಬೇಡ. ಇರಲಿ. ಅಂತೂ ನಾನು ಬರಬೇಕಾದರೆ ನೀನು ಹ್ಯಾಗೆ ಇರಬೇಕೊ ಹಾಗೆ ಇರು. ಮಾವನ ಮನೆಗೆ ರಾಯರು ಬಂದ ಫಜೀತಿ ನನಗಾಗಲಿಕ್ಕಿಲ್ಲವೆಂಬ ಭರವಸೆಯಿದೆ. ಒಂದು ದಿನದ ಮಟ್ಟಿಗೆ ಬಾಣಂತಿಯ ಕೋಣೆ ಬಿಟ್ಟು ಮೇಲಟ್ಟದ ಬೆಳಕಿನಲ್ಲಿ ಬರಲಿಕ್ಕೆ ನಿಮ್ಮಪ್ಪ ಅವ್ವರ ಮನಾಯಿ ಏನೂ ಇಲ್ಲವೆಂದು ತಿಳಿದಿದ್ದೇನೆ. ತಿಳಿಯಬಹುದಷ್ಟೆ ?

ಹಾಗಾದರೆ ಯಾವಾಗ ಬರಲಿ ? ಮುಂದಿನ ಶನಿವಾರ. ಅಂದು ಬೆಳಗ್ಗೆ ಕಾಲೇಜು. ಮುಗಿಸಿಕೊಂಡು ಮಧ್ಯಾಹ್ನ ಗಾಡಿ ಹತ್ತುವೆ. ಮೂರುಸಂಜೆಗೆ ಧಾರ ವಾಡ. ಕನ್ನಡದ ಧೂಳಿ ಮುಸುಕಿದ ಧಾರವಾಡನಗರದ ಬೀದಿಗಳಲ್ಲಿ ಹಾಯ್ದು ಬರುವೆ. ಮುದ್ದುಮೋಹನನಿಗೆ ತಿಳಿಸಿಟ್ಟಿರು—ಕುಸ್ತಂ ಬರುತ್ತಾನೆ ಅಂತ !

ಜಾನಕಿ, ಇನ್ನು ವಿಶೇಷ ಮುಖತಃ ಅಲ್ಲವೆ ? ಹೌದು ಶಬ್ದಶಃ ಮುಖತಃ. ಹೀಗೆನ್ನುವಾಗ ಮತ್ತೆ ಭವಭೂತಿಯ ನೆನಪು ಬರುತ್ತದೆ—ರಾತ್ರಿರೇವವ್ಯರಂಸೀತ್ !

ಅಂತಹ ರಾತ್ರಿಗಾಗಿ ಕಾದಿರುವ

ನಿನ್ನ

—ರಾಯರು

* * * *

ಧಾರವಾಡ

..........

ಜಾನಕಿರಮಣನಿಗೆ,

ಜಾನಕಿಯ ಶಿ । ಸಾ । ನಮಸ್ಕಾರಗಳು. ಹೀಗೆ ಬಂದು ಹೀಗೆ ಹೋಗಿ ಬಿಟ್ಟಿರಿ. ಬೆಳಗಾವಿಯೆಂದರೂ ನನ್ನ ಪಾಲಿಗೆ ನೀವು ವಿಲಾಯತಿಗೆ ಹೋದ ಹಾಗೇ ಆಗಿದೆ. 'ಸಮುದ್ರದಾಚೆ'ಯಿಂದ ಪುಸ್ತಕ ಓದುತ್ತಿದ್ದೇನೆ. ಅದನ್ನು ಓದಿದ ಹಾಂಗೆಲ್ಲಾ ನೀವೂ ವಿಲಾಯಿತಿಯಿಂದಲೆ ನನಗೆ ಪತ್ರ ಬರೆಯುತ್ತಿದ್ದಿ ರೇನೊ ಅನಿಸುತ್ತದೆ.

ಅವ್ವಯ್ಯಾ ! ನನ್ನದೇ ದೃಷ್ಟಿ ನಿಮಗೆಲ್ಲಿ ತಾಗೀತೊ ಎಂದು ಹೆದರಿಕೆ. ನಿಜವಾಗಿನೂ ಈ ಸಾರೆ ಬಂದಾಗ ನೀವು ಬಹಳ ನೆಟ್ಟಗೆ ಕಂಡಿರಿ. ಮೈ ಗಲ್ಲ ತುಂಬಿಕೊಂಡಂತೆ ಕಂಡವು. ಅಂತೂ ಹೆಂಡರು ಮಕ್ಕಳ ಕಾಟವಿಲ್ಲ, ಸಾಮಾನು-ಸಟ್ಟು ತರುವ ಕಾಳಜಿಯಿಲ್ಲ. ಆರಾಮ ಇದ್ದೀರಲ್ಲಃ ? ಇರ್ರಿ. ನನಗೆಳ್ಳಷ್ಟು ಅಸೂಯೆ ಇಲ್ಲ. ಹ್ಯಾಗಾದರೂ ನೀವು ಆರಾಮ ಇದ್ದರೆ ಅದೇ ನನ್ನ ಆರಾಮು. ನಮ್ಮವ್ವಾ, ನೀವು ನೆಟ್ಟಗೆ ಕಂಡಿರಿ ಅಂತ ಹ್ಯಾಗೆ ಬರೆದು ಬಿಟ್ಟೆನೊ ಏನೋ. ಈಗ ಹ್ಯಾಂಗೋ ಅನಿಸಲಿಕ್ಕೆ ಹತ್ತೇದ. ಈಗೇನೂ ನೀವು ಸೊರಗಿಲ್ಲ ಅಷ್ಟೆ ? ಇದೆ ಹೊತ್ತಿನೊಳಗೆ ಒಂದು ಫೋಟೊ ತಗೆಯಿಸಿ ಕಳಿಸಿ ಕೊಡಿರಿ ನನಗ. ಯಾಕಂದರೆ ಇಲ್ಲಿ ಬಂದು, ಮತ್ತೆ ನಿಮ್ಮ ಬೆನ್ನಿಗೆ ಸಂಸಾರ

ಹತ್ತಿತು ಅಂದರ ಈ ಮೈ ಎಲ್ಲಿ ಕರಗಿಹೋದೀತೊ ಅಂತ ನನಗೆ ಚಿಂತಿ ಹತ್ತೇದ.

ಈ ಸಾರೆ ನೀವು ಬಂದಾರೆ ಬರ್ರಿ. ನಿಮಗೆ ಹ್ಯಾಂಗೆ ಬೇಕೊ ನಾನು ಹಾಗೇ ಇರತೀನಿ. ನೀವು ತಂದು ಹಾಕಿದ್ದರೊಳಗೆ ಖರ್ಚುಮಾಡತೀನಿ. ಹೆಚ್ಚಿನ ಖರ್ಚು ಏನೂ ಮಾಡೋದಿಲ್ಲ. ಉದ್ದರಿ ಅಂಬೂ ಶಬ್ದಾನೇ ಮರತು ಬಿಡತೀನಿ. ಹೌದು, ನೀವು ಹೇಳೋದು ಖರೇ ಅದೆ. ಉದ್ದರೀ ಸಾಮಾನು ಅಂದಕೂಡಲೇನ ಪುಗಸೆಟ್ಲೆ ಸಿಕ್ಕಷ್ಟು ಸಂತೋಷ ಆಗಿ ಮನಿತುಂಬ ಸಾಮಾನಾ ತಂದು ಹಕ್ಕೊಬೇಕು ಅನಸತದ. ಆಮ್ಯಾಲೆ ಮನಿಗೆ ಅಂಗಡಿ ಕಾರರು ಎಡತಾಕಲಿಕ್ಕೆ ಹತ್ತಿದರು ಅಂದರ ತಿಂದ ಅನ್ನ ಮೈಗೆ ಹತ್ತಧಾಂಗ ಆಗಿಬಿಡತದ. ಅಂತ ಹೇಳಿ ಈ ಸಾರೆ ನಾ ಪ್ರತಿಜ್ಞ್ಯಾ ಮಾಡೀನಿ, ಉದ್ದರೀ ತರಿಸೋಹಾಂಗಿಲ್ಲಾ ಅಂತ. ನಿಮಗ ಇನ್ನೂ ಖಾತ್ರಿ ಆಗವಲ್ಲದೇನು ?

ನಿಮ್ಮ ಪ್ರಕೃತಿ ಬಗ್ಗೆ ಬಹಾಳ ಕಾಳಜಿ ತಗೊಳ್ಳರಿ. ಅಲ್ಲಾ ದಿನಾ ಉತ್ತತ್ತಿ ತಗೋತೀನಿ ಅಂತಾರ ಬರದೀರಿ. ಆದರ ನಿಮ್ಮ ಉತ್ತತ್ತಿಯೊಳಗಿನ 'ಉ'ನಃ ಹಾರಿ ಹೋಗೇದಲ್ಲಾ ? ಪತ್ರಾ ಬರಿಯೋ ಮುಂದೆ ಯತ್ಲಾಗ ಲಕ್ಷ್ಯ ಇರತದೊ ಏನೊ ! ನೀವಿಲ್ಲೆ ಬಂದಮ್ಯಾಲೆ ನಾನೂ ಹಾಲು-ಉತ್ತತ್ತಿ ಇಷ್ಟಃ ಯಾಕ, ಬದಾಮ್, ಕೇಸರಾ, ಪಿಸ್ತೆ ಹಾಕಿ ಹಾಲು ಮಳ್ಳಿಸಿ ಕೊಡ-ತೀನಿ. ಆತಃ ?

ಪತ್ರಕ್ಕ ಲಗೂನೆ ಉತ್ತರಾ ಬರೀರಿ. ಹೌದು ನನಗೂ ಬರೇ ಅದೇ ನೆನಪು ಬರತದ. ಒಂದೇ ಒಂದು ದಿನಾ ಇದ್ದು ಹೋದಿರಿ. ಅಲ್ಲಾ, ಮಗಾ ಹುಟ್ಟಿದರೂ ಇನ್ನೂ ನಿಮ್ಮ ಹುಚ್ಚುಚ್ಚರಾ ಚ್ಯಾಷ್ಟಿ ಬಿಡವಲ್ರಿ. ಅವೆಲ್ಲಾ ನಿಮ್ಮ ಮಾತು ನೆನಿಸಿದರ ನನಗಿನ್ನೂ ನಗೀ ಬರತದ. ಅಂತೂ ಆವೊತ್ತಿನ ದಿವಸ ಅವ್ವನ ಖಡಕ ಬಾಣಂತ್ಯನ ತ್ಯಾ ಹಿಡಿಸಿಬಿಟ್ಟರಿ. 'ಎಲ್ಲೆ ಥಂಡಿ-ಗಿಂಡಿ ಮಾಡಿಕೋತೀಯೋ ಅಂತ ಅನಸೇದ' ಅಂತ ಅವ್ವ ಇನ್ನೂ ಗಾಬರಿ ಆಗ್ಯಾಳ. ಆದರ ಒಳಗಿನ ಮಾತು ಹೇಳಬೇಕಂದರ ನನಗೂ ಖರೋಖರ ಒಂದು ದಿವಸ ಬಹಾಳ ಆರಾಮ್ನೆ ಕಳಧಾಂಗ ಆತು. ಕತ್ತಲೀ ಖೋಲಿಯಿಂದ ಬೆಳಕು ಕಂಡಾಂಗ ಆತು.

ಲಗೂನ ನಿಮ್ಮ ಪರೀಕ್ಷಾ ಮುಗಿಸಿ ಬರ್ರಿ. ಇಂಥಾ ಬೆಳಕು ಹನ್ನೆರಡು ತಿಂಗಳೂ ಕಾಣೋಣಂತ.

ನಿಮ್ಮ ಚರಣದಾಸಿ
— ಜಾನಕಿ

* * * *

ಬೆಳಗಾಂವಿ
...........

ನನ್ನ ಜಾನಕಿ, ಭಾವಮೇನಕಿ,

ಆಹಾ! ನಿಜವಾಗಿಯೂ ನನ್ನ ಭಾವಮೇನಕೆಯೇ ನೀನು. ನನ್ನ ಹೃದಯಮೇನಕೆ! ಆದರೆ ಮೇನಕೆಯಿಂದ ವಿಶ್ವಾಮಿತ್ರನಿಗಾದ ಫಜೀತಿ ನನ್ನ ಮೇನಕೆಯಿಂದ ನನಗೆ ಆಗಲಾರದೆಂಬ ಭರವಸೆ ನನಗಿದೆ.

ಜಾನಕಿ, ಉತ್ತತ್ತಿಯೊಳಗಿನ 'ಉ' ಹೋಗಿದೆಯಷ್ಟೆ? ನಿನ್ನ ಮಾತು ಕೇಳಿ ನನಗೆ ಕಂತಿ-ಹಂಪರ ಸಮಸ್ಯಾಪೂರ್ತಿ ನೆನಪಿಗೆ ಬಂತು. ಹಂಪ ಕಂತಿಗೊಂದು ಸಾಲು ಕೊಡುತ್ತಾನೆ. 'ದನಮಂ ಕಡಿಕಡಿದು ಬಸದಿಗೆಳೆಯುತ್ತಿರ್ದರ್' ಎಂದು. ಇದನ್ನು ಪೂರೈಸಬೇಕು ಕಂತಿ. 'ಚಂ' ಎಂದು ಹಿಂದೆ ಜೋಡಿಸಿ ಪೂರೈಸುತ್ತಾಳೆ. ನಿನ್ನ ಓಲೆಯೋದಿದ ಮೇಲೆನಿಸಿತು, ಕಂತಿ ಹೀಗೂ ಕೊಡಬಹುದಾಗಿತ್ತು ಎಂದು. 'ತತ್ತಿಯನ್ನೊಡೆದೊಡೆದು ಹಾಲೊಳ್ ಬೆರಸುತಿರ್ದರ್'. ಇದರ ಮೇಲಿನ ಸಾಲು ಹೀಗಾಗಿರಬೇಕು— 'ಉತ್ತರಾದಿಮಠದಾಚಾರ್ಯರು। ತ್ತತ್ತಿಯನೊಡೆದೊಡೆದು ಹಾಲೊಳ್ ಬೆರಸುತಿರ್ದರ್'....ಯಾಕೆ? ಹೇಗಿದೆ ಸಮಸ್ಯಾಪೂರ್ತಿ?

ಹೇಳು ಜಾನಕಿ, ನಿನಗೆ ಇಷ್ಟೆಲ್ಲಾ ಚುರುಕುತನ ಹೇಗೆ ಬಂತು? ಇಷ್ಟೊಂದು ಬಿನ್ನಾಣಗಿತ್ತಿ ನೀನು ಹೇಗೆ ಆದೆ? ಅಥವ ಹೀಗೂ ಇರಬಹುದು; ನೀನು ಇರುವ ಹಾಗೇ ಇದ್ದು ನಿನ್ನಲ್ಲಿ ಆ ಬಿನ್ನಾಣದ ಅಂದ-ಚೆಂದಗಳನ್ನು ಕಾಣುವ ದೃಷ್ಟಿ ನನ್ನ ಕಣ್ಣಲ್ಲಿದೆಯೊ? ಅದೇನೆ ಇದ್ದರೂ ಒಂದು ಗುಣ ಪಾಯಿಸ ಇನ್ನೊಂದು ಗುಣ ತುಪ್ಪ ಇದ್ದಂತೆ.

ನಿನಗೆ ಗೊತ್ತಿದೆಯೇ ಜಾನಕಿ, ಸೌಂದರ್ಯವು ಸತ್ಯದಲ್ಲಿರುತ್ತದೆಯಂತೆ. ಆದರೆ ಅದು ಸುಳ್ಳು ಎಂದು ನನ್ನ ಭಾವನೆ. ಸೌಂದರ್ಯವು

ಸುಳ್ಳಿನಲ್ಲಿರುತ್ತದೆ. ಏಕೆಂದರೆ ಕವಿಗಳು ಅಂದ ವಸ್ತುವಿನಲ್ಲಿ ಅಂದ-ಚೆಂದವನ್ನು ಕಾಣುವ ಅಂದವಿಲ್ಲದ ವಸ್ತುವಿನಲ್ಲಿ ಕಾಣುವುದಿಲ್ಲವೆ? ಸತ್ಯವೇ ಸೌಂದರ್ಯವೆಂದರೆ ಸುಂದರವಿಲ್ಲದ ವಸ್ತು ಸುಂದರವಾಗುವುದು ಹೇಗೆ?

ನಿನಗೊಂದು ಕತೆ ಹೇಳಲಿಯಾ? ಒಬ್ಬ ಆಸ್ಥಾನಕವಿಯಿದ್ದನಂತೆ. ತನ್ನದೊಂದು ಕವನದಲ್ಲಿ ಒಬ್ಬ ಯುವತಿಯ ವರ್ಣನೆ ಮಾಡಿದ್ದನಂತೆ. ರಾಜನು ಯುವತಿಯ ವರ್ಣನೆ ಕೇಳಿ 'ಇಂತಹ ಸುಂದರಿ ಈ ಭೂಮಿಯ ಮೇಲುಂಟೆ?' ಎಂದು ಆಶ್ಚರ್ಯಪಟ್ಟನಂತೆ. ಕವಿಯನ್ನು ಕರೆಸಿ ಕೇಳಿದ— 'ಇಂತಹ ಯುವತಿ ಭೂಮಿಯಲ್ಲಿರುವಳೆ?' ಎಂದು. ಕವಿ ಹುಂಗುಟ್ಟಿದ. ಅವಳನ್ನು ತೋರಿಸುವಿಯಾ?' ಎಂದು ಕೇಳಿದ ರಾಜ. ಕವಿ ಹೊಂಗುಟ್ಟಿದ. ರಾಜನು ಕವಿಯೊಡನೆ ತೆರಳಿದ. ಕವಿ ತನ್ನ ಮನೆಗೆ ರಾಜನನ್ನು ಕರೆತಂದ. ತನ್ನ ಹೆಂಡತಿಯನ್ನು ಕರೆದ 'ಪ್ರಿಯೆ, ನಮ್ಮ ರಾಜರು ನಿನ್ನನ್ನು ನೋಡಲು ಬಯಸುತ್ತಾರೆ. ಹೊರಗೆ ಬಾ' ಎಂದ. ರಾಜನಿಗೆ ಕುತೂಹಲ, ಸಂಕೋಚ. ಕವಿಯ ಹೆಂಡತಿ ಹೊರಗೆ ಬಂದಳು. ಕಪ್ಪುಮುಖ, ಕುಳ್ಳದೇಹ. ರಾಜನಿಗೆ ಅಪಮಾನವೆನಿಸಿತು. 'ಇವಕ್ಕೆ ನೀನು ಸೌಂದರ್ಯವೆನ್ನುತ್ತೀಯಾ?' ಎಂದು ಗದ್ದರಿಸಿದ.ಕವಿ ಹೇಳಿದ : 'ಸ್ವಾಮಿ, ಅವಳನ್ನು ನಾನು ಬಣ್ಣಿಸಿದುದು ನಾನು ಕಂಡಂತೆ, ನೀವು ಕಂಡಂತಲ್ಲ.' ತನಗೆ ಕವಿಯ ಕಣ್ಣು ಇಲ್ಲದೆ ಹೋಯಿತಲ್ಲ ಎಂದು ರಾಜನಿಗೆ ಅಸಮಾಧಾನವಾಯಿತಂತೆ.

ಜಾನಕಿ,ನಮ್ಮಿಬ್ಬರಿಗೂ ಆ ಕವಿಯ ಕಣ್ಣೇ ಇವೆ ಅಲ್ಲವೆ? ಕವಿ ಬೇಂದ್ರೆ ಅವರ 'ನಾನು ಬಡವಿ ಆತ ಬಡವ' ಎಂಬ ಕವನವನ್ನು ಮತ್ತೆ ನಿನ್ನ ನೆನಪಿಗೆ ತರುತ್ತೇನೆ. 'ಕುಂದುಕೊರತೆ ತೋರಲಿಲ್ಲ,ಬೇಕು ಹೆಚ್ಚಿಗೇನು'— ಎಂದು ಬಡವಿ ಹೇಳುತ್ತಾಳೆ. ಹೀಗೆ ನಿನ್ನಲ್ಲಿಯೂ ರಸಿಕತೆ ಒಡೆಯಿತೆಂದರೆ ರಸಕಸಿ ತಾನೇ ಮಾಯವಾಗುತ್ತದೆ. ಗಂಡನ ಕುಂದು-ಕೊರತೆಗಳನ್ನು ಕಡೆಗಣಿಸುವ ಕಣ್ಣು, ಮನಸ್ಸು ನಿನಗೆ ದೊರೆತ ಮೇಲೆ ಇನ್ನೇನು ಬೇಕು?

ಹೌದು, ನನಗಿನ್ನೂ ನೆನಪಿದೆ. 'ನಿನ್ನ ಗಂಡ ಮೈಮೇಲೆ ಇನ್ನೂ ಗುಂಜಿ ತೂಕ ಭಂಗಾರ ಮಾಡಿಸಿಲ್ಲವಲ್ಲ?' ಎಂದು ನಿಮ್ಮವ್ವ ಕೇಳಿದ್ದಕ್ಕೆ ನೀನು 'ಅವರೇ ನನ್ನ ಮೈಮೇಲಿನ ಭಂಗಾರ.' ಎಂದು ಹೇಳಿದ್ದೆಯಂತೆ.

ಅಲ್ಲವೆ ? ಹಾಗೆ ಗಂಡನೇ ಸರ್ವಸ್ವ ಎಂದು ತಿಳಿದು ಬಿಟ್ಟ ಮೇಲೆ ನಿನ್ನಷ್ಟು ಸಿರಿವಂತಳು ಇನ್ಯಾರು ?

ನನ್ನ ಮಟ್ಟಿಗೆ ನಾನೂ ಹಾಗೇ ತಿಳಿದಿದ್ದೇನೆ ಜಾನಕಿ. ಜಾನಕಿಯೇ ನನ್ನ ಸರ್ವಸ್ವ ಎಂದು. ನೀನು ಪತಿವ್ರತೆಯಾಗಿದ್ದರೆ ನಾನು ಸತೀವ್ರತನೆಂದು ತಿಳಿ. ಹೆಂಡತಿಯೊಬ್ಬಳೇ ಸೀತೆಯಂತಿರಬೇಕು, ಗಂಡನು ಮಾತ್ರ ಶ್ರೀಕೃಷ್ಣನ ಹಾಗಿರಬೇಕೆಂಬುದು ನನ್ನ ಮನೋಧರ್ಮವಲ್ಲ. ಹೆಂಡತಿ ಸೀತೆಯಾಗಿದ್ದ ಮೇಲೆ ಗಂಡನೆಂಬವನು ರಾಮನಂತಿರಬೇಕು ಎಂದರೇನೆ ದಾಂಪತ್ಯವೆಂಬುದು ಸಮರಸದ ಜೀವನವಾಗಬಲ್ಲದು. ಇಲ್ಲದಿದ್ದರೆ ಸಮರಸ-ಜೀವನವು ಸಮರ ಜೀವನವಾದೀತು.

ನಿನಗೆ ನೆನಪಿದೆಯೇ ಜಾನಕಿ ? ಮೊದಮೊದಲಿಗೆ ನಿನಗೆ ಸಿಹಿ ಹೆಚ್ಚು ಸೇರುತ್ತಿತ್ತು. ನನಗೆ ಹುಳಿ-ಖಾರ ಹೆಚ್ಚು ಬೇಕಾಗುತ್ತಿತ್ತು. ಆದರೆ ಒಮ್ಮೆ ನಿಮ್ಮವ್ವನ ಮುಂದೆ ಹೇಳುತ್ತಿದ್ದೆ ' ನನಗೂ ಈಗ ಸಿಹಿ ಅಂದರ ಬಾಯಿ ಕಟ್ಟಿಬಿಟ್ಟದ. ಯಾವಾಗಲೂ ಇವರ ಜೋಡಿ ಉಂಡುಂಡು ಹುಳಿ-ಖಾರಾನs ಹೆಚ್ಚು ಬೇಕು ಅನಸತದ. ' ಹಾಗೆ ಪ್ರತಿಯೊಂದರಲ್ಲೂ ನನ್ನ ಒಲವನ್ನರಿತು ಕೊಂಡು ನೀನು ಹೊಂದಿಕೊಳ್ಳುತ್ತ ನಡೆದು ಬಂದರೆ–ಕೈಲಾಸ ಬಿನ್ನಣವಕ್ಕು–ಅಲ್ಲ, ' ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ ಸರ್ವಜ್ಞ ! '

ಹಾ ! ಮರೆತೇಬಿಟ್ಟೆ. ವಿಠಲಾಚಾರ್ಯರ ಪುರಾಣ ಅಶ್ವಮೇಧ ಕುದುರೆಯಂತೆ ಎತ್ತೆತ್ತೋ ಹೋಯಿತು. ಹೌದು. ಈಗ ಸ್ಪಷ್ಟವಾಗಿ ಹೇಳು ತ್ತೇನೆ. ನಾನು ತತ್ತಿ ಸೇವಿಸಿದ್ದೇನೆ ಎಂದು. ತತ್ತಿ ಶಾಕಾಹಾರದಲ್ಲಿ ಬರುತ್ತ ದೆಂದು ಗಾಂಧೀಜಿಯವರ ಮತವಿದೆ. ಆ ಮಾತಂತೂ ಇರಲಿ. ಮಡಿವಂತ ಳಾದ ನಿನಗೆ ಇದೇನು ಹೊಲೆತನವಲ್ಲವೆಂಬುದನ್ನೂ ತಿಳಿಸಬೇಕಾಗಿದೆ. ನಿಜ ವಾಗಿಯೂ ನೋಡು ಜಾನಕಿ, ಮಡಿ, ಮಡಿ, ಎಂದರೇನು ? ಗಾಡಿಯೊಳಗೆ ಊಟ ಮಾಡುತ್ತೇವೆ, ನೀರು ಕುಡಿಯುತ್ತೇವೆ. ಅದು ಆಪದ್ಧರ್ಮ ಎನ್ನುತ್ತಿ. ಧರ್ಮಕ್ಕೆ ಅನುಕೂಲತೆಯ ಮೇರೆಗೆ ಸೂಟಿ ಸಿಗುವಂತಿದ್ದರೆ ನಿರಂತರವೂ ಯಾಕೆ ಬೇಡ ? ಮತ್ತು ಮಡಿ ಮಾಡುವುದೊಂದೇ ಧರ್ಮ ಅಂತ ಯಾರಾ ದರೂ ಮೂರ್ಖರು ನಿನಗೆ ತಿಳಿಸಿದ್ದರೆ ನೀನು ಹಾಗೇ ನಡೆದುಕೊಳ್ಳಬಾರದು ನೋಡು.

ಮಡಿ ಎಂದರೆ ನೈರ್ಮಲ್ಯ. ಇಸ್ತ್ರಿ ಅರಿವೆಗಳನ್ನು ಹಾಕಿಕೊಂಡು ದೇವರಪೂಜೆ ಮಾಡಿದರೆ ಏನು ಅಪರಾಧ ? ಖಮುಟು ಧಾಬಳಿ—ಧಾಬಳಿ ಇಲ್ಲವೆ ಮಡಿ ಪಂಜೆ—ಉಟ್ಟುಕೊಂಡೇ ದೇವರಪೂಜೆ ಮಾಡಿದರೆ ಮಡಿಯೆ? ಜಾನಕಿ, ಡಾಕ್ಟರು ನಿಮಗಿಂತಲೂ ಹೆಚ್ಚು ಮಡಿವಂತರಿರುತ್ತಾರೆ ಹಾಗೆ ನೋಡಿದರೆ. ಒಬ್ಬರ ಕೈ ಮುಟ್ಟಿದರೆ ಸಾಬಾಣದಿಂದ ಕೈತೊಳೆಯುತ್ತಾರೆ. ಆಪರೇಶನ್ ಥಿಯೇಟರ ಹೊಕ್ಕು ನೋಡಿದರಂತೂ ತೀರಿಯೇ ಹೋಯಿತು. ಬರಿಗೈಯಿಂದ ಒಂದು ವಸ್ತುವನ್ನೂ ಮುಟ್ಟುವುದಿಲ್ಲ. ಮತ್ತು ಅವರ ಶಸ್ತ್ರೋಪಕರಣಗಳನ್ನು ನೋಡಿದರೆ ನಿನ್ನ ಅಸ್ಪೃತೋಪಕರಣಗಳನ್ನು ನಾಚಿಸುವಂತಿರುತ್ತವೆ.

ಅಲ್ಲಾ ಒಮ್ಮೆ....ನೆನಪಿದೆಯೇನು ನಿನಗೆ? ಮದುವೆಯಾದ ಹೊಸತಾಗಿ ಬೇಸಗೆಯಲ್ಲಿ ಜೋಡು ಜನಿವಾರಗಳಿಂದ ಬಹಳ ಕಸವಿಸಿಯಾಗುತ್ತದೆಂದು ನಾನು ತೆಗೆದಿಟ್ಟಾಗ ನೀನು ಎಂತಹ ರಂಭಾಟ ಮಾಡಿಬಿಟ್ಟೆ ! ನಾನು ಜನಿವಾರ ತೆಗೆದದ್ದಕ್ಕೆ ದೇವರು ಘೋರ ಶಿಕ್ಷೆಯನ್ನು ಕೊಡುವುದಿದ್ದರೆ ಎಷ್ಟೋ ಸಮಾಜದವರು ಜನಿವಾರ ಹಾಕುವುದೇ ಇಲ್ಲವಲ್ಲ ? ಜಾನಕಿ, ಈ ಜನಿವಾರ, ಈ ಮುಂಜಿ, ಈ ಸೋಡಮುಂಜಿ ಇವೆಲ್ಲಾ ಪ್ರಾಚೀನಕಾಲಕ್ಕೆ ಮಹತ್ವದ ಸಂಸ್ಕಾರಗಳಾಗಿದ್ದು ಈಗ ಸಂಕೇತರೂಪಕ್ಕಿಳಿದಿವೆ. ಎಂದ ಮೇಲೆ ಈ ಸಂಕೇತಗಳ ಪ್ರಯೋಜನವೇನು ? ಅವುಗಳ ಹಿಂದಿರುವ ಭಾವನೆಯಿಂದ ಅವಕ್ಕೆಷ್ಟು ಮಹತ್ವ ಆ ಹಿಂದಿನ ಭಾವನೆಯನ್ನು ಕಳಚಿ ಒಗೆದುಬಿಟ್ಟರೆ ಯಾವುದಕ್ಕೂ ಮಹತ್ವವಿಲ್ಲ. ಅದರಿಂದೇನಾದೀತೊ ಎಂಬ ಭೀತಿಯೂ ನಮ್ಮನ್ನು ಅಧೀರರನ್ನು ಮಾಡಬಾರದು. ಇದೇ ದೊಡ್ಡ ರೋಗ ನೋಡು. ಮಾಡುವುದನ್ನೆಲ್ಲಾ ಧೈರ್ಯದಿಂದ ಮಾಡಬೇಕು.

ವೇದೋಪನಿಷತ್ಕಾಲಕ್ಕೆ ಹೆಂಗಸರಿಗೂ ಮುಂಜಿ ಮಾಡುತ್ತಿದ್ದರಂತೆ. ಅಭ್ಯಾಸಕ್ಕೆಂದು ಬ್ರಹ್ಮಚಾರಿಗಳು ಗುರುಕುಲಕ್ಕೆ ಹೋಗುವ ಒಂದು ಸಂಸ್ಕಾರವೇ ಮುಂಜಿ. ಈಗ ಗುರುಕುಲವೂ ಇಲ್ಲ, ತರ್ಕಬದ್ಧವಾಗಿ ಮುಂಜಿಯೂ ಇಲ್ಲವೆಂದಂತಾಗಲಿಲ್ಲವೆ ?

ಪರಿಸ್ಥಿತಿಗೆ, ತಕ್ಕಂತೆ ಎಲ್ಲವೂ ಅದಬದಲಾಗುತ್ತಲೆ ಇರುತ್ತದೆ. ಧರ್ಮವೂ ಪರಿಸ್ಥಿತಿಗೆ ತಕ್ಕಂತೆ ಬದಲಾಗುತ್ತಲೆ ಇದೆ, ಇರಬೇಕು. ಪ್ರಾಚೀನ

ಧರ್ಮ ಅದನ್ನು ಹೇಗೆ ಬಿಟ್ಟುಕೊಡುವುದು ಎಂದು ಬಗೆದು ಅದರ ಸಂಕೇತಕ್ಕೆ ಮಾತ್ರ ಭಾವಿಕರು ಜೋತುಬೀಳುತ್ತಾರೆ.

ಜಾನಕಿ, ನಾವು ವಿಚಾರವಂತರ ಹಾದಿ ಹಿಡಿಯಬೇಕು, ಭಾವಿಕರ ಹಾದಿ ಅನವಶ್ಯಕ, ಅಪಾಯಕರವೆನಿಸಿದಾಗ; ತಿಳಿಯಿತೆ ?

ಎಂದ ಮೇಲೆ ಒಮ್ಮೆ ನನ್ನೊಡನೆ ಇರಾಣಿ ಅಂಗಡಿಯಲ್ಲಿ ಆಮ್ಲೆಟ್, ಕಟ್ಲೆಟ್ ತಿನ್ನುವುದಕ್ಕೂ ನೀನು ಹಿಂಜರಿಯಬಾರದು, ಆಂ ?

ನಿನ್ನ ಶಬ್ದಶಃ
—ಶ್ರೀರಾಮು

*　*　*　*

ಧಾರವಾಡ
............

ಶ್ರೀರಾಮಚಂದ್ರಾ
ನಿಜ ಮಮ ಶುಭತತಿಮಯಿ ಕಾರುಣ್ಯಸಾಂದ್ರಾ ।

ಸೌಭಾಗ್ಯವತಿ ಜಾನಕಿಯ ಶಿ। ಸಾ। ನಮಸ್ಕಾರಗಳು.

ಅಂತೂ ನಿಮ್ಮ ಫ್ಯಾಶನೆಬಲ್ ಪುರಾಣದ ಪತ್ರ ಓದಿದೆ. ನಿಮ್ಮ ಪುರಾಣದ ಉದ್ದೇಶ ನನಗೊಮ್ಮೆ ಇರಾಣಿ ಅಂಗಡೀದೊ ಕಿರಾಣಿ ಅಂಗಡೀದೊ, ಕಟ್ಲೆಟ್ಟೊ ಪಟ್ಲೆಟ್ಟೊ ತಿನಿಸಬೇಕು ಅಂತ ಹೌದಲ್ಲೊ?

ಅಲ್ಲಾ ಒಂದು ವರ್ಷ ಬೆಳಗಾಂವಿಗೆ ಹೋಗೂ ಪುರಸತ್ತಿಗಿಲ್ಲದ ಇಷ್ಟೆಲ್ಲಾ ದುಶ್ಚಾಳಿ ಹ್ಯಾಂಗ ಕಲಿತಿರಿ ? ಇನ್ನೇನು ಬರಬರತ ಏಕ್ಕಚ-ಪ್ಯಾಲಾನೂ ಸುರುವಾಗತದೊ ಏನು ಮಣ್ಣೊ !

ಅಲ್ಲಾ ಅದೇನದು ಕಟ್ಲೆಟ್ ಅಂದರ? ಬರೇ ಕಡ್ಡಿಹಿಟ್ಟು ಇರತದೊ, ಮತ್ತೇನಾರ ಸುಡ್ಲಿ ರಬ್ಬರ ಗಿಬ್ಬರ ಇರತದೊ ? ನೀವು ಹಿಂಗೆಲ್ಲಾ ಮಾಡೊ ಹಾಂಗಿದ್ದರೆ........................ದೇವರ, ಏನು ಹೇಳಲಿ ನಿಮಗ ? ಅಲ್ಲಾ ಹೀಂಗ್ಯಾಕ ಮಾಡತೀರಿ ನೀವು? ನಾ ಬ್ಯಾಡಾಗೀನೇನು ನಿಮಗ? ನಾ ಬೇಕಾಗಿದ್ದರ ನೀವು ಹೀಂಗ ಎಂದೂ ಮಾಡತಿದ್ದಿಲ್ಲಾ. ಹೀಂಗೆಲ್ಲಾ ಮಾಡಿದರ ಭಾಳ ಸುಧಾರಿಸಿದವರು ಅಂತಾರೇನು ಜನ್ರು ನಿಮಗ ?

ನೀವು ಹೀಂಗೇನಾರ ಕುಲಗೆಟ್ಟು ಬಂದರ ನನಗ ನಾಲ್ಕ ಮಂದಿಯೊಳಗ ಮಾರೀ ತೋರಸಧಾಂಗ ಆಗತದ.

ಛಲೋತ್ನ್ಯಾಗಿ ಯಾರೋ ನಿಮ್ಮ ತಲಿಗೆ ತಿಕ್ಕಿರಬೇಕು. ಏನು ನಿಮ್ಮದs ತಲಿ ನಾದುರಸ್ತ ಆಗೇದೊ ಯಾರಿಗೆ ಗೊತ್ತು. ಇಲ್ಲದಿದ್ದರ ಇದೇನಿದು? ಹಿಂದಿನ ಕಾಲದಾಗ ಹೆಂಗಸರೂ ಮುಂಜಿವಿ........ಥೂ ಸುಡ್ಲಿ ಇದೇನಿದು ಅವಿಚಾರ ಅಂತೀನಿ !

ಒಟ್ಟೇನು, ನಾ ನಿಮಗ ಯೋಗ್ಯಳಲ್ಲ. ನೀವು ಎಲ್ಯೊ ಮಡ್ಡಮ್ಮನ ಮಾಡಿಕೋಬೇಕಾಗಿತ್ತು. ದುರ್ದೈವದಿಂದ ತಪ್ಪಿ ನನ್ನ ಕೈ ಹಿಡದೀರಿ ಆತು. ಇನ್ನೇನು ಮಾಡೂದದ, ಮಾಡಿಕೊಂಡ ತಪ್ಪಿಗೆ ಇಬ್ಬರೂ ಅನುಭೋಗಿಸೇ ತೀರಬೇಕಲ್ಲ !

ನನಗ ಯಾಕೊ ಬಹಾಳ ಕೆಡಕು ಅನಿಸಿ ಕಣ್ಣಾಗ ನೀರು ಬರಲಿಕ್ಕೆ ಹತ್ತ್ಯಾವ. ನಿಮ್ಮ ಮರ್ಜಿ ತಿಳಧಾಂಗ ಮಾಡ್ರಿ, ಮನಸಿಗೆ ಬಂಧಾಂಗ ಇರ್ರಿ.

ನಿಮ್ಮ ಅದೃಷ್ಟಗೇಡಿ,
—ಜಾನಕಿ

* * * *

ಬೆಳಗಾಂವಿ
.... .......

ಹೃದಯೇಶ್ವರಿ,

ಅಶ್ವತ್ಥಮ್ಮನ ರಾಮನಾಮದಿಂದಾರಂಭಿಸುವ ನಿನ್ನ ಓಲೆಯ ಝಳದಿಂದ ಕಮಲದಂತೆ ಕಮರಿ ಹೋಗಿದ್ದೇನೆ.

ಜಾನಕಿ, ' ಸ್ಥೂಣಾನಿಖನನ್ಯಾಯ ' ಎಂಬುದೊಂದು ತಾರ್ಕಿಕ ಪದ ಪ್ರಯೋಗವಿದೆ. ಕಂಭವನ್ನು ಅಲುಗಾಡಿಸಿದಷ್ಟು ಅದು ಆಳವಾಗಿ ಗಟ್ಟಿಯಾಗಿ ನಿಲ್ಲುತ್ತದಂತೆ. ಹಾಗೆ ಗಂಡಹೆಂಡಿರು ಜಗಳಾಡಿದಷ್ಟು ಪ್ರೇಮವು ಸ್ಥಿರವಾಗುತ್ತದೆಂದು ನನ್ನ ಮತ. ನಿನಗೆ ನೆನಪಿದೆಯೇ ? ಇದೇ ಬಗೆಯಾಗಿ ಒಂದು ಚಕಮಕಿಯಾಗಿ ಹೋಯಿತು ನನ್ನ ನಿನ್ನ ನಡುವೆ? ಪರಕಾರ ಉಟ್ಟು

ಕೊಳ್ಳುವ ಪ್ರಿಯಂವದೆಯ ಬಗ್ಗೆ ನೀನೇನೋ ಸಂಶಯಜಾಲವನ್ನು ಬೀಸಿ ಬಿಟ್ಟಿದ್ದಿ. ಈಗ ಆಮ್ಲೆಟ್-ಕಟ್ಲೆಟ್‌ಗಳ ಬೀರುಗಾಳಿಯನ್ನು ಈ ಓಲೆಯ ಬಟ್ಟಲಲ್ಲಿ ಬೀಸಿದ್ದೀ.

ಜಾನಕಿ, ಪ್ರಿಯಂವದೆಯ ಪ್ರಕರಣದಲ್ಲಿ ನಾನು ಒಂದಿಷ್ಟು ಆವೇಶದಿಂದ ಬರೆದಿದ್ದಾಗ ನೀನೆಷ್ಟೊಂದು ಮರುಗಿ ಉತ್ತರ ಬರೆದಿದ್ದಿ ನೆನಪಿದೆಯೆ ? ಬಹಳ ಪಶ್ಚಾತ್ತಾಪಪಟ್ಟುಕೊಂಡು ಕರುಣೆ ಹುಟ್ಟುವಂತೆ ಉತ್ತರಿಸಿದ್ದಿ. ನನ್ನ ಹಿಂದಿನ ಪತ್ರದಲ್ಲಿ 'ನಾವು ವಿಚಾರವಂತರ ಹಾದಿ ಹಿಡಿಯೋಣ, ಭಾವಿಕರ ಹಾದಿ ಅನವಶ್ಯಕ' ಎಂದು ತಿಳಿಸಿದ್ದೇನೆ,ಅದನ್ನು ವಿಚಾರಿಸಿ ನೋಡು ಜಾನಕಿ.

ನನಗೆ ಈ ಬಿ. ಟಿ. ಮುಗಿದ ಮೇಲೆ ದೂರ ಎಲ್ಲಿಯಾದರೂ ನೌಕರಿಯಾಯಿತೆಂದು ತಿಳಿ. ಅಲ್ಲಿಯ ವಾತಾವರಣದಂತೆಯೆ ಇರಬೇಕಾಗುತ್ತದಲ್ಲವೆ ? ಅಥವ ಶಾಲೆಯಲ್ಲಿ ಒಳ್ಳೇ ನೌಕರಿ ಸಿಗದಿದ್ದರೆ ಸೈನ್ಯದಲ್ಲಿ ಭರತಿ ಆಗಿ ಸಮುದ್ರದಾಚೆಗೆ ಹೋಗುವ ಪರಿಸ್ಥಿತಿ ಬಂತೆಂದು ತಿಳಿ. ಅಲ್ಲಿ ನಾವಿಬ್ಬರೂ ಹೋಗುವ ಪ್ರಸಂಗ ಬಂದರೆ—ಅಲ್ಲಿ ನಿನ್ನ ಮಡಿ-ಮೈಲಿಗೆ ನಡೆದೀತೆ ? ವಿಲಾಯತಿಯಲ್ಲಿ ಮಾಂಸಾಹಾರಿಗಳಾಗಿದ್ದರೇನೆ ಜೀವನೋಪಾಯವನ್ನು ಸುಲಭವಾಗಿಸಲುಬಹುದು ಎನ್ನುತ್ತಾರೆ. ಅಂತಹ ದೇಶದಲ್ಲೆಲ್ಲಾ ನಿನಗೆ ಸಂಪತ್‌ಶುಕ್ರವಾರಕ್ಕೆ ಪಡವಲಕಾಯಿಯ ಸಂಭಾರವೇ ಆಗಲಿಕ್ಕೆಬೇಕು ಎಂದರೆ ಹೇಗೆ ಸಾಧ್ಯ ? ಅಷ್ಟು ದೂರ ಬಿಡು. ಒಂದು ವೇಳೆ ಮುಂಬಯಿಯಂತಹ ಸ್ಥಳದಲ್ಲಿ ನೌಕರಿ ಮಾಡುವ ಪ್ರಸಂಗ ಬಂತೆಂದು ತಿಳಿ. ಅಗ್ರಹಾರದಲ್ಲೇ ನಿನಗೆ ಮನೆ ಸಿಗಬೇಕೆಂದರೆ ಸಾಧ್ಯವೆ ? ' ಭೆಂಡಿಬಾಜಾರ ' ದಂತಹ ಸ್ಥಳದಲ್ಲೂ ಇರಬೇಕಾಗಬಹುದು. 'ಭೆಂಡಿಬಾಜಾರ' ಅಂದರೆ ಅಲ್ಲಿ ಕೇವಲ ದಾಡಿಯ ಸಾಬರಿರುವ ಸ್ಥಳ. ಚಾಕು-ಚೂರಿಗಳ ಪ್ರದರ್ಶನ ಆಗಾಗ ಇದ್ದದ್ದೆ. ಅಂತಹ ಸ್ಥಳದಲ್ಲಿ ಇರಾಣಿ ಅಂಗಡಿಯೂ ಹೌದು, ಕಿರಾಣಿ ಅಂಗಡಿಯೂ ಹೌದು, ಎಲ್ಲಾದರಲ್ಲಿ ತಿಂಡಿತಿನಸುಗಳನ್ನು ತೆಗೆದುಕೊಳ್ಳಬೇಕಾಗಬಹುದು.

ಜಾನಕಿ, ಧರ್ಮವೆಂದರೇನು ? ಮನುಷ್ಯನು ಮಾಡತಕ್ಕ ಕರ್ತವ್ಯ. ಕರ್ತವ್ಯಪಾಲನೆಯೊಂದು ಪೂರೈಸಲ್ಪಡಬೇಕಾದುದು. ಅದು ಹೇಗೆ ಪೂರೈಸಲ್ಪಟ್ಟರೇನು ? ಹಾಗೆಂದು ವಾಮಪಂಥವನ್ನು ನಾನು ಉಪದೇಶಿಸುತ್ತೇನೆ ಎಂದು ತಿಳಿಯಬೇಡ, ತತ್ವತಥ್ಯಗಳನ್ನರಿತುಕೊಂಡು ಆಚರಿಸಬೇಕಾಗುತ್ತದೆ

ಧರ್ಮದ ತಿರುಳು ತೆಂಗಿನ ತಿಳಲಿನಂತಿರುತ್ತದೆ. ಅದರೊಳಗಿನ ಕೊಬ್ಬರಿಯನ್ನು ಹುಡುಕಲರಿಯದೆ ಬರಿ ಹೊರಗಿನ ಪರಟೆಗೆ ಬಡದಾಡಿದರೆ ಹೇಗೆ?

ವ್ಯಾಸಮಹರ್ಷಿಗಳ ಮಹಾಭಾರತದಲ್ಲಿ ಧರ್ಮವ್ಯಾಧನೆಂಬ ಒಬ್ಬ ಬೇಡನು ಬ್ರಾಹ್ಮಣಶ್ರೇಷ್ಠನೊಬ್ಬನಿಗೆ ಧರ್ಮದ ತಿರುಳನ್ನು ತಿಳಿಸಿ ಹೇಳಿದ ಕತೆಯನ್ನು ನೀನು ಕೇಳಿದ್ದೀಯಾ? ಹಾರುವನೊಬ್ಬನು ಹಸಿರುಮರದ ನೆರಳಿಗೆ ಸಮಾಧಿಯಲ್ಲಿ ಕುಳಿತಿದ್ದಾಗ ಒಂದು ಪಕ್ಷಿ ಉಚ್ಛಿಷ್ಟವನ್ನು ಕೆಡವಿತಂತೆ. ಕಿಡಿಗಣ್ಣಿನಿಂದ ಹಾರುವನು ಪಕ್ಷಿಯನ್ನು ನೋಡಿದ. ಪಕ್ಷಿ ಕಮರಿ ನೆಲಕ್ಕೆ ಉರುಳಿತು. ಹಾರುವನು ಭಿಕ್ಷಾಟನಕ್ಕೆ ತೆರಳಿದ. ಗೃಹಿಣಿಯೊಬ್ಬಳು ಬೇಗನೆ ಹೊರಗೆ ಬಂದು ಭಿಕ್ಷೆ ಹಾಕಲಿಲ್ಲವಂತೆ. ಹಾರುವನು ಮತ್ತೆ ಕಿಡಿಕಿಡಿಯಾದ. ಗೃಹಿಣಿಯೆಂದಳು : ' ಕಣ್ಣು ತೆರೆಯಲಿಕ್ಕೆ ನಾನೇನು ಹಕ್ಕಿಯಲ್ಲ ' ಎಂದು. ಹಾರುವನಿಗೆ ದಿಗಿಲು ಬಿತ್ತು. 'ನಿನಗೆ ಹೇಗೆ ತಿಳಿಯಿತು?' ಎಂದು ಕೇಳಿದ. 'ಕೆಲವು ಯೋಜನದಂತರದಲ್ಲಿ ಧರ್ಮವ್ಯಾಧನೆಂಬ ಬೇಡನೊಬ್ಬನಿದ್ದಾನೆ. ಅವನನ್ನು ಹೋಗಿ ವಿಚಾರಿಸು' ಎಂದಳಾಕೆ. ಹಾರುವ ಅಲ್ಲಿಗೆ ಹೋದ. ಧರ್ಮವ್ಯಾಧನು ಒಬ್ಬ ಬೇಡ. ಆದರೆ ತನ್ನ ಕರ್ತವ್ಯವೇ ತನ್ನ ಧರ್ಮವೆಂದು ಬಗೆದು ಬೇಟೆಯಾಡಿ ಮಾಂಸ ಮಾರಿ ತನ್ನ ಮುಪ್ಪಿನ ತಂದೆತಾಯಿಗಳನ್ನು ಸಲಹುವುದೊಂದೆ ತನ್ನ ಕರ್ತವ್ಯವೆಂದು ಬಗೆದಿದ್ದ ಅವನಿಗೆ ಅದುವೆ ಮೋಕ್ಷದ ಮಾರ್ಗವೆಂದು ತೋರಿತು. ಅದನ್ನೆ ಧರ್ಮವ್ಯಾಧನು ಹಾರುವನಿಗೆ ಅರುಹಿದ.

ಮುಖ್ಯ ಮಾತೆಂದರೆ ಇಷ್ಟೆ—ಹಾರುವನೂ ಕೂಡ ಬೇಡನಿಂದ ಧರ್ಮವೆಂದರೇನೆಂಬುದನ್ನು ಅರಿತುಕೊಂಡ ಎಂಬುದು. ಮತ್ತು ಈ ಮಾತನ್ನು ವ್ಯಾಸಮಹರ್ಷಿಗಳು ಹೇಳುತ್ತಾರೆಂದ ಮೇಲೆ ಜಾನಕಿ, ಧರ್ಮವು ಎಷ್ಟು ವ್ಯಾಪಕ ಮತ್ತು ಸ್ಥಿತ್ಯಂತರವುಳ್ಳದ್ದಾಗಿದೆಯೆಂಬುದನ್ನು ನೀನೇ ತಿಳಿದುಕೋ.

ಹೌದು. ನಾನು ಬಲ್ಲೆ. ನೀನು ಈ ಓಲೆ ಓದುವುದಕ್ಕೆ ಬೇಸರಿಯಬಹುದು. ಆದರೆ ನಾವು ನಮ್ಮಿಬ್ಬರ ವಿಚಾರ ಅಭಿಪ್ರಾಯಗಳನ್ನು ಹೊಂದಿಸಿಕೊಳ್ಳಬೇಕಾದುದರಿಂದ ನಿನಗೆ ಇಷ್ಟೆಲ್ಲಾ ಪುರಾಣ ಹೇಳಬೇಕಾಯಿತು. ಪುರಾಣ ಬಿಟ್ಟು ಕುರಾಣದ ಆಧಾರದಿಂದ ನಿನಗೆ ಹೇಳಿದರೆ ಮೂಗು ಮುರಿಯುವ ಮುಗುಧೆ ನೀನು.

ಮಹಾಭಾರತದಿಂದಲೆ ಇನ್ನೊಂದು ಕತೆಯನ್ನು ನಿನ್ನ ನೆನಪಿಗೆ ತರು

ತ್ತೇನೆ. ಹಿಂದೊಮ್ಮೆ ಈ ಕತೆಯನ್ನು ನಿನಗೆ ಹೇಳಿದ್ದೇನೆ. ನೆನಪಿರಬಹುದಲ್ಲವೆ ನಿನಗೆ ?

ರುಕ್ಮಿಣಿ-ಸತ್ಯಭಾಮೆಯರು ಒಮ್ಮೆ ದ್ರೌಪದಿಗೆ ಕೇಳಿದರಂತೆ : ' ಸಾವಿರ ಹೆಂಡಿರಾದ ನಾವು ಒಬ್ಬ ಶ್ರೀಕೃಷ್ಣನನ್ನು ಅಂಕಿತದಲ್ಲಿಟ್ಟುಕೊಳ್ಳಲಿಕ್ಕೆ ಅಸಮರ್ಥರಾಗಿದ್ದೇವೆ. ನೀನೊಬ್ಬಳೇ ಐವರು ಗಂಡರನ್ನು ಹೇಗೆ ಅಂಕಿತದಲ್ಲಿಟ್ಟುಕೊಂಡಿದ್ದೀ ? ಇದಕ್ಕೇನಾದರೂ ಮಂತ್ರ ತಂತ್ರಗಳಿದ್ದರೆ ನಮಗೆ ಹೇಳಬಾರದೆ ?' ಎಂದು. ದ್ರೌಪದಿ ನಕ್ಕು ಹೇಳಿದಳಂತೆ—' ನೀವು ಹೇಳುವ ಮಂತ್ರ ಮಾಟಗಳೊಂದೂ ನನ್ನಲ್ಲಿಲ್ಲ. ಆದರೆ ಒಂದೇ ಮಂತ್ರವನ್ನು ನಾನು ಬಲ್ಲೆ. ಅದೆಂದರೆ, ನನ್ನೈವರ ಒಲವುಗಳನ್ನು ಸೂಕ್ಷ್ಮದಿಂದ ತಿಳಿದುಕೊಂಡು ಅದರಂತೆ ನಡೆಯುವುದು. ' ನೋಡಿದೆಯಾ ? ದ್ರೌಪದಿಯ ಔಷಧವೆಂತಹದಿತ್ತು ? ಹೀಗೆಂದು ಇಂದಿನ ಹೊಸಯುಗದಲ್ಲಿ ಸ್ತ್ರೀಯರಿಗೆ ವೈಯಕ್ತಿಕ ಅಭಿಪ್ರಾಯವಿರದೆ ಅವರು ಗಂಡನ ಗುಲಾಮರಾಗಿರಬೇಕೆಂದು ನನ್ನರ್ಥವಲ್ಲ; ಗಂಡನಿಗಾಗಿ ಬೇಕಾದ ತ್ಯಾಗ ಮಾಡಬಲ್ಲ ಮನಸ್ಸಿನ ಸಿದ್ಧತೆ ಇರಬೇಕು. ಜಾನಕಿ, ಪ್ರೇಮವೆಂದರೆ ಪರಸ್ಪರರಿಗಾಗಿ ಪರಸ್ಪರರ ತ್ಯಾಗ. ನನಗಾಗಿ ನೀನು ತ್ಯಾಗ ಮಾಡಬೇಕು, ನಿನಗಾಗಿ ನಾನು ತ್ಯಾಗ ಮಾಡಬೇಕು. ಇದುವೆ ಉಭಯಪ್ರೇಮಸಂಪಾದನೆಯ ಸಾಧನ.

ಬಹಳುದ್ದವಾಯಿತು ಓಲೆ. ನನ್ನ ಪುರಾಣವೂ ಉದ್ದವಾಯಿತು. ಇನ್ನು ವಿಶೇಷ ಬೆಳೆಯಿಸದೆ ಈ ಕ್ಷಣಕ್ಕೇ ನಿಲ್ಲಿಸಿಬಿಡುತ್ತೇನೆ.

ನಿನ್ನ ಪ್ರೇಮಾರ್ಥಿ
—ಜಾನಕಿರಮಣ

* * * *

ಧಾರವಾಡ
..............

ಪ್ರಿಯ ಪ್ರಾಣನಾಥರಿಗೆ,

ನಿಮ್ಮ ಪುರಾಣದ ಮಂಗಳವನ್ನು ಕೇಳಿದೆ. ಅಂತೂ ಒಮ್ಮೆ ಪುರಾಣ ಮುಗಿಸಿದ್ದಕ್ಕಾಗಿ ದೇವರಿಗೆ ಕಾಯಿ ಒಡೆಯಿಸುತ್ತೇನೆ.

ನಿಮ್ಮ ದ್ರೌಪತಿ ಕಥೆ, ಬೇಡನ ಕಥೆ ಕೇಳಿದೆ. ಇದಕ್ಕೆ ಏನು ಹೇಳ ಬೇಕೋ ತಿಳಿಯುದಂತಾಗೇದ.

ಹಾಂಗಾದರ ಶ್ರಾವಣಮಾಸಾ, ಚಾತುರ್ಮಾಸಿ, ಗೌರಿ, ಗಂಗಿ ಎಲ್ಲಾ ಬ್ಯಾಡಾ ಅಂತೀರೇನು? ಇದೇನಿಮು ಬರಬರತ? ಮುವಿ ಆಂದಮ್ಯಾಲೆ ಹಬ್ಬ-ಹುಣ್ಣವಿ ಇರೋವನs. ಹಬ್ಬಾ-ಹುಣ್ಣಿವಿ ಅಂದಮ್ಯಾಲೆ ಶಾಸ್ತ್ರದ ಪ್ರಕಾರ ಹೂರಣಾ, ಕಣಕಾ ಮಾಡಲಿಕ್ಕೇಬೇಕಾಗತದ ನೀವು ಮುಂದಿನ ಸಂಸಾರದ ಸವಿಸವಿ ವರ್ಣನಾ ಮಾಡಕೋತ ನಮ್ಮ ಹಬ್ಬ ಹುಣ್ಣಿವಿಗೇನs ಚಕ್ರಾ ತರಲಿಕ್ಕೆ ಹತ್ತೀರೆಲ್ಲಾ ?

ಆಗಲಿ. ತಿರುಗಿ ಮತ್ತೇನಾರ ಅಂದರ ಮತ್ತ ಸಿಟ್ಟಿಗೆ ಬರತೀರಿ. ಇನ್ನೇನು ಅನ್ನಲಿಕ್ಕೆ ಹೋಗೋದಿಲ್ಲಾ. ನೀವು ತಂದಷ್ಟರೊಳಗ ಮಾಡಿ ಹಾಕೋದು ನನ್ನ ಕೆಲಸಾ. ನಿಮುಗ ದೇವರು ಧರ್ಮಾ ಬ್ಯಾಡಾ ಅಂದ ಮ್ಯಾಲೆ ನನಗಾದ ಯಾಕ ?

ಬರಬರತ ಸಂಸಾರ ಬೆಳೀಲಿಕ್ಕೆ ಹತ್ತಿತು. ಮನಿಯೊಳಗ ಮಕ್ಕಳು ಮರಿ ಅಂದ ಮ್ಯಾಲೆ ಛಂದಾಗಿ ಸಂಸಾರ ಮಾಡೋದು ಬಿಟ್ಟು ಇದೆಲ್ಲಿ ಲಂಡ ತನಾ ಕಲತಿರೊ ಏನೊ !

ಒಳ್ಳೇದು. ಮತ್, ನಿಮ್ಮ ನೆಳ್ಳಾಗಿ ಇರತೀವಿ ಅಂದ ಮ್ಯಾಲೆ ಹೆಚ್ಚಿಗೆ ಏನು ಬರೀಲಿ? ನನಗೂ ನಿಮ್ಮ ಪ್ರೀತಿ ಬೇಕು. ನಿಮ್ಮ ಸಲುವಾಗಿ ಈ ಜೀವಾ ಮೀಸಲಾಗೇ ಅದ. ನಿಮ್ಮ ಸೇವಾದೊಳಗs ದೇವರು ಮುತ್ತೈದಿ ತನದ್ಲೆ ನನ್ನ ಕಣ್ಣು ಮುಚ್ಚಿದರ ಇದಕ್ಕೂ ಹೆಚ್ಚಿನ ಪುಣ್ಯಾ ಬೇಕೇನು? ಆಮ್ಯಾಲೆ ಮನಿಯೊಳಗ ನೀವೂ ನಿಮ್ಮ ಮಹಾಭಾರತದ ಬ್ಯಾಡನ ಹಾಂಗ ಖಂಡಾ-ಮಾಂಸಾ ತಂದು ಕರ್ತವ್ಯನಿಷ್ಠಾ ತೋರಿಸೀರಂತ.

ನಿಮ್ಮ ಅಂಗೈಯೊಳಗಿನ ಜೀವ,
—ಜಾನಕಿ

* * *

ಬೆಳಗಾಂವಿ
..............

ನನ್ನ ಜೀವದ ಜೀವ ಜಾನಕಿ,

ನಿನ್ನ ಪತ್ರ ಓದಿ ರೋಮರೋಮದಿಂದ ಸೂಜಿ ಚುಚ್ಚಿದಷ್ಟು ವೇದನೆಯಾಗುತ್ತಿದೆ ನನಗೆ. ನನ್ನ ವಿಚಾರದೃಷ್ಟಿ ನಿನಗೆ ಸಮ್ಮತವೆನಿಸದಿದ್ದರೆ ನಿನ್ನ ವಿಚಾರದೃಷ್ಟಿಯನ್ನೇ ಅಂಗೀಕರಿಸಲು ನಾನು ಸಿದ್ಧನಿದ್ದೇನೆ.

ಜಾನಕಿ, ಇಂತಹ ಮಾತನಾಡಿದರೆ ನನಗೆ ನೋವಾದೀತು ಎಂಬ ಅರಿವು ನಿನಗಿದ್ದೂ ಇಷ್ಟು ನೋವು ಕೊಡುವಷ್ಟು ನಿಷ್ಠುರಳಾದೆಯಾ ?

ಈಗ ಸದ್ಯಕ್ಕೆ ಇಲ್ಲದ ಕನಸಿನ ವಿಚಾರಗಳನ್ನು ತಂದೊಡ್ಡಿ ಚಕಮಕಿಯೆಬ್ಬಿಸಿ ನಮ್ಮ ಜೀವನವನ್ನು ಮುಳ್ಳುಹಾಸಿಗೆಯನ್ನು ಮಾಡಿಕೊಳ್ಳುವ ಆಸೆ ನನಗಿಲ್ಲ.

ನಿನ್ನ ಮುತ್ತೈದಿತನದ ಸಾವಿನ ಮಾತು ನನ್ನನ್ನು ಕೊಂದು ಒಗೆದಿದೆ. ಕವಿ ಬೇಂದ್ರೆಯವರ ' ಮನದನ್ನೆ ' ಇನ್ನೊಮ್ಮೆ ಓದು. ' ನನ್ನದಿದು ನಿನ್ನದದು ಎಂದು ಬೆಂದ ಹೆಣವನೆ ಕೊಂದು! ಭೂತಲೀಲೆಯಲೀಗ ತೊಡಗಬೇಡ! ' ಎಷ್ಟು ಮಾರ್ಮಿಕವಾಗಿದೆ ನೋಡು ಈ ಸಾಲು ! ನಿನ್ನ ಮಾತಿನ ಇರಿತದಿಂದ ನಾನಾಗಲೇ ಹೆಣವಾಗಿದ್ದೇನೆ.

ಇಂತಹ ನನ್ನ ಮಾತುಗಳು ನಿನ್ನನ್ನೂ ನೋಯಿಸುತ್ತವೆ, ನನಗೆ ಗೊತ್ತು. ಆದರೆ ನನಗುಂಟಾದ ದುಃಖದ ಉದ್ವೇಗದಿಂದ ಈ ಮಾತು ಹೊರಬಿದ್ದಿವೆ.

ಜಾನಕಿ, ಇನ್ನುಮೇಲಿಂದ ನೀನೂ ಹೀಗೆ ಮಾತಾಡಬೇಡ. ನಾನೂ ನಿನಗೆ ಬೇಡಾದ ವಿಷಯವನ್ನೆತ್ತುವದಿಲ್ಲ. ಜೀವನಸಂಗೀತದಲ್ಲಿ ಇಂತಹ ಅಪಸ್ವರಗಳೆದ್ದು ಎಲ್ಲ ಹದವನ್ನು ಕೆಡಿಸಿಬಿಡುತ್ತವೆ.

ಇನ್ನು ಪರೀಕ್ಷೆ ಬಹಳ ಸಮೀಪಕ್ಕೆ ಬಂತು. ಅದಷ್ಟು ಮುಗಿಸಿ ಬೇಗನೆ ಅತ್ತಕಡೆ ಬಂದುಬಿಡುತ್ತೇನೆ. ಆಮೇಲೆ ನೌಕರಿಯ ಅಶ್ವಮೇಧ-ಕುದುರೆಯಾಗಿ ಸುತ್ತಾಟ, ತೊಳಲಾಟ ಸುರುವು. ಒಂದು ವಿರಾಮಧಾಮ ಶೀಘ್ರವಾಗಿ ಸಿಕ್ಕರೆ ನಾವು ಧನ್ಯರಲ್ಲವೆ? ಮತ್ತೂ ಹರುಕು ಸಗಾರ, ಹೊಟ್ಟೆಕಿಚ್ಚಿನ

ಟ್ಯೂಶನ್‌ಗಳೆಂದರೆ ಈಗಲೆ ಮೈ ಝುಮಕರಿಸುತ್ತದೆ. ದೇವರು ಸಂಸಾರದ ಎರಡೂ ಬಾಯಿಗೂಡುವಷ್ಟಾದರೂ ಪ್ರಾಪ್ತಿ ಕೊಡುತ್ತಾನೆಂದು ಹಾರೈಸುತ್ತೇನೆ. ಈ ಟ್ಯೂಶನ್‌ಗಳು ತಪ್ಪಿದರೆ ಮತ್ತೊಂದು ಗಳಿಗೆ ನಿನ್ನೊಡನೆ ಸರಸವಾಗಿ ವೇಳೆ ಕಳೆಯಬಹುದಲ್ಲವೆ ಜಾನಕಿ?

ಜಾನಕಿ, ನಿನ್ನ ಕೋಪವಡಗಿತೆ? ನನ್ನ ಮುಖ ನೋಡಿ ನಿನ್ನ ಸಿಟ್ಟು ಮರೆಯಲಾರೆಯಾ?

ನಿನ್ನ ಮಗುವಿನ ಮಗು
—ರಾಮ

* * * *

ಧಾರವಾಡ
............

ಪ್ರಿಯ ರಾ. ರಾ. ರಾಮರಾಯರಿಗೆ,

ಥೂ, ಇದೇನು ಕೂಸಿನ ಹಾಂಗ ಮಾಡತೀರಿ ನೀವು! ಇದೇನು.... ಮಗುವಿನ ಮಗು ಅಂತ ಹೀಂಗೆಲ್ಲಾ ಬರದರ?

ಮತ್ತ ಇಂಥಾ ಸಾವು ಕೇಡಿನ ಮಾತು ಎತ್ತಿದರ ನನ್ನ ಆಣಿ ಆಗೇದ. ಒಳತು ಅನ್ನಿರಿ. ನಾನೂ ಎತ್ತೂದಿಲ್ಲಾ ಆಯಿತೆ?

ನೋಡಿರಿ, ಈ ಸಾರೆ ಯಾಕೊ ನಿಮ್ಮನ್ನ ಹೆಸರುಗೊಂಡೇ ಕರೆದು ಬಿಟ್ಟೇನಿ. ನಿಮ್ಮನ್ನ ಹೆಸರುಗೊಂಡು ಕರೀಬೇಕಾದರ ಹ್ಯಾಂಗ ಹ್ಯಾಂಗೋ ಅನಿಸಿಬಿಟ್ಟಿತು.

ಇನ್ನ ಸರ್ವಥಾ ನಾನು ನಿಮ್ಮ ಜೋಡಿ ತಪ್ಪು ಎಣಿಸುವದಿಲ್ಲ. ಹಬ್ಬಾ-ಹುಣ್ಣಿವಿ ಅಂತ ಸುದ್ದಾ ನಿಮ್ಮನ್ನ ಕಾಡೂದಿಲ್ಲ ಆತs? ಮನಿಯೊಳಗ ನೀವು ಬೇಕಾದ್ದು ನಿಮ್ಮ ಕಟ್ಲೆಟ್ಟೊ, ಆಮ್ಲೆಟ್ಟೊ ಮಾಡ್ರಿ ಆತs? ಆದರ ಸುಡ್ಲಿ, ಅವತ್ತೊಮ್ಮೆ ಬಾಯಾಗ ಸಿಗ್ರೇಟು ಇಡಲಿಕ್ಕೆ ಬಂಧಾಂಗ, ಇವನ್ನೂ ನನಗ ತಿನಸಲಿಕ್ಕೆ ಬರಬ್ಯಾಡ್ರಿ ಆತು.

ಹೌದು, ಈ ಶಿಕೋಣಿ ಅಂದರ ಬಹಳ ತಲಿಬ್ಯಾಸರದ ಕೆಲಸಾ. ಇನ್ನ ಮ್ಯಾಲಿಂದ ಇಂಥಾವು ಬ್ಯಾಡಾಬ್ಯಾಡಾ. ಹತ್ತು ರೂಪಾಯಿ ಪ್ರಪಂಚಕ್ಕ

ಕಡಿಮೆ ಆದರೂ ಚಿಂತೆ ಇಲ್ಲಾ. ಅಷ್ಟರೊಳಗ ಮಾಡಿಕೊಂಡು ಹೋಗ ಲಿಕ್ಕೆ ನಾನು ತಯಾರಾಗಿ ಇದ್ದೀನಿ. ನೀವು ಹೆಂಡರೂ ಮಕ್ಕಳ ಸಲುವಾಗಿ ಇಷ್ಟೊಂದು ರಕ್ತಾ ಸುಡೋದು ನಾನು ನೋಡಲಾರೆ.

ಏನು ಮಾಡ್ಲಿ ? ನಿಮುಗ ಯಾವ ರೀತಿಯಿಂದನೂ ನಾನು ನೆರವು ಆಗೋಹಾಂಗಿಲ್ಲಲ್ಲಾ ಅಂತ ಕೆಡಕು ಅನಸ್ತದ. ದೇವರು ಈ ಸಾರೆ ಆದರೂ ನಿಮುಗ ಒಂದಿಷ್ಟು ಈಡಾಗಿ ಕೈತುಂಬ ಪಗಾರ ಬರೋಹಾಂಗ ಮಾಡ್ಲಿ ಅಂತ ಬೇಡಿಕೋತೀನಿ.

ಲಗೂನ ನೀವೂ ನಿಮ್ಮ ಪರೀಕ್ಷ ಮುಗಿಸಿ ಬಂದುಬಿಡ್ರಿ. ನಾನೂ ನೀವು ಬರೋ ಹಾದೀನ ನೋಡಲಿಕ್ಕೆ ಹತ್ತೀನಿ.

ಇನ್ನ ಎಂದೆಂದೂ ಸರ್ವಥಾ ನಿಮ್ಮ ಮನಸ್ಸಿಗೆ ತ್ರಾಸ ಅನಿಸೋಹಾಂಗ ಮಾಡೋದಿಲ್ಲಾ.

ನೀವು ಪರೀಕ್ಷಾ ಮುಗಿಸಿ ಬರೋದರೊಳಗ ಇನ್ನೇನು ಪತ್ರಾ-ಉತ್ತರಾ ಹಾಕೋದು ಆಗತದೊ ಇಲ್ಲೊ ನಿಮುಗ. ಯಾಕಂದರೆ ನೀವು ಇನ್ನ ಅಭ್ಯಾಸದ ಗಡಿಬಿಡಿಯೊಳಗ ಬೀಳತೀರಿ. ಆದರ ಎಂದ ಬರತೀರಿ ಅದನ್ನಾರ ತಪ್ಪದೆ ತಿಳಸರಿ ಆತು. ನೀವು ಬರೋ ದಿವಸ ನಾನೂ ನಿಮ್ಮ ಮುದ್ದು ಮೋಹನನೂ ಶೃಂಗಾರಾಗಿ ನಿಮ್ಮ ಹಾದಿ ಕಾಯಕೋತ ಇರತೀವಿ.

ನೀವು ಸಿಟ್ಟು ಬಿಟ್ಟು ನಗತೀರಿ ಹೌದಲ್ಲೊ ?

ನಿಮ್ಮ ನಿಜವಾದ ಅರ್ಧಾಂಗಿ,
—ಜಾನಕಿ

* * * *

ಬೆಳಗಾಂವಿ
...............

ನನ್ನ ಹೃದಯಪಂಜರದ ಅರಗಿಳಿ ಜಾನಕಿ,

ಜಾನಕಿ, ನಾಳೇ ನಮ್ಮ ಪರೀಕ್ಷೆ. ಪರೀಕ್ಷೆಯ ಮುನ್ನಾದಿನ ನಿನಗೆ ಪತ್ರ ಬರೆಯುತ್ತ ಕುಳಿತರೆ ನನ್ನ ಬಿ. ಟಿ. ಇಳ್ಳೀ ಕಂತಿಗೆ ಕೂತೀತು. ಆದರೇನು ಮಾಡಲಿ! ನಿನ್ನ ಅಂತರಂಗಸ್ಪರ್ಶಿಯಾದ ಮಾರ್ಮಿಕ ಪತ್ರವನ್ನೋದಿ

ಈ ಪತ್ರ ಬರೆಯದೆ ಸಾಧ್ಯವಾಗಲಿಲ್ಲ. ನನ್ನ ಮುದ್ದು ಜಾನಕಿ ! ನಿನ್ನನ್ನು ಬಹಳ ನೋಯಿಸಿವೆನೆ ನಾನು ? ನೀನು ನೊಂದುಕೊಳ್ಳಬೇಡ ಜಾನಕಿ. ಜಾನಕಿಗೆ ತಕ್ಕ ರಾಮನಂತೇ ನಾನಿರುತ್ತೇನೆ. ರಾಮನಾಗಿಯೇ ಉಳಿಯುವೆ ನೆಂದು ರಾಮವಚನವನ್ನೀಯುತ್ತೇನೆ. ಕೈ ತಾ.

ಹುಂ ! ಕೈಯನ್ನೆಂದೋ ಕೊಟ್ಟುಬಿಟ್ಟಿದ್ದೀ ಅಲ್ಲವೆ ? ಜಾನಕಿ, ಒಂದೊಂದು ಕ್ಷಣಕ್ಕೆ ನೀನು ಮನಸ್ಸು ಮರಗಿ ಎಂತಹ ಕಲ್ಲು ಮನಸ್ಸಿನವ- ರನ್ನೂ ನಾಚಿಸುವಂತೆ ಮಾಡಿಬಿಡುತ್ತೀ. ನನ್ನ ಹಿಂದಿನ ಪತ್ರಕ್ಕೆ ನೀನೂ ಮತ್ತಷ್ಟು ಸಿಡುಕಿನಿಂದ ಪತ್ರ ಬರೆದಿದ್ದರೆ ಮತ್ತೆ ಅದರ ವಿಪರೀತ ಪರಿಣಾಮ ಹೇಗಾಗುತ್ತಿತ್ತೊ ಏನೊ ಯಾರು ಬಲ್ಲರು ?

ನೀನು ಎಷ್ಟು ಕೋಮಲೆಯೊ ಅಷ್ಟೇ ಜಾಣೆ, ಜಾನಕಿ ! ಅಂತೆಯೇ ಇಂತಹ ರಸಭರಿತ ಪತ್ರ ಬರೆದಿದ್ದೀ.

ಇನ್ನು ನಿನ್ನನ್ನು ನೋಯಿಸಿದರೆ ಮೋಹನನ ಆಣೆ, ಆಯಿತೆ. ಇಲ್ಲ, ನನ್ನ ಮುತ್ತೇ ! ನಿನ್ನನ್ನು ನೋಯಿಸುವುದಿಲ್ಲ. ನಿನ್ನಂತಹ ಕೋಮಲೆಯ ಮನಸ್ಸನ್ನು ನೋಯಿಸಿ ನಾನಾವ ಪಾಪಕ್ಕೆ ಗುರಿಯಾಗಲಿ?

ಜಾನಕಿ, ಇನ್ನು ಪತ್ರವನ್ನು ಇಷ್ಟಕ್ಕೇ ಮುಗಿಸಬೇಕಾಯಿತಲ್ಲ. ಎಷ್ಟು ಹೊತ್ತಾದರೂ ಇದೇ ರಾತ್ರಿಯೊಳಗಾಗಿ ಈ ಓಲೆ ಮುಗಿಸಿ ಅಂಚೆ ಕಾಣಿಸಿ ಬರಬೇಕೆಂದು ಕುಳಿತಿದ್ದೇನೆ. ಏಕೆಂದರೆ ನಾಳೆ ನಸುಕಿನಲ್ಲೇ ಟಪಾಲು ಕಟ್ಟು ತ್ತದೆ. ಸಂಜೆಗೇ ಇದು ನಿನ್ನ ಕೋಮಲ ಕೈಗೆ ಸಿಗಬೇಕೆಂಬುದು ನನ್ನ ಮನೀಷೆ. ಅಂತೆಯೇ ಇಷ್ಟು ಧಾವಿಸುತ್ತಿದ್ದೇನೆ. ನಾಳೆ ಸಂಜೆ ನೀನು ಈ ಪತ್ರ ಓದಿ ಉಲ್ಲಾಸಪಡುತ್ತಿರುವಾಗ ನಾನು ' ಎರಡು ಪೇಸರು ಮುಗಿದು ವಲ್ಲಪ್ಪ ! ' ಎಂದು ಅಲ್ಪವಿರಾಮದ ಉಸಿರನ್ನೆಳೆಯುತ್ತಿರುತ್ತೇನೆ.

ಜಾನಕಿ, ಮೋಹನನಿಗೆ ಶೃಂಗಾರ ಮಾಡಲಿಕ್ಕೆ ಪ್ರಾರಂಭಿಸು. ನೀನೂ ನಿನ್ನ ಪ್ರಸಾಧನಕ್ಕೆ ತೊಡಗು. ಒಂದು ವಾರಾಂತ್ಯದಲ್ಲಿ ವಾಸಕಸಜ್ಜಿಕೆಯಾದ ನಿನ್ನ ಬಳಿ ಹಾರಿ ಬರುವೆನು, ನನ್ನ ಪ್ರಾಣಪಾರಿವಾಳವೆ ! ಸಮರಸವೇ ಜೀವನವೆಂಬ ಸಂಗೀತಕ್ಕೆ ಸ್ವರ ಹಚ್ಚಲಿರುವ,

ನಿನ್ನ ಮೋಹದ
—ಮೋಹನಕಿ ಬಾಪ.

ಧಾರವಾಡ
.............

ಮೋಹನನ ಬಾಪೂಜಿಗೆ,

ಸಾಕು! ಹೆಂಡತಿಯ ಕಾಗದ ಬಂತೆಂದು ಪರೀಕ್ಷೆಯ ಕಾಗದವನ್ನೆ ಮರೆತೀರಿ! ಅಥವ ಹೆಂಡತಿಯ ಓಲೆಗೆ ಉತ್ತರವನ್ನು ನಿಮ್ಮ ಪರೀಕ್ಷೆಯ ಪೇಪರಿನಲ್ಲೇ ಬರೆದೀರಿ. ಯಾಕಂದರ ನಿಮ್ಮಲ್ಲ್ಯೂ ಸ್ವಲ್ಪ ಕವಿಗಳ ಅಂಶ ಅದ. ಅದಕ್ಕs ಅಂಜಿಕಿ.

ವಾರದ ಕಡೀಕೆ ಅಂದರ ಶನಿವಾರ ರಾತ್ರಿ ಗಾಡಿಗೆ ಬರತೀರಿ ಹೌದಲ್ಲೊ? ನನಗ ಗೊತ್ತು, ಹಗಲೊತ್ತಿನ ಗಾಡೀಗೆ ಬಂದರ ಹನ್ನೆರಡ ತಾಸು ಹ್ಯಾಂಗ ಕಳೆಯೋದು ಅಂತ ನಿಮಗ ಪ್ರಶ್ನೆ ಇರತದ. ಹಾಂಗs ಮಾಡ್ರಿ. ರಾತ್ರಿ ಗಾಡೀಗೆ ಬರ್ರಿ. ಬಿಸಿ ಬಿಸಿ ಅಡಿಗಿ ಮಾಡಿ, ಹಪ್ಪಳ ಸಂಡಿಗಿ ಕರಿದು ಇಬ್ಬರಿಗೂ ತಾಟು ಮಣಿ ಹಾಕಿ ಹಾದಿ ಕಾಯತಿರತೀನಿ, ಮೋಹನನ್ನ ಮಲಗಿಸಿ. ನೀವು ಬಂದ ಕೂಡ್ಲೆ ಇಬ್ಬರೂ ಕೂಡೆ ಊಟಕ್ಕ ಕೂಡೂಣಂತ. ಕೂಡೆ ಊಟಕ್ಕ ಕೂಡೂಣಂದರ ಮತ್ತ ಒಂದs ತಾಟಿನೊಳಗಲ್ಲಾ. ಇದು ನಮ್ಮ ತೌರಮನಿ; ಬ್ಯಾರೆ ಬ್ಯಾರೆ ತಾಟಿನೊಳಗ ಕೂಡೂಣು. ಮುಂದ ನಿಮಗ ನೌಕರಿ ಹತ್ತಿಂಪ ಅದs ಅಲ್ಲಾ, ಒಂದೇ ಕಲೀದ ತಾಟಿನೊಳಗ ಕೂಡೂಣಂತ ಆತs? ಆಗಲಿ, ಆ ಸಂಭ್ರಮನೂ ಆಗಲಿ, ನನಗ ನೀವು ಆಪೋಶನಾ ಹಾಕೀರಂತ, ನಿಮಗ ನಾ ಹಾಕತೀನಂತ. ಲಗೂನ ಊಟಾ ಕೆಲಸಾ ಮುಗಿಸಿದವರೆ (ಅಂದರ ನೀವೂ ಕೆಲಸಕ್ಕ ಮುದ್ದತ ಆಗರಿ ಅಂತ ಅರ್ಥಲ್ಲ) ಮೊದಲ ತಯಾರ ಮಾಡಿಟ್ಟ ವಿಡಾ ಬಾಯಾಡಿಸಿಗೋತ ಅಟ್ಟಕ್ಕ ಏರೋಣಂತ. ಒಳ್ಳೇದು ಊಟಕ್ಕ ತಾಟು ಎರಡು ಮಾಡಿದರೂ ಹಾಸಿಗಿ ಬೇಕಾರ ಒಂದs ಮಾಡೂಣಂತ ಆತs?........ಥೂ ಸುಡ್ಲಿ, ನನಗs ನಾಚಿಗಿ ಬರತದ ಹೀಂಗೆಲ್ಲಾ ಬರೀಲಿಕ್ಕೆ. ಇಂಥಾವೆಲ್ಲಾ ಪತ್ರ ಮತ್ತ ತಪ್ಪಿ ಇನ್ನೊಬ್ಬರ ಕೈಗೆ ಸಿಕ್ಕರ ಪಂಚೇತಿ, ಹೌದಲ್ಲೊ? ಏನು ಹುಚ್ಚುಚ್ಚಾರ ಬಡೀತಾವಿವು ಗಂಡಾ-ಹೆಂಣ್ತಿ ಅಂದಗಿಂದಾರೂ!

ಹೂಂ. ಇವೊತ್ತಿಗನ್ನೂ ಸೋಮವಾರ. ರಾತ್ರಿ ಆಗೇದ ಅಂದಮ್ಯಾಲ ಸೋಮವಾರೇನು ಲೆಕ್ಕದೊಳಗಿಲ್ಲ. ಮಂಗಳವಾರ, ಬುಧವಾರ, ಗುರು-ವಾರ, ಶನಿ ಅಲ್ಲ, ಸುಡ್ಲಿ ಶುಕ್ರವಾರೊಂದದ ಅಲ್ಲಾ ನಡುವೆ. ಓಳತು, ಶುಕ್ರವಾರ ಅಂದರ ಲಕ್ಷ್ಮೀ ವಾರಲ್ಲೂ ಹಾಂಗೆಲ್ಲಾ ಬೈಬಾರದು.

ಅಂತೂ ಶನಿವಾರ ರಾತ್ರಿ ಆಗೂದು ತಪ್ಪೀತು, ನೀವು ಬರೂದು ತಪ್ಪ ಬ್ಯಾಡ್ರಿ. ಮಲಕೊಂಡ ಮೋಹನಗ ನಿಮ್ಮ ಹೆಸರ್ಲೆ ಒಂದು ಮುತ್ತು ಕೊಟ್ಟು ಅದರ ಸಿಹಿ ಇದರೊಳಗ ಹಾಕಿ ಕಳಿಸೀನಿ.

ನಿಮ್ಮ
—ಶಬರಿ

* * * *

ಬೆಳಗಾಂವಿ
...............

ಕಾದಿರುವ ಶಬರಿಗೆ,

ರಘುವರನ ವಂದನೆ, ಅಲ್ಲಲ್ಲ ಆಶೀರ್ವಾದಗಳು. ಬೆಳಗಾಂವಿಯಿಂದ ಬರೆಯುವ ಕೊನೆಯ ಪತ್ರ ಇದು. ಅಂತೇ ಈ ದಿನ ಬರೆಯುತ್ತಿದ್ದೇನೆ. ಜಾನಕಿ, ಪೇಪರು ಎಲ್ಲಾ ನೆಟ್ಟಗಾಗಿವೆ.

ಹೋಗ್ಲಿ ಬಿಡು, ಪೇಪರ ತೊಗೊಂಡು ಏನು ಮಾಡತಿ. ಮೋಹನನ ಮುತ್ತಿನ ಸವಿ ನೋಡಿ ಅದಕ್ಕೂ ಹೆಚ್ಚಿನದಕ್ಕೆ ಕಮಲದ ಮಕರಂದದ ವಾಸನೆ ಬಡೆದು ಭ್ರುಂಗದಂತೆ ಹಾರುತ್ತ ಬರಲಿರುವ,

ನಿನ್ನ ರಸಿಕ
—ರಾಮಚಂದ್ರ

* * * *

ತಾ. ಕ.

ಜಾನಕಿ, ಇನ್ನು ಪತ್ರ ಬರೆಯುವ ಪ್ರಸಂಗ ತಪ್ಪಿತು. ಯಕ್ಷನಿನ್ನು ಅಲಕಾವತಿಗೆ ತೆರಳಲಿದ್ದಾನೆ. ನಾಳೆ ಮಧ್ಯಾಹ್ನ ಹೊರಡುತ್ತೇನೆ. ಈ ಪತ್ರ ನನಗಿಂತ ಒಂದೆರಡು ತಾಸು ಮೊದಲು ಮಾತ್ರ ಮೇಘದೂತನಂತೆ ನಿನ್ನ ಬಳಿ ಬರಬಹುದು, ಅಷ್ಟೆ.

ಇತಿ ಪತ್ರಪುರಾಣೇ ರೇವಾಖಂಡೇ ಅಂತಿಮೋಧ್ಯಾಯಃ ಸಮಾಪ್ತಃ.

ನಿನ್ನ

—ಜೇನ್ಮೋಣ



ವಿದ್ಯಾ ಬಂದು ಬಾಗಿಲು ಬಡಿದರೂ ರಾಮನಾಥನಿಗೆ ಎಚ್ಚರವಿರಲಿಲ್ಲ. ಓಲೆ-ಮಾರೋಲೆಗಳ ಸುರುಳಿ ರಾಮನಾಥನ ಕಣ್ಣಮುಂದೆ ಹೊಸದೊಂದು ವಾಕ್‌ಚಿತ್ರಸೃಷ್ಟಿಯನ್ನೆ ಸುಳಿಯಿಸಿತು. ಯಾವದೋ ಯಕ್ಷಿಣೀಲೋಕಕ್ಕೆ ಭಾವರೆಕ್ಕೆಗಳನ್ನು ಹಚ್ಚಿಕೊಂಡು ಹಾರಿಹೋಗಿದ್ದ ರಾಮನಾಥನಿಗೆ ಬಾಗಿಲು ಧಡಧಡ ಬಡಿದು ಗಂಟೆಯಾಗಲು ರೆಕ್ಕೆ ಕಳಚಿಕೊಂಡು ಅಂತರಿಕ್ಷದಿಂದ ದೊಪ್ಪನೆ ನೆಲಕ್ಕೆ ಬಿದ್ದಂತಾಯಿತು. ಓಲೆಗಳ ಸುರುಳಿಯನ್ನು ಲಗುಬಗೆಯಿಂದ ಕಪಾಟಿನಲ್ಲಿರಿಸಿ ಹಸಿಯಾದ ಕಣ್ಣುಗಳನ್ನು ಒರಸಿಕೊಳ್ಳುತ್ತ ಧಾವಿಸಿ ಬಂದು ಬಾಗಿಲು ತೆರೆದ :

‘ ಏನು ವಿದ್ಯಾ ಇಷ್ಟು ಹೊತ್ತಾಯಿತು ? ’

‘ ಹೌದು ರಾಮ್, ಆಫೀಸ ಬಿಟ್ಟಕೂಡ್ಲೆ ಫ್ರೆಂಡ್ಸ ಸಿಕ್ಕಿದ್ದರು. ‘ಮದಾಂ ಬೇವಾರಿ’ ಪಿಕ್ಚರಿಗೆ ಹೋಗಿದ್ದೆವು. ’

‘ ಫ್ರೆಂಡ್ಸ ಅಂದರೆ ? ’

‘ ಹೌದು, ಪುರುಷರು. ಒಳಗಾದರೂ ಬರುತ್ತೇನೆ ರಾಮ್. ಆಮೇಲೆ

ಪ್ರಾರಂಭಿಸುವಿಯುಂತೆ ನಿನ್ನ ನಿತ್ಯದ ಪುರಾಣ.' ವಿದ್ಯಾ ಕಾಲೊಳಗಿನ 'ಶ್ಯಾಜ' ಬಿಚ್ಚಿ, ಜಾರ್ಜೆಟ್ ಪತ್ತಲನ್ನು ಭಿರ್ರನೆ ಕಳೆದು ತಂತಿಯ ಮೇಲೆ ಹಾಕಿ, ಪರಕಾರದ ಮೇಲೇ ಬಾಥ್‌ರೂಂಗೆ ಹೋಗಿ 'ವಾಶ್' ಮಾಡಿಕೊಂಡು ಬಂದವಳೆ ತನ್ನ ಹೆಸರಿನಿಂದ ಟೀಪಾಯ್ ಮೇಲೆ ಕಾದಿದ್ದ ಕವ್ಹರ ಒಂದನ್ನು ಒಡೆದು ಕಾಗದ ಬಿಚ್ಚಿ ಓದತೊಡಗಿದಳು. ತಕ್ಷಣವೇ 'ಟೇಬಲ್‌ಲ್ಯಾಂಪ ಸ್ವಿಚ್ ಆ:ನ್' ಮಾಡಿ ಅದಕ್ಕೆ ಮಾರೋಲೆಯನ್ನೂ ಬರೆದಳು. ಸೂಟ್‌ಕೇಸ್ ತೆಗೆದು ಒಂದು ಅಂಚೆ-ಪಾಕೀಟಿನಲ್ಲಿ ಅದನ್ನು ಸೇರಿಸಿ ನಾಲಗೆಯ ತುದಿಯಿಂದ ಪಾಕೀಟಿನ ತುದಿಯನ್ನು ಹಸಿ ಮಾಡುತ್ತ—'ಹುಡುಗ ಊಟದ ಡಬ್ಬಿ ಕೊಟ್ಟು ಹೋಗಿದ್ದಾನೆಯೆ ರಾಮ್?' ಎಂದಳು. ರಾಮನಾಥ ಗೋಣು ಹಾಕಿ 'ಹೂಂ' ಎಂದ. ವಿದ್ಯಾ ಪಾಕೀಟು ಮಡಚಿ, 'ನಿನ್ನ ಊಟವಾಗಿದೆಯೆ ರಾಮ್ ?' ಎಂದು ಕೇಳಿದಳು.

'ನನಗೆ ಹಸಿವೆಯಿಲ್ಲ ವಿದ್ಯಾ.' ರಾಮನಾಥನೆಂದ.

'ಹಾಗಾದರೆ ನನ್ನ ಜೊತೆಗೆ ಸ್ವಲ್ಪ ತೆಗೆದುಕೊ. ಒಂದೇ ಡಬ್ಬಿಯೊಳಗೆ ಊಟ ಮಾಡೋಣ.'

ಥಟ್ಟನೆ ರಾಮನಾಥನಿಗೇನೊ ನೆನಪಾಯಿತು. ಸುಮ್ಮನೆ ಹುಸಿ ಮುಗುಳುನಗೆ ನಕ್ಕ. ವಿದ್ಯಾ ಡಬ್ಬಿ ಬಿಚ್ಚಿದಳು. ರಾಮನಾಥನೂ ನಿರ್ವಾಹ ವಿಲ್ಲದೆ ಊಟದ ಶಾಸ್ತ್ರ ಮಾಡಿದ.

'ನಾಳೆ ನಾನು ಪುಣೆಗೆ ಹೋಗಬೇಕು ರಾಮ್. ನಮ್ಮ ಅಣ್ಣನ ಪತ್ರ ಬಂದಿದೆ. ಮೊನ್ನೆ ಮೊನ್ನೆ ರಾಜಪುತಾನಾದಿಂದ ಪುಣೆಗೆ ವರ್ಗವಾಗಿ ಬಂದಿರುವನೆಂದೆನಲ್ಲ, ಮಿಲಿಟರಿ ಎಂಜನಿಯರಿದ್ದವನು ? ಅವನದು. ಅಲ್ಲಿಗೇ ನಮ್ಮ ಅಕ್ಕ ಬಂದಿದ್ದಾಳಂತೆ ಡೆಹರಾಡೂನ್‌ನಿಂದ. ಭಾವನೂ ಬಂದಿದ್ದಾರಂತೆ.' ಅಽಬ್ ಎಂದು ತೇಗುತ್ತ ಸುವಾಸಿಕ ಸುಪಾರಿಯ ಚೀಟಿ ಸುಲಿದು ಬಾಯಾಡಿಸುತ್ತ ಮಾತು ಮುಗಿಸಿ, ರಾಮನಾಥನ ಒಪ್ಪಿಗೆಯ ಉತ್ತರವನ್ನು ಕೂಡ ಅಪೇಕ್ಷಿಸದೆ ರೇಶನ್ ಕಚೇರಿಗೆ ರಜಾ ರಿಪೋರ್ಟು ಬರೆಯತೊಡಗಿದಳು....

'ಒಂದೇ ಕಲೇದ ತಾಟನೊಳಗ ಊಟಾ ಮಾಡೂಣಂತ.......... ಮೊದಲ ತಯಾರ ಮಾಡಿಟ್ಟ ವಿಡಾ ಬಾಯಾಡಿಸಿಗೋತ ಅಟ್ಟಕ್ಕ ಏನೋ ಣಂತ....' ರಾಮನಾಥನ ಕಣ್ಣಮುಂದೆ ಕಟ್ಟಿದ್ದುದು ಇನ್ನೂ ಆ ಚಿತ್ರ!......

‘ ಸಮುದ್ರ ದಂಡೆಯತ್ತ ತಿರುಗಾಡಿ ಬರೋಣವೆ ರಾಮ್ ? ’ ವಿದ್ಯಾ ಕೇಳಿದಳು.

‘ ನಾನೊಲ್ಲೆ. ನನಗೆ ನಿದ್ರೆ ಬಂದಿದೆ. ’

‘ ನಾನು ಸ್ವಲ್ಪ ತಿರುಗಾಡಿ ಬರುತ್ತೇನೆ. ಬಾಗಿಲು....? ’

‘ ಇರಲಿ. ’

‘ ತೆರೆದೇ ಇರಲೆ ? ’

‘ ಹುಂ. ನಾನು ಎಚ್ಚತ್ತೇ ಇರುತ್ತೇನೆ. ’

‘ ಆಂ? ಆಗಲೆ ನಿದ್ರೆ ಬಂದಿದೆಯೆಂದೆಯಲ್ಲ ? ’

‘ ಮರೆತೆ. ನನಗೆ ಸ್ವಲ್ಪ ಬರೆಯುವುದಿದೆ ವಿದ್ಯಾ. ’

‘ ನಾಳೆ ನಾನು ಹೋದ ಮೇಲೆ ಬರೆಯುವಿಯಂತೆ. ಬಾ ರಾಮ್ ? ’

‘ ನೀನು ಹೋಗಿ ಬಾ ವಿದ್ಯಾ. ’

‘ ಓ. ಕೇ. ’

ವಿದ್ಯಾ ಪಂಜಾಬೀ ಪೈಜಾಮಾ ಧರಿಸಿ, ಒಂದು ನಿಲುವಂಗಿ ಹಾಕಿಕೊಂಡು, ಮೇಲೊಂದು ಉತ್ತರೀಯ ಹೊದ್ದುಕೊಂಡು, ಕೆಂಪುವರ್ಣದ ಸೆಲಿಲಾಯ್ಡ್ ಚಪ್ಪಲಿ ಮೆಟ್ಟಿಕೊಂಡು, ಮೂರನೆಯ ಮಜಲಿನಿಂದ ಭಿರಿಭಿರಿ ಕಾಲು ಸಪ್ಪಳ ಮಾಡುತ್ತ, ಸಪ್ಪಳಕ್ಕೆ ಸರಿಯಾಗಿ ಸಿಳ್ಳುಹಾಕುತ್ತ ಕೆಳಗಿಳಿದು ಶಿವಾಜಿಪಾರ್ಕಿನತ್ತ ನಡೆದಳು.

ರಾಮನಾಥನಿಗೆ ಅವಳೆತ್ತ ಹೋದಳು, ಏಕೆ ಹೋದಳು, ಯಾರೊಡನೆ ಹೋದಳು, ಒಂದೂ ಬೇಕಾಗಿರಲಿಲ್ಲ. ಅವನಿಗೆ ಬೇಕಾಗಿದ್ದುದು ಜಾನಕಿಯ ಸರಸಸಹವಾಸ. ಹಸಿದು ಕಂಗಾಲನಾಗಿ ಹರಿದು ತಿನ್ನುವಂತೆ ಓಲೆಗಳನ್ನು ಬಿಚ್ಚಿ ಓದತೊಡಗಿದನು ಮತ್ತೆ ! ಮತ್ತೆ ಎರಡು ವರುಷದ ಹಿಂದಿನ ಚಿತ್ರಗಳೆಲ್ಲಾ ಜೀವಂತವಾಗಿ ಸುಳಿದು ರಾಮನಾಥನನ್ನು ಸ್ವಪ್ನಲೋಕಕ್ಕೆ ಕೊಂಡೊಯ್ದುವು.

‘ಇದೊ ಪ್ರಿಯಂವದೆಯ ಫೋಟೊ ಕಳಿಸಿದ್ದೇನೆ....ನೋಡು ಪರಕಾರ ಪೋಲಕ ಹಾಕಿಕೊಂಡು ಹೇಗೆ ನಗುತ್ತ ನಿಂತಿದ್ದಾಳೆ.........ಸಂಶಯವನ್ನೆ ತೆಗೆದುಕೊಳ್ಳಬೇಕೆಂದು ಹೊರಟ ಮೇಲೆ ಸಂಶಯಕ್ಕೆ ಎಷ್ಟು ಅನ್ನ ಸಿಕ್ಕರೇನು? ಮಧ್ಯರಾತ್ರಿಯಲ್ಲಿ ಸಾವಿರ ತರುಣರ ಮಧ್ಯದಲ್ಲಿ ನೀನಿದ್ದರೂ ನನಗೆ ನಿನ್ನ

ಆಚಾರದ ಬಗ್ಗೆ ಏನೂ ಸಂಶಯ ಬರಲಾರದೆಂದು ನನ್ನ ನೆತ್ತರದಿಂದ ಬರೆದು ಕೊಡುತ್ತೇನೆ..................

' ಜಾನಕಿ, ನಿನ್ನ ಆ ಬಾಣಂತಿಯ ಕೋಣೆ, ಅಲ್ಲಿಯ ಲೋಭಾನದ ವಾಸನೆ, ಎಣ್ಣೆ ಅರಿಷಿಣದ ನಿನ್ನ ಹಸಿಮೈ.............

' ಆ ಕವಿತೆಯನ್ನು ಓದುತ್ತಿರುವಾಗಲೆಲ್ಲಾ ಜಾನಕಿ ನನಗೆ ನಿನ್ನದೇ ನೆನಪು..............

' ನಾನು ತಲೆಬಾಗಿಲು ತಟ್ಟಿದಾಗಲೂ ನಿಮ್ಮ ಹರಟೆ ಭರಾಟೆಯಿಂದ ನಡೆದಿರಬೇಕು. ಜಾನಕಿ, ಆಗ ನಡೆದಿರಬೇಕೇನು ? ನಿನ್ನ ಬಾಯಿಂದ ನನ ವರ್ಣನೆ.............'

ಜಾನಕಿ, ಜಾನಕಿ, ಜಾನಕಿ ! ಯಾವ ಕವಿತೆಯನ್ನೋದಿದರೂ ಅಷ್ಟೆ, ಯಾವ ಕತೆಯನ್ನು ಬರೆದರೂ ಅಷ್ಟೆ. ಜಾನಕಿಯ ನೆನಪೇ ಹೊರತಾಗಿ ಇನ್ನು ಜಾನಕಿ ಬರಲಾರಳು ! ಜಾನಕಿ.....ಬರಲಾರಳು.....!' ಜಾನಕಿ ಬರಲಾರಳು ಎಂಬ ವಿಚಾರ ಝಗ್ಗನೆ ಹೊಳೆದಾಗ ರಾಮನಾಥನಿಗೆ ನಿಜವಾಗಿಯೂ ತನ್ನನ್ನೆ ತಾನು ನಂಬಲಾರದಂತಾಯಿತು.

ಎರಡು ವರುಷಗಳಾಗುತ್ತ ಬಂತು. ಎರಡು ವರುಷಗಳ ಅವಧಿಯಲ್ಲಿ ಎಂತಹ ಅವಾಂತರ ! ಲಾಯಿಟು, ನಳ ಇದ್ದ ಮನೆ ಹಿಡಿಯೋಣವೆಂದಿದ್ದಳು ಜಾನಕಿ. ಇಪ್ಪತ್ತುನಾಲ್ಕು ತಾಸೂ ಲಾಯಿಟು ನಳ ಇರುವ ಮನೆ ಸಿಕ್ಕಿದೆ ರಾಮನಾಥನಿಗೆ; ಆದರೆ ಜಾನಕಿಯಿಲ್ಲ! ರಾಮನಾಥನ ಫೋಟೊ ಕಸೂತಿಯ ನಕ್ಷೆಯಲ್ಲಿ ಹೆಣೆದು ತುಂಬಿ, ಕಟ್ಟು ಹಾಕಿಸಿದ್ದಾಳೆ ಜಾನಕಿ; ಆದರೆ ತಾನೇ ಇಲ್ಲ ! ಬಿ. ಟಿ. ಆದ ಮೇಲೆ ಒಳ್ಳೇ ನೌಕರಿ ಎನ್ನುತ್ತಿದ್ದಳು; ಮುಂಬಯಿಯಂತಹ ಪಟ್ಟಣದಲ್ಲಿ ಸರಕಾರಿನೌಕರಿ ! ಓರಿಯಂಟಲ್ ಟ್ರಾನ್ಸಲೇಟರ ಕಚೇರಿಯಲ್ಲಿ ರಾಮನಾಥನೀಗ ಕನ್ನಡವಿಭಾಗದ ಅಧಿಕಾರಿ. ರಾಮನಾಥನೀಗ ಕನ್ನಡ ಟ್ರಾನ್ಸಲೇಟರ ! ಕನ್ನಡ ಭಾಷಾಂತರಕಾರ ! ಆದರೆ ಜಾನಕಿಯೊಡನೆ ತನ್ನ ಕನಸನ್ನು ಕೃತಿಯಲ್ಲಿ ಭಾಷಾಂತರಿಸಲು ಸಮರ್ಥನಾಗದೆ ಹೋದ ರಾಮನಾಥ !

ಎರಡು ವರುಷಗಳ ಅವಧಿಯಲ್ಲಿ ಎಂತಹ ಅವಾಂತರ ! ಹೊಟ್ಟೆಯ ಮಗು ಒಬ್ಬರ ಪದರಿನಲ್ಲಿ ! ಕೈ ಹಿಡಿದ ಹೆಂಡತಿ ಪರಲೋಕದಲ್ಲಿ ! ತಾನೊ

ಪರಸ್ಥಳದಲ್ಲಿ—ಅನಾಥನಾಗಿ ಬಂದು ನಿಂತಿದ್ದಾನೆ, ಮತ್ತೊಂದು ಸಂಸಾರ ವೆಂಬ ನಾಟಕ ಹೂಡಿ..............

ಎರಡನೆಯ ಸಂಬಂಧ ! ಎರಡನೆಯ ಸಂಸಾರ ! ಎರಡನೆಯ ಯಾವ ಮಾತನ್ನೆತ್ತಿದರೂ ರಾಮನಾಥನಿಗೆ ಬೇಡವೆನಿಸಿತ್ತು. ಮತ್ತೆಮತ್ತೆ ಜಾನಕಿಯ ನೆನಪು. ಅದೊಂದೇ ಅವನಿಗೆ ಆಸರವಾಗಿತ್ತು. ಕಣ್ಣುಮುಚ್ಚಿ ತಾವಿಬ್ಬರೂ ಕೂಡಿ ಕಳೆದ ರಸನಿಮಿಷಗಳನ್ನು ಚಿತ್ರಿಸಿಕೊಳ್ಳಹತ್ತಿದನು. ಮತ್ತೆ ಜಾನಕಿಯ ಓಲೆಗಳನ್ನು ಮಗುಚತೊಡಗಿದನು.

'ನೀವು ಪರೀಕ್ಷಾ ಮುಗಿಸಿ ಬರೋದರೊಳಗ ಇನ್ನೇನು ಪತ್ರಾ-ಉತ್ತರಾ ಹಾಕೋದು ಆಗತದೊ ಇಲ್ಲೊ.............

' ನೀವು ಬರೋ ದಿವಸ ನಾನೂ ನಿಮ್ಮ ಮುದ್ದುಮೋಹನನೂ ಶೃಂಗಾ ರಾಗಿ ನಿಮ್ಮ ಹಾದೀ ಕಾಯಕೋತ ಇರತೀವಿ.............'

'ನಿಮ್ಮ ಹಾದೀ ಕಾಯಕೋತ ಇರತೀವಿ'ಎಂಬ ವಾಕ್ಯವು ರಾಮನಾಥನ ಅಂತಃಕರಣದಲ್ಲಿ ಮುಳ್ಳುಚುಚ್ಚಿ ಅಲುಗಾಡಿಸಿದಂತಾಯಿತು. ಜಾನಕಿ ಎಲ್ಲಿ ಹಾದಿಕಾಯುತ್ತ ನಿಂತಿರಬಹುದು ?....ಮುದ್ದು ಮೋಹನನನ್ನೂ ತನ್ನನ್ನೂ ನಡುನೀರಲ್ಲೇ ಕೈ ಬಿಟ್ಟು ಎಲ್ಲಿ ಹೋಗಿ ನಿಂತು ಕೈಮಾಡಿ ಕರೆಯುತ್ತಿರ ಬಹುದು ಜಾನಕಿ ?..........ಹೃದಯದ ಉತ್ಕಟ ಸಂವೇದನೆಯಿಂದ ರಾಮ ನಾಥನು ಹುಚ್ಚನಂತೆ ಕುಳಿತುಬಿಟ್ಟನು. ಎಲ್ಲಿಂದಲಾದರೂ ಜಾನಕಿಯನ್ನು ಹಿಡಿದುತರಲಿಕ್ಕೆ ಸಾಧ್ಯವೇ ಎಂದೂ ಸಹ ಹವಣಿಸಿದನು. ಪಾಪ, ಏನೇನೋ ಜಾನಕಿಯ ಸುತ್ತಲೂ ಹೆಣೆಯಲ್ಪಟ್ಟ ನೆನಹುಗಳು ಚಿತ್ತಭಿತ್ತಿಯ ಮೇಲೆ ಚಿತ್ರಸರಣಿಯಾಗಿ ಸುಳಿದು ಹೋದುವು. ಎಲ್ಲ ನೆನಪುಗಳು ಅಚಲವಾಗಿವೆ ಅಮರವಾಗಿವೆ. ಜಾನಕಿಯೊಬ್ಬಳೇ ಇಲ್ಲ. ಜಾನಕಿಯನ್ನು ನೆನೆಸಿಕೊಂಡು ಕಣ್ಣಮುಂದೆ ಸುಳಿದು ಹೋದ ಚಿತ್ರಗಳನ್ನು ಧ್ಯಾನಿಸಿಕೊಳ್ಳುವುದೇ ಒಂದು ತಾತ್ಪೂರ್ತಿಕ ಸುಖವೆನಿಸಿತು..............

ಆ ರಾತ್ರಿಯನ್ನು ನೆನೆದಾಗ ರಾಮನಾಥನಿಗೆ ಇನ್ನೂ ಮಗುವಿನ ಹಾಗೆ ನಡುಕ ಹುಟ್ಟಿ ಭಯವಾಗುತ್ತಿತ್ತು. ಅದೇ ಜಾನಕಿಯ ಕೊನೆಯ ರಾತ್ರಿ ! ಬೆಳಗಾಂವಿಗೆ ಬಂದು ನಿಂತು ಮೂರೇ ತಿಂಗಳಲ್ಲಿ ಜಾನಕಿ ತನ್ನ ಮನೋ-ರಥದ ಸಂಸಾರರಥವನ್ನೇರಿ ಮೂರು ತಿಂಗಳಿನ ಜೀವನಯಾತ್ರೆಯನ್ನು

ಮುಗಿಸಿಬಿಟ್ಟಳು.

'I am very sorry for you Mr. Ramnath, the case is out of control '........... ಡಾಕ್ಟರರು ಈ ಮಾತುಗಳನ್ನು ಹೇಳಿದಾಗ ರಾಮನಾಥನ ಕೈಯೊಳಗಿದ್ದ ಡಾಕ್ಟರರ ಬ್ಯಾಗು ಕೈತಪ್ಪಿ ಕೆಳಗೆ ಬಿದ್ದಿತ್ತು. ರಾಮನಾಥನ ಸಲುವಾಗಿ ಮನೆಯವರಂತೆ ತಿಳಿದು ಡಾಕ್ಟರರು ಉಪಚರಿಸುತ್ತಿದ್ದರು. ಟಾಂಗಾದವನಿಗೆ ಬಾಡಿಗೆ ಕೊಡಲಿಕ್ಕೆ ರಾಮನಾಥನ ಬಳಿ ಹಣವಿಲ್ಲದಾಗ, ' Never mind ' ಎಂದು ಡಾಕ್ಟರರು ತಾವೇ ಕೊಡುತ್ತಿರುವುದನ್ನು ಜಾನಕಿ ಮರಣಶಯ್ಯೆಯಲ್ಲೇ ನೋಡಿ ಮರುಗಿ ಕಣ್ಣೀರು ಸುರಿಸುತ್ತಿರುವಾಗ ಡಾಕ್ಟರರು, 'ಹೂಂ....ಹೂಂ ! ಹಾಗೆ ಮಗುವಿನ ಹಾಗೆ ಮಾಡಬಾರದು.' ಎಂದು ಹೇಳಿದಾಗ ಜಾನಕಿ ಮುಗುಳ್ನಗೆಯಿಂದ ಕಣ್ಣೀರು ಕುಡಿದುಬಿಡಲಿಕ್ಕೆ ಪ್ರಯತ್ನಿಸಿದ್ದಳು.........'ಇದು ಬರಿ ಅ್ಯನಿಮಿಯಾ ಅಲ್ಲ........ ಇನ್ನೇನಿದ್ದಿರಬಹುದೋ' ಎಂದು ರಾಮನಾಥನು ಕಂಗೆಟ್ಟು ಡಾಕ್ಟರರಿಗೆ ಮೊರೆಯಿಟ್ಟು ಕೇಳುತ್ತಿರುವಾಗ ಡಾಕ್ಟರರು ರಾಮನಾಥನ ಸಂಕಟವನ್ನರಿತು ಬೇನೆಯ ಹೆಸರನ್ನು ಹೇಳದೆ ' ಕೊರ್ಯಾಮಿನ್ ' ಇಂಜಕ್ಶನ್ ಕೊಟ್ಟಾಗ ರಾಮನಾಥನು ಕದ್ದು ಅದು ಯಾತಕ್ಕಾಗಿ ಮದ್ದು ಎಂಬ ಕುತೂಹಲದಿಂದ ಲೇಬಲ್ ಓದಹೋದಾಗ ಡಾಕ್ಟರರು ಟ್ಯೂಬ್ ಕಸಿದು ಚೆಲ್ಲಿ ರಾಮನಾಥನ ತಲೆಯ ಮೇಲೆ ಕೈಯಾಡಿಸಿ ' Do'nt you worry ' ಎಂದು ಹೇಳಿದ್ದರು. ............ಸಾಯುವ ಮುನ್ನಾದಿನ ಕೂಡ ರಾಮನಾಥನಿಗೆ ತನ್ನ ಅತ್ತೆ ಮಾವಂದಿರನ್ನು ಕರೆಯಿಸುವದಾಗಲಿಲ್ಲ. ಅವರನ್ನು ಕರೆಯಿಸಬಾರದು ಗಾಬರಿಯಾಗುತ್ತಾರೆ ಎಂದು ಜಾನಕಿಯ ಹಟ. ಅವಳ ಹಟವನ್ನು ಲೆಕ್ಕಿಸದೆ ತಾನು ಕರೆಯಿಸಿಬಿಟ್ಟರೆ ನಿಜವಾಗಿಯೂ ತನಗೆ ಅಂತ್ಯಾವಸ್ಥೆಯೇ ಉಂಟಾಯಿತೇನೊ ಎಂದು ಜಾನಕಿ ನಂಬಿ ಎದೆಯೊಡೆದುಕೊಂಡಾಳು ಎಂದು ಅಂಜಿ ರಾಮನಾಥನೂ ಆ ಗೋಜಿಗೆ ಹೋಗಿರಲಿಲ್ಲ. ಆದರೆ ಡಾಕ್ಟರರು, ' Case is out of control ' ಎಂದಿದ್ದಾಗ ಮಾತ್ರ ರಾಮನಾಥನಿಗೆ ಎದೆಯೊಡೆದು ನೀರಾಯಿತು. ಮಗುವಿನ ಹಾಗೆ ಅತ್ತುಬಿಟ್ಟನು. ಶಾಲೆಯ ಸಹೋದ್ಯೋಗಿಗಳಾದ ದೇಸಾಯಿ, ಪರಾಂಜಪೆ ಮಾಸ್ತರರನ್ನು ಕರೆದುಕೊಂಡು ಬಂದ. ಧಾರವಾಡಕ್ಕೆ ತಂತಿ ಕಳಿಸಬೇಕೆಂದರೆ ಕಿಸೆಯಲ್ಲಿ ಕಾಸಿಲ್ಲ. ತಿಂಗಳ ಕೊನೆಯ ದಿನಗಳು.ಕೇಳಬಾರದವರನ್ನು ಕೇಳಿ ನಿರಾಸೆಗೊಂಡಿದ್ದರೂ

ತಲೆ ಕೆಟ್ಟು ಕೊನೆಗೆ ಮೋಹನನ ಕೊರಳೊಳಗಿನ ಜೀತಿತಾಳಿ ಮಾರಿ ಬಂದು ಒಂದಿಷ್ಟು ಕೈ ತುಂಬಿಸಿಕೊಂಡ. ಧಾರವಾಡಕ್ಕೆ ಎಕ್ಸಪ್ರೆಸ್ ತಂತಿ ಕಳಿಸಿದ. ಜಾನಕಿಯ ಕೊನೆಯ ಸೇವೆಗೆಂದು, ತನ್ನ ಪ್ರಾಣದ ಪ್ರಾಣವಾದ ಜಾನಕಿಯ ಜೀವರತ್ನವನ್ನುಳಿಸಿಕೊಳ್ಳುವ ಕೊನೆಯ ಪ್ರಯತ್ನವೆಂದು ಸಿವಿಲ್ ಸರ್ಜನ್‌ರನ್ನು ಕರೆದುಕೊಂಡು ಬಂದ. ಆದರೇನೂ ಉಪಯೋಗ ಬೀಳ ಲಿಲ್ಲ. ಯಾರೊ ಹೊಮಿಯೊಪಥಿ ಉಪಯೋಗ ಬೀಳಬಹುದೆಂದು ಸೂಚಿಸಿ ದಾಗ ಅದಕ್ಕಾಗಿಯೂ ಹತ್ತಿಪ್ಪತ್ತು ರೂಪಾಯಿ ವೆಚ್ಚ ಮಾಡಿದ. ಆದರೇನೂ ಉಪಯೋಗ ಬೀಳಲಿಲ್ಲ. ಜಾನಕಿಯ ಜೀವನಪ್ರವಾಹವು ಅನಂತದತ್ತ ಧಾವಿಸುತ್ತಿತ್ತು. ಧಾರವಾಡದ ಜನರೂ ಬಂದರು. ಮಗಳನ್ನು ಬದುಕಿಸಿ ಕೊಳ್ಳಲಿಕ್ಕೆ ತಾಯಿ-ತಂದೆಗಳಿಗೆ ಸಾಧ್ಯವಾಗಲಿಲ್ಲ............... ಸಾಯುವ ವರೆಗೂ ಜಾನಕಿಗೆ ಪ್ರಜ್ಞೆಯಿತ್ತು. ಕೊನೆಯ ನಿಮಿಷ ಸಮೀಪಿಸಿತೆಂದು ಅವಳಿಗೆ ತೋರಿತೇನೊ, ಮೋಹನನನ್ನು ಸನ್ನೆಯಿಂದ ಸಮೀಪ ಕರೆದಳು. ತಾಯಿ ದುಃಖೋದ್ವೇಗವನ್ನು ತಡೆಹಿಡಿಯಲು ತುಟಿ ಕಚ್ಚಿಹಿಡಿದು,ಮೋಹನ ನನ್ನು ಬಳಿ ಕರೆದು, ಜಾನಕಿಯತ್ತ ಬೊಟ್ಟುಮಾಡಿ ತೋರಿಸಿದಳು. ಜಾನಕಿ ತಾಯಿಯ ಸೆರಗು ಜಗ್ಗಿ ಮೋಹನನ ಮೇಲೆ ಹೊಚ್ಚಿದಳು. ತಾಯಿಗೆ ಅದರ ಅರ್ಥವಾದಾಗ ದುಃಖದ ಉಕ್ಕು ಎದೆಯೊಡೆದು ಚಿಮ್ಮಿ ಬಂತು. ಯಜಮಾನ ರನ್ನು ಕರೆದಳು ಜಾನಕಿ. ಬದಿಯಲ್ಲಿರುವ ಹಿರಿ-ಕಿರಿಯರ ಪರಿವೆಯಿಲ್ಲದೆ ರಾಮನಾಥನ ಹಣೆಗೆ ಮುತ್ತನಿಟ್ಟಳು. ಜಾನಕಿಗೀಗ ನಾಚಿಕೆಯೆನಿಸಲಿಲ್ಲ ವೇನೊ! 'ಏನು ಹೇಳುತ್ತೀ ನನಗೆ ಜಾನಕಿ?' ಎಂದು ಆಕ್ರೋಶದಿಂದ ಕೂಗಿಕೊಂಡ ರಾಮನಾಥ. ಜಾನಕಿ ಮಗುವಿನತ್ತ ಬೊಟ್ಟುಮಾಡಿ ತೋರಿ ದಳು. ತನ್ನ ತಂದೆ ತಾಯಿಯತ್ತ ಬೊಟ್ಟುಮಾಡಿ ತೋರಿದಳು............ 'ಮತ್ತೇನು ಜಾನಕಿ?' ಎಂದು ಹುಚ್ಚನಂತೆ ಕೂಗುವ ರಾಮನಾಥನಿಗೆ ಜಾನಕಿ ತನ್ನ ಕುಂಕುಮದ ಬೊಟ್ಟು ತೋರಿಸಿದಳು. ರಾಮನಾಥನಿಗೆ ಇದರ ಅರ್ಥವಾಗಲಿಲ್ಲ. ಇಂತಹ ಸಂಜ್ಞೆಗಳಿಂದ ದುಃಖಕ್ಕಿಂತ ಗಾಬರಿಯೆ ಹೆಚ್ಚಾ ಯಿತು ಜಾನಕಿ ಕೊರಳೊಳಗಿನ ಗುಂಡಿನ ಸರ ಕೊಟ್ಟಳು. ಅದರೊಳಗಿನ ಕೀಲಿಕೈ ಹಿಡಿದು ತನ್ನ ಟ್ರಂಕು ತೆಗೆಯಲು ಸೂಚಿಸಿದಳು. ರಾಮನಾಥನು ಯಂತ್ರದಂತೆ ಅವಳ ಅಪ್ಪಣೆ ಪಾಲಿಸಿದ. ಟ್ರಂಕು ತೆಗೆಯಿಸಿ ಜಾನಕಿ ತಾನು

ತುಂಬುತ್ತಿರುವ ಜರದ ಫೋಟೋ ಅಚ್ಚನ್ನು ರಾಮನಾಥನ ಕೈಯಲ್ಲಿ ಕೊಟ್ಟಳು. ರಾಮನಾಥನ ಚಿತ್ರವನ್ನು ಜಾನಕಿ ಅದರಲ್ಲಿ ಕೂಡಿಸಿ ಹೆಣೆದಿದ್ದಳು. ಇನ್ನೊಂದು ಸುಳವು ಹಾಗೇ ಇತ್ತು. ಜಾನಕಿ ಇನ್ನೂ ಫೋಟೋ ತೆಗೆಯಿಸಿರಲಿಲ್ಲ. ಅದನ್ನು ರಾಮನಾಥನ ಕೈಯಲ್ಲಿ ಕೊಟ್ಟು ಕಣ್ಣೀರು ಹಾಕುತ್ತಿದ್ದವಳು, ಜಾನಕಿ ಹಾಗೇ ಕಣ್ಣು ಮುಚ್ಚಿಬಿಟ್ಟಳು.................

ರಾಮನಾಥನು ಗೋಡೆಗೆ ಹಾಕಿದ ಗಡಿಯಾರದತ್ತ ನೋಡಿದನು. ರಾತ್ರಿ ಹನ್ನೆರಡು ಹೊಡೆಯಲು ಇನ್ನೆರಡು ನಿಮಿಷಗಳಿದ್ದುವು. ಗಡಿಯಾರದ ಬಾಲ ಅತ್ತಿಂದಿತ್ತ ಇತ್ತಿಂದತ್ತ ತೂಗಾಡುತ್ತಿತ್ತು. ಆ ಪೆಂಡ್ಯೂಲಮ್‌ಗೆ ಅಂಟಿಸಿದ ಮನುಷ್ಯಾಕೃತಿಯ ಚಿತ್ರವು ಪೆಂಡ್ಯೂಲಂನೊಂದಿಗೆ ಅತ್ತಿಂದಿತ್ತ ಕಣ್ಣು ಸುಳಿಯಿಸುತ್ತಿತ್ತು. ರಾಮನಾಥ ಹಾಗೇ ಗಡಿಯಾರದ ಮೇಲೆ ಕಣ್ಣು ಸುಳಿಯಿಸಿದ. ಜರದ ಚೌಕಟ್ಟಿನಲ್ಲಿ, ಜರದ ಸುಳವು-ಹೊಳವಿನಲ್ಲಿ ವಿದ್ಯಾ-ರಾಮನಾಥರ ಛಾಯಾಚಿತ್ರಗಳು ಕಂಗೊಳಿಸಿದುವು. ಹನ್ನೆರಡು ಬಡೆಯಿತು. ಹೊರಗೆ ಬೆಲ್ ಬಾರಿಸಿದ ಸಪ್ಪಳವಾಯಿತು. ಬಂದಿದ್ದವರು ವಿದ್ಯಾ. ಬಂದವಳೇ ಬಾಗಿಲು ಬಂದುಮಾಡಿ ಶ್ಯಾಜ ಬಿಚ್ಚಿ ಬಹುಕೃತ ವೇಷವನ್ನು ಬದಲಾಯಿಸಿದಳು. ಶಯ್ಯಾವೇಷದಲ್ಲಿ ತನ್ನ ಮಂಚದ ಮೇಲೇರಿದಳು. ರಾಮನಾಥನಿಗೆ ವೇಷ ಬದಲಾಯಿಸುವ ಪ್ರಸಂಗವಿರಲಿಲ್ಲ.

* * * *

ರಾಮನಾಥನೀಗ ಮತ್ತೆ ಒಂಟಿಗನಾಗಿದ್ದಾನೆ. ವಿದ್ಯಾ ಪುಣೆಗೆ ತಮ್ಮಣ್ಣನ ಮನೆಗೆಂದು ಹೋಗಿದ್ದಾಳೆ. ರಾಮನಾಥನಿಗೆ ಮತ್ತೆ ಖಾನಾವಳಿಯ ಕೂಳು ತಪ್ಪಲಿಲ್ಲ. ವಿದ್ಯಾ ಇದ್ದಾಗಲಾದರೂ ಅವಳ ಕೈಯಿಂದ ಊಟಮಾಡಿದ ಪ್ರಸಂಗಗಳು ಬಹಳ ಕಡಿಮೆ.

ರಾಮನಾಥನಿಗೆ ಖಾನಾವಳಿಯ ಊಟವೆಂದರೇನೆ ಬೇಸರ. ಆದರೂ ನಿರ್ವಾಹವಿಲ್ಲ. ಒಂದೊಂದು ದಿವಸ ಕಚೇರಿಯಿಂದ ಬರಬೇಕಾದರೆ ಬಹಳ ಹೊತ್ತಾಗಿ ಯಾವುದಾದರೊಂದು ಇರಾಣಿ ಅಂಗಡಿಯಲ್ಲಿ ಬ್ರೆಡ್ ಆಮ್ಲೆಟ್ ತೆಗೆದುಕೊಂಡು ಹಾಗೇ ಮನೆಗೆ ಬಂದು ಸ್ವಸ್ಥವಾಗಿ ಮಲಗಿಬಿಡುತ್ತಿದ.

ಅನಾಯಾಸವಾಗಿ ಬೇಸಗೆಯ ಬೆಳ್ದಿಂಗಳಿದ್ದುದರಿಂದ ರಾಮನಾಥನು ಮೇಲ್ಮಾಳಿಗೆಯ ಮೇಲೆ 'ಬಿಚಾನಾ' ಹಾಕಿ ಮುಸಾಫಿರನಂತೆ ಮಲಗುತ್ತಿದ್ದನು. ಮತ್ತೆ ರಾಮನಾಥನಿಗೆ ತನ್ನ ಮೊದಲಿನ ಏಕಾಂತಜೀವನದ ನೆನಪು ಬರುತ್ತಿತ್ತು.

ರಾಮನಾಥನು ಮುಂಬಯಿಗೆ ಬಂದಾಗ ವಿಧುರನಾಗಿದ್ದ. ಯಾವುದೋ ಒಂದು ಹಳೆಯ ಮುಗಿಲೆತ್ತರದ ಮಾಳಿಗೆಯೊಂದರಲ್ಲಿ ಹತ್ತು ಜನರೊಂದಿಗೆ ಹನ್ನೊಂದನೆಯವನಾಗಿ ಕನ್ನಡಿಗರ ಕೋಣೆಯೊಂದರಲ್ಲಿ ಪ್ರವೇಶ ಪಡೆದಿದ್ದ.

ಆ ಕನ್ನಡಿಗರ ಕೋಣೆ ಹೊರನಾಡಿನ ಕನ್ನಡಿಗರಿಗೆಲ್ಲಾ ಅತಿಥಿಗೃಹವಾಗಿತ್ತು. ಅದರ ಒಡೆಯರು ಶೂರ್ಪಾಲಿ೯ಯವರು. ಶೂರ್ಪಾಲಿ೯ ಶಾಮಾಚಾರ್ಯರೆಂದೇ ಅವರನ್ನು ಗೆಳೆಯರು ಕರೆಯುವುದು. ಶಾಮಾಚಾರ್ಯರು ಸಿ. ಟಿ. ಓ. (ಸೆಂಟ್ರಲ್ ಟೆಲಿಗ್ರಾಫ್ ಆಫೀಸ) ದಲ್ಲಿ ಅನೇಕ ವರುಷಗಳಿಂದ ಕೆಲಸ ಮಾಡುತ್ತ ಕಚೇರಿಯಲ್ಲಿಯೂ ಕೋಣೆಯಲ್ಲಿಯೂ ಕನ್ನಡಿಗರಿಗೆಲ್ಲಾ ಔದಾರ್ಯ ಆತಿಥ್ಯಗಳನ್ನು ತೋರುತ್ತ ಕನ್ನಡಿಗರ ಸಂಘಟನಾಕಾರ್ಯಕ್ರಮವನ್ನು ಸಾಗಿಸುತ್ತಿದ್ದರು. ಮುಂಬಯಿಯಲ್ಲಿ ಯಾವುದೇ ಕನ್ನಡ ಚಟುವಟಿಕೆ ಜರುಗಿದರೆ ಶಾಮಾಚಾರ್ಯರ ಸ್ವಯಂಸೇವೆ ಇದ್ದಿರಲೇಬೇಕು.

'ಶಾಮಾಚಾರ, ಎಷ್ಟು ದಿವಸದಿಂದ ಇದೊಂದು ಕೋಣೆ ಹಿಡಕೊಂಡು ಇದ್ದೀರಿ. ನಿಮ್ಮದು ಮದುವೆ ಆಗಿಲ್ಲೇನು?' ಎಂದು ಅನೇಕರು ಶಾಮಾಚಾರ್ಯರಿಗೆ ಕೇಳಿದ್ದಾರೆ. 'ಇಲ್ಲಾ, ವರ್ಷದೊಳಗ ಮೂರು ತಿಂಗಳು ಬಾಣಂತನ ಅಂದಮ್ಯಾಲೆ ಮನೆಯವರು ತೌರುಮನಿಗೆ ಅಂದರ ಜಮಖಂಡಿಗೇ ಹೋಗಬೇಕಾಗತದ'–ಎಂದು ಶಾಮಾಚಾರ್ಯರ ಜಮಖಂಡಿಯ ಗೆಳೆಯರೊಬ್ಬರು—ಅವರೂ ಸಿ. ಟಿ. ಓ. ದಲ್ಲೇ ಕೆಲಸಮಾಡುವವರು— ಅನೇಕ ಸಲ ಉತ್ತರಕೊಟ್ಟಿದ್ದೂ ಉಂಟು.

'ಅಂದರ ಶಾಮಾಚಾರ ಸಂಸಾರನೂ ಇದೇ ಕೋಣೆಯೊಳಗ ಏನು?' ಎಂದೊಬ್ಬರು ಪ್ರಾಂಜಲಮನಸ್ಸಿನಿಂದುದ್ಭವಿಸಿದ ಕುತೂಹಲ ಪ್ರಶ್ನೆಯೊಂದನ್ನು ಕೇಳಿದಾಗ—

'ಇಲ್ಲಾ, ಗಿರಗಾಂವದೊಳಗ ನಮ್ಮ ಷಡ್ಡಕರೊಬ್ಬರು ಇರತಾರ. ಗವರ್ನ್ಮೆಂಟ ಸೆಂಟ್ರಲ್ ಪ್ರೆಸ್ಸಿನೊಳಗ ಕೆಲಸ ಮಾಡತಾರ. ಸಂಸಾರದ

ಮಟ್ಟಿಗೆ—ಅಂದರ ಊಟ-ಉಪಚಾರಕ್ಕೆ ಅಲ್ಲೇ ಹೋಗತಿರತೀನಿ ಮನೆಯವರಿದ್ದಾಗ ' ಎಂದು ಶಾಮಾಚಾರ್ಯರು ಪ್ರಾಂಜಲ ಪ್ರಶ್ನೆಗೆ ಪ್ರಾಂಜಲ ಉತ್ತರವನ್ನು ಕೊಟ್ಟು ಸಂತೈಸಿದ್ದುಂಟು.

ರಾಮನಾಥನು ಮುಂಬಯಿಗೆ ಬಂದಾಗ ಶಾಮಾಚಾರ್ಯರೇ ಓ. ಟಿ. ಆಫೀಸಿನ ವರೆಗೆ ಹೋಗಿ ರಾಮನಾಥನ ಗುರುತುಮಾಡಿಕೊಂಡು ಅವನ ಗಂಟುಗದಡಿಗಳನ್ನು ತಮ್ಮ ಅತಿಥಿಗೃಹಕ್ಕೆ ಸಾಗಿಸಿದ್ದರು. ರಾಮನಾಥನಿಗೆ ಶಾಮಾಚಾರ್ಯರ ಕೋಣೆಯ ಉಪಯೋಗ ಒಂದು ' Cloak-room ' ನ ಮಟ್ಟಿಗೆ ಮಾತ್ರ ಇತ್ತು. ಹಸಿದು ದಣಿದು ಎಲ್ಲಿಯೊ ಉದರನಿರ್ವಾಹದ ಮಟ್ಟಿಗೆ ಉಪಹಾರ ಮುಗಿಸಿ, ಕುಂಟುತ್ತ ಕೂರುತ್ತ ಮುಗಿಲೆತ್ತರ ಮಾಳಿಗೆಯನ್ನೇರಿ ಕೋಣೆಯೊಳಗಿನ ಹಾಸಿಗೆ ಹೊತ್ತುಕೊಂಡು, ಒಮ್ಮೆ ಟಿರೇಸ್ ಹತ್ತಿದನೆಂದರೆ ಉಸ್ಸೆಂದು ಕಾಲು ಚಾಚಿ, ಅಂಗಾತನಾಗಿ ಚಿಕ್ಕೆ ಚಂದ್ರಾಮರ ಜೊತೆಗೆ, ಸರಸಸಲ್ಲಾಪಗೈಯುವವರಂತೆ ಮಲಗಿಕೊಳ್ಳುತ್ತಿದ್ದ ರಾಮನಾಥ. ಬರುವುದು ಸ್ವಲ್ಪ ಹೊತ್ತಾಯಿತೆಂದರೆ ಹಾಸಿಗೆ ಹೊತ್ತುಕೊಂಡು ಮತ್ತೆ ಎರಡು–ಮೂರು ಮಜಲು ಏರುವುದೆಂದರೆ ದೊಡ್ಡದೊಂದು ಜೂಗ ಗೆದ್ದಂತಾಗುತ್ತಿತ್ತು. ಮಜಲು ಮಜಲಿಗೂ ಕಟಾಂಜನದ ತುಂಬ ಚಾಳಿನ ಜನರು ಗಂಡು ಹೆಣ್ಣಿನ ಅಂತರವಿಲ್ಲದೆ ಸಾಲಾಗಿ ಮಲಗಿಬಿಟ್ಟಿರಬೇಕು. ಅಲ್ಲೊಂದು ಮೂಲೆಯಲ್ಲಿ, ಇಲ್ಲೊಂದು ಮೂಲೆಯಲ್ಲಿ ನವದಂಪತಿಗಳು ಕವಿನೆರಳಿನಲ್ಲಿ, ಎಲಡಿಕೆ ಮೆಲ್ಲುತ್ತ, ಮೆಲ್ಲಮೆಲ್ಲನೆ ಸರಸಸಲ್ಲಾಪವಾಡುತ್ತ, ರಸನಿಮಿಷಗಳನ್ನು ಕಳೆಯುತ್ತಿರುವುದನ್ನು ರಾಮನಾಥನು ನೋಡಿದಾಗ, ಇಂತಹ ಕೂಲಿಕಾರ ಜನರೂ ಎಷ್ಟು ಸುಖದಿಂದಿರುವರಲ್ಲ ಎಂದುಕೊಂಡು ಅವರ ಸುಖಕ್ಕಾಗಿ ಅಸೂಯೆ ತಾಳದೆ, ತನ್ನ ಅನವಸ್ಥೆಗಾಗಿ ತಾನೇ ಮರುಗುತ್ತ ಹಾಗೇ ಮೇಲಕ್ಕೇರಿ ಅದೇ ವಿಚಾರದ ಸುಳಿಯಲ್ಲಿ ಸಿಕ್ಕು ನಿದ್ರೆಬಾರದೆ ಮತ್ತೆ ಹಿಂದಿನ ನೆನಹುಗಳನ್ನೇ ರೂಹಿಸಿಕೊಳ್ಳುತ್ತ ರಾತ್ರಿಯನ್ನು ಕಳೆಯುವ ಪಾಡು ರಾಮನಾಥನದಾಗಿತ್ತು.

ಈಗ ವಿದ್ಯಾ ಬಂದಿದ್ದಾಳೆ. ತನ್ನ ಬಾಳಿನ ತೆರವನ್ನು ತುಂಬಿದ್ದಾಳೆ. ಕಳಚಿ ಹೋದ ಕೈಯನ್ನು ತಂದಿದ್ದಾಳೆ. ಆದರೂ ರಾಮನಾಥನಿಗೆ ನೆಮ್ಮದಿಯಿಲ್ಲ. ಈಗ ಒಬ್ಬೊಂಟಿಗನಾಗಿ ಮೇಲ್ಮಾಳಿಗೆಯಲ್ಲಿ ಚಿಕ್ಕೆ ಚಂದ್ರಾಮರನ್ನು

ನೋಡುತ್ತ ಮಲಗುವ ಪ್ರಸಂಗ ಬಂದಾಗ ರಾಮನಾಥನಿಗೆ ಮತ್ತೆ ಅದೇ ನೆನಪು—ಶೂರ್ಪಾಲಿ ಶಾಮಾಚಾರ್ಯರ ಕೋಣೆಯಲ್ಲಿ ಕಳೆದ ದಿನಗಳು!....

ಜಾನಕಿಯ ಆಸ್ಥೆಯೆಷ್ಟು ? ಉತ್ಸಾಹವೆಷ್ಟು ? ಅದೇ ಜಾನಕಿಯಿದ್ದು ಬೆಳಗಾಂವಿಯಿಂದ ಮುಂಬಯಿಗೆ ಜಾನಕೀ ಮೋಹನರನ್ನು ಕರೆದುಕೊಂಡು ಇದೇ ಮನೆಯಲ್ಲಿ ಬಂದಿದ್ದುದಾದರೆ ?....ಇದು ಅರಮನೆಯಾಗಿರುತ್ತಿತ್ತು ! ತಾನು ರಾಜನಂತಿರುತ್ತಿದ್ದ ! 'ಸ್ವರ್ಗಕ್ಕೆ ಕಿಚ್ಚು ಹಚ್ಚು' ಎನ್ನುತ್ತಿದ್ದ ! ದುರ್ದೈವಿ ಜಾನಗಿ ! ಬೆಳಗಾಂವಿಯ ಜೀವನವನ್ನೂ ಪೂರ್ಣವಾಗಿ ಅನುಭವಿಸಲಿಲ್ಲ, ಆನಂದಿಸಲಿಲ್ಲ. ಜಾನಕಿ ದುರ್ದೈವಿಯಲ್ಲ, ತಾನೇ ದುರ್ದೈವಿ ! ಅಂತಹ ಸರಸ ಜೊತೆಗಾತಿಯನ್ನು ಕಳೆದುಕೊಂಡು ಜಿನಕ್ಕೊಂದು ಜೋಡು ಬೇಕೆಂದು ಮುಂಬಯಿ ನಗರದಲ್ಲಿ ಮದುವೆಯ ಮಾರ್ಕೆಟ್ಟಿನಲ್ಲಿ ಒಂದು ಕಲಿತ ಹೆಣ್ಣಿನ ಕೈ ಹಿಡಿದ. ರಜಿಸ್ಟರ ಮದುವೆ ಮಾಡಿಕೊಂಡು ಸಂಸಾರ ಸಾಗಿಸುವ ಕಾಂಟ್ರಾಕ್ಟ ಮಾಡಿಕೊಂಡ............

ತಾನೇಕೆ ಈ ಎರಡನೆಯ ಸಂಬಂಧವನ್ನು ಗಂಟು ಹಾಕಿಕೊಳ್ಳಬೇಕಿತ್ತು? ಎಂಬ ಪ್ರಶ್ನೆ ಕಣ್ಣು ತೆರೆದು ಕಣ್ಣ ಮುಂದೆ ನಿಂತಾಗ ಆ ದುರ್ಬಲ ನಿಮಿಷವನ್ನು ನೆನೆದು ತಾನೇ ನಾಚಿ ತಲೆ ಕೆಳಗೆ ಹಾಕಿದನು............

ಮುಂಬಯಿಯಂತಹ ಲಕ್ಷ್ಮಿಯ ಮಯಾನಗರದಲ್ಲಿ ಮನುಷ್ಯನು, ಅದರಲ್ಲೂ ವಿಧುರನು ನೀತಿಮರ್ಯಾದೆಗಳನ್ನು ಕಾಯ್ದುಕೊಂಡು ಬದುಕುವುದು ಕಠಿಣ. ಹೆಜ್ಜೆಹೆಜ್ಜೆಗೆ ಒಂದಿಲ್ಲೊಂದು ಮಾಯೆಯ ಬಲೆಯು ನಮ್ಮನ್ನು ಸೆಳೆಯುತ್ತಿರುತ್ತದೆ. ಟ್ರಾಮು-ಟ್ರೇನುಗಳ ಸಂತೆಯಲ್ಲಿ, ಗಂಡು ಹೆಣ್ಣುಗಳೆಂಬ ಭೇದಭಾವವಿಲ್ಲದೆ ಜೀವಂತ ಸರಕುಗಳು ಒಳಗೆ ಅಡಕಲೇರುತ್ತಿರುವಾಗ, ಸ್ತ್ರೀಸ್ಪರ್ಶವೆಂದರೇನೆಂಬುದನ್ನು ಮರೆಯುತ್ತ ಬಂದಿದ್ದ ರಾಮನಾಥನಿಗೆ ಅನೇಕ ಸಲ ಆ ವಿದ್ಯುತ್ತಿನ ಚುರುಕು ಹತ್ತಿತ್ತು. ಈ ಹೆಣ್ಣುಗಳು ತಿಳಿದು ಮಾಡುತ್ತವೆಯೊ ತಿಳಿಯದೆಯೆ ಮಾಡುತ್ತವೆಯೊ ರಾಮನಾಥನಿಗೆ ಅರ್ಥವಾಗುತ್ತಿರಲಿಲ್ಲ. ಟ್ರಾಮುಗಳಲ್ಲಿ, ಲೋಕಲ್ ಟ್ರೇನುಗಳಲ್ಲಿ ಪ್ರವೇಶದ ಬಾಯಿಗೇ ನಿಂತುಬಿಟ್ಟು ಹಾಯ್ದಾಡುವ ಜನರಿಂದ ಮುಟ್ಟಿಗೆಯಾಗಿ ಹೋಗುತ್ತಿದ್ದರೂ ಯಾವುದೂ ಎಗ್ಗಿಲ್ಲದೆ ಕಟ್ಟಾಡಿಸಿದಂತೆ ಒಳಗೊಳಗೇ ನಗುತ್ತಿರುವ ಹೆಣ್ಣುಗಳನ್ನು ನೋಡಿದಾಗ ರಾಮನಾಥನ ಗಾಂಭೀರ್ಯವೂ ಶಿಥಿಲಿಸಿ

ತತ್ತರಿಸುವಂತಾಗಿದ್ದರೆ ಅಚ್ಚರಿಯಲ್ಲ. ಇಂತಹ ಹೆಣ್ಣು-ದೇಹಗಳಲ್ಲಿ ಸೊಗಸೆತ್ತ ಬಂತು, ಶೃಂಗಾರವೆತ್ತ ಬಂತು, ಸೌಂದರ್ಯವೆತ್ತ ಬಂತು ? ಬಾಃಬ್ ಮಾಡಿಸಿ ಫ್ರಾಃಕ್ ಹಾಕಿಕೊಂಡು ಹೆಡೆಯೇರಿಸಿದ ಯೋಧನಂತೆ ಎದೆಯೇರಿಸಿ ಕೊಂಡು, ಸುತ್ತಲಿನವರಿಗೆ ವ್ಯೈಗೆ ಬಳಿದುಕೊಂಡ ವಾಸನೆಗಳನ್ನು ಬೀರುತ್ತಾ ನಿಂತರೂ ಅಷ್ಟೆ, ದೇಹಕೊಂದು ಗೋಲು ಸುತ್ತಿ, ಒಳಗಿನ ಬಾಃಡಿಗಾಗಿ ಜ್ಲೋವ್ಸ್ ತೊಟ್ಟು ಕೈಯೊಳಗೊಂದು ಹೆಣಿಕೆಯ ಕೈ-ಹಿಡಿಕೆಯ ಚೀಲ ಹಿಡಿದು, ಕ್ಷಣ-ಕ್ಕೊಮ್ಮೆ ತಲೆಯ ಹಿಂದೆ ಜೋಲು ಬಿದ್ದ ಮಾಲೆಯನ್ನು ಮುಟ್ಟಿ ಮುಟ್ಟಿ ನೋಡಿದರೂ ಅಷ್ಟೆ. ಆ ಹೆಣ್ಣಿನ ಸೊಗಸುಗಾರಿಕೆ, ನಯ, ಸೌಕುಮಾರ್ಯ ರಸವಂತಿಕೆಗಳಿಲ್ಲದ ಮೇಲೆ ಬರಿ ದೇಹಗಳಷ್ಟೆ !

ಒಮ್ಮೊಮ್ಮೆ ಮೀನದ ಪೇಟೆಗಳಿಂದ ಮೂಗು ಮುಚ್ಚಿಕೊಂಡು ಬರುವ ರಾಮನಾಥನಿಗೆ ಕಣ್ಣೂ ಮುಚ್ಚಿಕೊಂಡು ಬಂದಿದ್ದರೆ ಒಳಿತೆನಿಸುವಂತಿತ್ತು. ಮೀನಗಳನ್ನು ಮಾರುತ್ತಿರುವ ತರುಣ ನೀರೆಯರು ಮೊಳಕಾಲ ಮೇಲೇರಿಸಿ ಹೇಗೊ ಸುತ್ತಿದ ಒಂದು ಸೀರೆ, ಸೌಂದರ್ಯರಾಶಿಯೆನಿಸದಿದ್ದರೂ ಸೆರೆಹಿಡಿ-ಯುವ ಮುಖಲಕ್ಷಣ, ತುಂಬಿದ ತಾರುಣ್ಯಗಳಿಂದ ಮೀನಗಳನ್ನು ಮಾರುವ ಮೀನಾಕ್ಷಿಯರೆ ದೃಷ್ಟಿಯ ಜಾಲ ಹಾಸಿ,ಕೊಳ್ಳಬಂದ ಮಳ್ಳರನ್ನು ಪೇಟೆಯ ಸಮುದ್ರದಲ್ಲಿ ಬೇಟೆಯಾಡುತ್ತಿರುವಂತೆ ತೋರುತ್ತಿತ್ತು. ಇಂತಹ ಮೀನದ ಪೇಟೆಗಳಲ್ಲಿ ಬುಟ್ಟಿಗಳಲ್ಲಿ ರಾಶಿರಾಶಿಯಾಗಿ ಬಿದ್ದ ವಿವಿಧ ಪ್ರಕಾರದ ನಿರ್ಜೀವ ಜಂತುಗಳು ಮನುಷ್ಯಲೋಕಕ್ಕೆ 'ಇಂತಹ ಮೀನಗಾರರ ಜಾಲದಲ್ಲಿ ನೀವೂ ಬೀಳಬೇಡಿರಿ' ಎಂದು ಹೇಳುವಂತಿತ್ತು. ಒಂದೆರಡು ಸಲ ರಾಮನಾಥನು ಮೋಜಿನಿಂದ ಮೀನದ ಪೇಟೆಯನ್ನು ಹೊಕ್ಕು ಬಂದರೂ ತಾನು ಮೀನದ ಗಿರಾಕಿ ಅಲ್ಲವೆಂದು ತನ್ನೊಳಗೇ ಸಮಾಧಾನಪಟ್ಟನು.

ಒಮ್ಮೊಮ್ಮೆಯಂತೂ ದಾದರಿನಿಂದ ಗಿರಗಾಂವಿಗೆ ಹೋಗುವಾಗ 'ಫೆರಾಸ್‌ರೋಡ' ಬಂದಾಗ ಇಕ್ಕೆಲದಲ್ಲಿ ನೆಲದಿಂದ ಮೂರು ಮಜಲು ಗಳ ವರೆಗೆ ಮಾರಾಟಕ್ಕಾಗಿ ಬೀಭತ್ಸವೆನಿಸುವ ಮಟ್ಟಿಗೆ ದೇಹಪ್ರದರ್ಶನ ಮಾಡುತ್ತಿರುವ, ಮನೆಯ ಮಜಲಿನಂತೆ ಕೌರೂಪ್ಯದ ಶಿಖರವನ್ನೇರಿ ಆದ-ರೊಳಗೇ ಜಂಭಬಟ್ಟು ಅಟ್ಟಹಾಸದಿಂದ ಮೆರೆಯುತ್ತಿರುವ ಹೆಣ್ಣು-ಜಾತಿ ಯನ್ನು ನೋಡಿದಾಗಲೆಲ್ಲಾ ರಾಮನಾಥನಿಗೆ, ಒಂದೇ ವಿಚಾರ ಬರುತ್ತಿತ್ತು,

ತನ್ನ ಜಾನಕಿ ಇಂತಹ ನರಕ ನಗರದಲ್ಲಿ ಸಂಸಾರ-ರಥ ನಡಸುವ ಮೊದಲೆ ಕಣ್ಣು ಮುಚ್ಚಿ ಪುಣ್ಯವಂತಿಯಾದಳು ಎಂದು.

ದಿನದಿನವೂ ನಡೆಯುತ್ತಿರುವ ಈ ಅಸಹ್ಯವ್ಯಾಪಾರವನ್ನು ನೋಡಿ ನೋಡಿಯೆ ರಾಮನಾಥನಿಗೂ ಅದು ದಡ್ಡುಬಿದ್ದಂತಾಯಿತು. ಮಟನ್ ಅಂಗಡಿಗಳಿಗೆ ಹೇಗೋ ಹೋಗಿ ಅಲ್ಲಿ ಮಡಿವಂತಿಕೆಯಿಂದ ಮುದುರಿಕೊಂಡಿದ್ದರೆ ಆಗದು, ಹೆಣ್ಣಿನ ಪ್ರದರ್ಶನದ ಬೀದಿಯಲ್ಲಿ ಸಾಗುತ್ತಿರುವಾಗ ಹೆಣ್ಣಿಗಿಂತ ನೂರ್ಮಡಿ ತಾನೇ ನಾಚಿ ಮುಖ ಕೆಳಗೆ ಹಾಕಿದರೆ ತನ್ನನ್ನೆ ನೋಡಿ ಜನರು ನಗಬಹುದು, ತಾನು ಕುಳಿತ ಬೆಂಚಿನಲ್ಲಿ ಹೆಣ್ಣೊಂದು ದಿಗ್ಗನೆ ಬಂದು ಕುಳಿತಾಗ ತಾನೇ ನಾಚಿ ಬದಿಗೆ ಸರಿದರೆ ನಗಿಸಿಕೊಳ್ಳಬಹುದು ಎಂಬೆಲ್ಲಾ ಭಾವನೆಗಳಿಂದ ರಾಮನಾಥನೂ ಬರಬರುತ್ತ ಮುಂಬಯಿಯ ವಾತಾವರಣದಲ್ಲಿ ಮೈ-ಛಳಿ ಬಿಟ್ಟು ಓಡಾಡವುದಕ್ಕೆ ಅಭ್ಯಾಸ ಮಾಡಿಕೊಂಡನು.

...........ಆ ದಿನ ಶನಿವಾರ. ಮಧ್ಯಾಹ್ನ ಒಂದು ಗಂಟೆಗೇನೆ ಕಚೇರಿಗಳಿಗೆ ಬಿಡುವು. ಮಾರ್ಚ ತಿಂಗಳದ ಉರಿ ಆಗಲೆ ಪ್ರಖರವಾಗಿತ್ತು. ಅಂಥ ಸಮಯದಲ್ಲಿ 'ಫ್ಲೋರಾ ಫೌಂಟನ್' ನಿಂದ ಟ್ರಾಮ್ ಆಗಲಿ ಬಸ್ ಆಗಲಿ ಹಿಡಿಯುವುದೆಂದರೆ ಒಂದು ರೇಸ್ ಗೆದ್ದಂತೆಯೆ. ರಾಮನಾಥನು ಕಚೇರಿ ಮುಗಿಸಿ ಧೋಬಿತಲಾವ ಟ್ರಾಮ್ ಕಾಯುತ್ತಿದ್ದನು. ಟ್ರಾಮ್ ತುಂಬಿ ಸ್ಥಳವಿಲ್ಲದೆ ಬಸ್ಸಿಗೆ ಹಾತೊರೆದು ಅತ್ತ ಧಾವಿಸುವುದು; ಅಷ್ಟರೊಳಗೇ ಬಸ್ ಬಿಟ್ಟುಬಿಡಲು ಮತ್ತೆ ಟ್ರಾಮಿಗೊ, ಮತ್ತೊಂದು 'ರೂಟ್' ಬಸ್ಸಿಗೊ ಓಡಾಡುವ ಹೊಯ್ದಾಟದಲ್ಲಿ ಯಾವ ವಾಹನವೂ ದೊರಕದೆ ಅತ್ಯಂತ ನಿರಾಸೆಯಿಂದ ಪುನಃ ಟ್ರಾಮ್‌ಸ್ಟ್ಯಾಂಡಿಗೇ ಬಂದನು. ಟ್ರಾಮೂ ಬಿಡುವದರಲ್ಲಿತ್ತು. ನಿಯಮಬಾಹ್ಯವಾದರೂ ಅನಿವಾರ್ಯಪ್ರಸಂಗವೆಂದು ಗಡಬಡಿಸಿ ಟ್ರಾಮಿನ ಮುಂಭಾಗದಿಂದಲೆ ಏರಿದನು. ಡ್ರೈವ್ಹರನೂ ಸಹಾನುಭೂತಿಯವನಿದ್ದುದರಿಂದ ಮುಗುಳ್ನಗೆ ನಕ್ಕು ಸುಮ್ಮನಾದನು. ಕಂಡಕ್ಟರನು ದಾರ ಜಗ್ಗಿ ಬೆಲ್ ಬಾರಿಸಿದನು. ಖಟ್-ಖಟ್ ಸಪ್ಪಳ ಮಾಡುತ್ತ ಟ್ರಾಮು ಮುಂಜರಿಯಿತು. ಅಷ್ಟರಲ್ಲೇ ತರುಣಿಯೊಬ್ಬಳು ಹೆಗಲಿಗೆ ಹಾಕಿದ ಕಪ್ಪು ಬಣ್ಣದ ಮನಿಬ್ಯಾಗನ್ನು ಎಡಗೈಯಿಂದ ಬೆನ್ನಹಿಂದೆ ಹಿಡಿದುಕೊಂಡು ಬಲಗೈಯಲ್ಲಿ ಗಾಗಲ್ಸ್ ತೆಗೆದು ಹಿಡಿದು '**ಹೋಲ್ಡಾನ್**' ಎಂದು ಕೂಗುತ್ತ

ಧಾವಿಸುತ್ತ ಟ್ರಾಮು ಏರಲೆತ್ನಿಸಿದಳು. ಅವಳ ಅಸಹಾಯಸ್ಥಿತಿಗೆ ರಾಮನಾಥನು ತೀರ ಸಹಜವಾಗಿ, 'Istinctively' ಎಂಬಂತೆ ಕೈಚಾಚಿದನು. ಚಾಚಿದ ಕೈಯನ್ನು ಮಾನ್ಯ ಮಾಡಿ ತರುಣಿ ಅದರ ಸಹಾಯದಿಂದ ಟ್ರಾಮ್ ಏರಿದಳು. ಬಹಳ ವಿನಯದಿಂದ ಮುಗುಳ್ನಗೆ ನಕ್ಕು, 'Thank you for offering your hand' (ಕೈನೀಡಿದ್ದಕ್ಕಾಗಿ ನೆನೆಕೆಗಳು.)ಎಂದಳು. 'Thank you for seeking it' (ಅದನ್ನು ಸ್ವೀಕರಿಸಿದ್ದಕ್ಕಾಗಿ ನಿಮಗೆ....) ಎಂದು ರಾಮನಾಥ ಉತ್ತರ ಕೊಟ್ಟ. ಉತ್ತರದಲ್ಲಿ ಏನೋ ವ್ಯಂಗ್ಯಾರ್ಥವಿದ್ದಿರಬೇಕೆಂದು ಆಮೇಲೆ ತರುಣಿಗೆ ಹೊಳೆದಿರಬೇಕು. ಆದರೂ ಮುಗುಳ್ನಗೆಯಿಂದಲೆ ಉತ್ತರ ಸೂಚಿಸಿದಳು. ಕಂಡಕ್ಟರನು ತಿಕೆಟ್ ಹಂಚುತ್ತ ಬಂದನು. ತರುಣಿ ಹತ್ತುರೂಪಾಯಿಯ ನೋಟು ಕೊಟ್ಟು 'ಮೆಟ್ರೊ' ಎಂದಳು. ಕಂಡಕ್ಟರನು 'ನೋ ಚೇಂಜ್' (ಚಿಲ್ಲರಿಲ್ಲ) ಎಂದು ಸನ್ನೆಮಾಡಿ ನೋಟು ಹಿಂತಿರುಗಿ ಕೊಟ್ಟ. 'ಮಗ ಕಾಯ ಕರಾಯಚ?' (ಹಾಗಾದರೆ ಏನು ಮಾಡಬೇಕು!) ತರುಣಿ ಗೊಂದಲಗೆಟ್ಟಳು. ರಾಮನಾಥನು ಅಷ್ಟರಲ್ಲೇ, 'Never mind' (ಪರವಾಯಿಲ್ಲ) ಎಂದವನೆ ಎರಡಾಣೆಯ ಚೂರು ಕೊಟ್ಟು,'ದೋನ್ ಮೆಟ್ರೊ' ಎಂದನು. ಎರಡೂ ತಿಕೀಟು ಮಡಚಿ ತನ್ನ ರಿಸ್ಟ್‌ವಾಚಿನ ಬೆನ್ನಿಗಾನಿಸಿದನು. ತರುಣಿ ಕೃತಜ್ಞತಾಪೂರ್ಣಮುಖದಿಂದ ರಾಮನಾಥನಿಗೆ ಹತ್ತು ರೂಪಾಯಿಯ ನೋಟು ಕೊಟ್ಟು, 'ನಂತರ ತುಮಿ ಚೇಂಜ್ ದ್ಯಾ' (ಅನಂತರ ಚಿಲ್ಲರು ಕೊಡಬಹುದು ನೀವು.) ಎಂದಳು. 'That's all right. You have it' (ಸರಿ. ಸರಿ. ಇರಲಿ ನಿಮ್ಮ ಹತ್ತಿರವೆ ಇರಲಿ.) ಎಂದು ರಾಮನಾಥ ಬಲವಂತದಿಂದ ಮರಳಿ ಕೊಟ್ಟ. ಬದಿಬದಿಗೆ ನಿಂತುಕೊಂಡೇ ಪ್ರವಾಸ ಮಾಡಿ ಧೋಬಿತಲಾವಿಗೆ ಇಬ್ಬರೂ ಇಳಿದರು. 'ಅಚ್ಛಾ, 'Thanks very much' (ಬಹಳ ಉಪಕಾರವಾಯ್ತು.) ಎಂದು ತರುಣಿ ಮೆಟ್ರೊ ಥಿಯೇಟರಿನತ್ತ ನಡೆದಳು. ರಾಮನಾಥನೂ 'Thank you' ಎಂದು ಬೆರಳಿನಿಂದ ನಮಸ್ಕಾರ ಮಾಡಿ ಬದಿಯ ಹೋಟಲಿಗೆ ಹೋಗಿ ತಂಪು ಪಾನೀಯ ಸೇವಿಸಿ ತುಸು ವಿಶ್ರಮಿಸಿದ. ತುಸು ಹೊತ್ತಿನ ಮೇಲೆ 'ಮೆಟ್ರೊ' ಥಿಯೇಟರಿಗೆ ಹೋಗಿ ಮ್ಯಾಟನಿ ಆಟದ ಒಂದು 'ಅಡ್ವಾನ್ಸ' ಟಕೆಟ್ ಕೊಂಡುಕೊಂಡ. 'ಬೇದಿಂಗ್‌ಬ್ಯೂಟಿ' ನಡೆದು ಒಂದು ವಾರ

ಕಳೆದು ಹೋದುದರಿಂದ ಒಂದೂಕಾಲು ರೂಪಾಯಿಯ ತಿಕೆಟ್ ಸುಲಭವಾಗಿ ಸಿಕ್ಕಿತು.ಒಳಗೆ ' Air-condition ' ನಲ್ಲೇ ಕುಳಿತುಕೊಂಡರೆ ಸ್ವಲ್ಪ ಹಾಯ್ ಎನಿಸಿ ಹೊರಗಿನ ತಾಪವನ್ನೂ ಮರೆಯಬಹುದೆಂದುಕೊಂಡು ಪ್ರವೇಶ ದ್ವಾರವು ತೆರೆಯುತ್ತಲೆ ಒಳಗೆ ಹೋಗಿ ತನ್ನ ಅಂಕೆಯ ಕುರ್ಚಿಯ ಮೇಲೆ ಕುಳಿತುಕೊಂಡು ಮುಂದಿನ ಕುರ್ಚಿಯ ಕೆಳಗೆ ಕಾಲು ಚಾಚಿ ಆಕಳಿಸಿ, ಕೋಟು ತೆಗೆದು ಮಡಚಿ ಕೈಮೇಲೆ ಹಾಕಿಕೊಂಡನು. ಸಿನೇಮ ಪ್ರಾರಂಭವಾಗಲು ಹತ್ತು ನಿಮಿಷಗಳಿದ್ದಾಗ ನಸುಗತ್ತಲೆಯೊಳಗಿಂದ ಓರ್ವ ತರುಣಿ ದ್ವಾರಪಾಲಕನ ಟಾರ್ಚಿನ ಬೆಳಕನ್ನನುಸರಿಸಿ ಬಂದು, ಹಿಂದೆ ಬಿದ್ದ ಮನಿಬ್ಯಾಗನ್ನು ಮುಂದಕ್ಕೆ ಸರಿಸಿಕೊಂಡು, ಅಂಗೈಯಿಂದ ಹಿಂಬದಿಯ ಸೀರೆಯನ್ನು ಮೆಲ್ಲನೆ ತೀಡಿಕೊಂಡು ನಯವಾಗಿ ಕುಳಿತುಕೊಂಡು, ಬ್ಯಾಗಿನಿಂದ ಅಂಗೈಯಗಲ ಕರವಸ್ತ್ರ ತೆಗೆದು ಬೆವರೊರಸಿಕೊಂಡು, ಚಿಕ್ಕ ಕನ್ನಡಿಯಲ್ಲಿ ಮುಖ ನೋಡಿಕೊಂಡು, ಕೂದಲು ಓರಣಗೊಳಿಸಿ, ಬ್ಯಾಗ ಮುಚ್ಚಿ ಮೆಲ್ಲನೆ ತನ್ನೊಳಗೆ, ಕೇಳಿಸದ ಹಾಗೆ ಸಿಳ್ಳು ಹಾಕುತ್ತ ಎಡಬಲಕ್ಕೆ ನೋಡಿದಳು. ಭಗ್ಗನೆ ಅವಳ ಬಿಸಿಯುಸಿರು, ಸ್ನೊವಾಸನೆ ಬಡೆದು ರಾಮನಾಥ ಕುತೂಹಲದಿಂದ ಆಚೆಗೆ ಮುಖ ತಿರುವಿದ. ಗುರುತಿನ ಮುಖ! 'You have come for the Bathing Beauty'; (ಏನು : ಬೇದಿಂಗ್ ಬ್ಯೂಟಿ ನೋಡ್ಲಿಕ್ಕೆ ಬಂದೀರಾ?) ರಾಮನಾಥನನ್ನು ಗುರುತಿಸಿ ನಗೆಯಾಡಿದಳಾಕೆ. 'Yes only Bathing Beauty, not *soothing* beauty' (ಹೌದು ಬೇದಿಂಗ್ ಬ್ಯೂಟಿ ಮಾತ್ರ; ಇನ್ನೇನೂ ಅಲ್ಲ.) ಎಂದುತ್ತರಿಸಿದ. ಅವಳೂ ನಕ್ಕಳು. ನಸುಹೊತ್ತು ಮೌನ. 'How is it, your number is only next to mine?' (ಅದು ಹೇಗೆ, ನಿಮ್ಮ ನಂಬರು ನನ್ನ ಹತ್ತರವೇ ಬಂದದ್ದು?) ಎಂದಳಾಕೆ.

'To give you a helping hand.' (ನಿಮಗೆ ನೆರವಿನ ಕೈ ನೀಡುವದಕ್ಕಾಗಿ.)

'You want to offer your hand again?' (ಮತ್ತೊಮ್ಮೆ ಕೈ ನೀಡಬೇಕೆಂದಿರಾ?)

ಇಬ್ಬರೂ ಜೋರಾಗಿಯೆ ನಕ್ಕರು. ಮರುಕ್ಷಣವೇ 'offer your

hand again' ಎಂಬ ಪ್ರಶ್ನೆಯ ದ್ವಂದ್ವಾರ್ಥವು ಅವನನ್ನು ಸ್ವಲ್ಪ ಅಧೀರನನ್ನು ಮಾಡಿತು. ಆದರೂ ಅದಕ್ಕೆ ವಿಶೇಷ ಗಮನ ಕೊಡದೆ ಹಾಗೇ ಸರಸಸಂಭಾಷಣೆಯನ್ನು ಮುಂದರಿಸಿದ—

'You have come alone ?' (ಒಬ್ಬರೇ ಬಂದಿದ್ದೀರಾ?)

'Yes. And yourself ?' ( ಹೌದು. ನೀವು ? )

'Alone. I did not want to miss it today. ?' (ಹೌದು ನಾನೂ ಒಬ್ಬಳೇ ಬಂದಿದ್ದೇನೆ. ಇಂದು ತಪ್ಪಿಸಿಕೊಳ್ಳಬಾರದೆಂದು ಬಂದೆ.)

'Have you seen this Bathing Beauty once before ?' ( ಬೇದಿಂಗ್ ಬ್ಯೂಟಿ ಈ ಮೊದಲೇ ನೊಡಿದ್ದೀರಾ ? )

'Not this one...' ( ಈ ಬೇದಿಂಗ್‌ಬ್ಯೂಟಿ ಅಲ್ಲ......... )

'ನಾಹಿ ತಽರ ?......ಯಮುನಾಜಳಿ ಬ್ಯೂಟಿ ಮಣತಾ ಕಾಯ್ ?' (ಅಲ್ಲದಿದ್ದರೆ 'ಯಮುನಾ ಜಳಿ ಬ್ಯೂಟಿ' ಏನು ಮತ್ತೆ ? ) ಇಬ್ಬರೂ ಜೋರಾಗಿ ನಕ್ಕರು.

'I say, in which department do you work?' (ಅಲ್ಲ, ನೀವು ಯಾವ ಡಿಪಾರ್ಟಮೆಂಟಿನಲ್ಲಿ ಕೆಲಸ ಮಾಡುತ್ತೀರಿ ? ) ಸಲುಗೆಯಿಂದ ಕೇಳಿದಳು ತರುಣಿ.

'ಓ. ಟಿ. ಓ. ಆಫೀಸ' ರಾಮನಾಥನು ಉತ್ತರ ಕೊಡುತ್ತ, 'And yourself?' ಎಂದು ಪ್ರಶ್ನಿಸಿದ.

'This Rationing department ,' ಬೇಸರಪಟ್ಟಂತೆ ಹೇಳಿದಳಾಕೆ.

'Oh ! so you are a rational animal.'

'ಹೂಂ ? And yourself... ?'

'I am an emotional animal.' ತರುಣಿಗೆ ಅಪಥ್ಯವೆನಿಸದಂತೆ ಸೌಮ್ಯವಾಗಿ ಉತ್ತರ ಕೊಟ್ಟ ರಾಮನಾಥ.

'What is your native place ?'

'Dharwar.'

'I see !'

'And yourself ?'

'I belong to South-Kanara.'

'You know Kannada ?'

'Yes, and your mother-tongue must be Canarese.'

'Not Canarese but Kannada...ಇದೇನು ನೀವು ಕನ್ನಡ ಬಲ್ಲವರೂ ಕ್ಯಾನರೀಜ ಅಂತೀರಲ್ಲ?'

ತರುಣಿ ನಕ್ಕು — 'Is there a G. R. to that effect ?' ಎಂದಳು.

'ಹುಂ!G. R. ಅಷ್ಟೇ ಯಾಕೆ,Canarese ಅಂದರೆ ಖಟ್ಲೇ ಆದೀತು!'

ಇಬ್ಬರ ನಗೆಯ ಪ್ರವಾಹಗಳೂ ಸಂಗಮವಾಗುವಷ್ಟರೊಳಗೇ 'ಶೋ' ಪ್ರಾರಂಭವಾಯಿತು. ಆ ತರುಣಿಗೆ ಕನ್ನಡ ಬರುತ್ತಿದೆ ಎಂಬ ಮಾತು ಕೇಳಿದಾಗಿನಿಂದ ಏನೋ ಒಂದು ಆತ್ಮೀಯಭಾವನೆ, ಅಭಿಮಾನಗಳು ರಾಮನಾಥನಲ್ಲಿ ಜಾಗೃತಗೊಂಡುವು. ಈ ಆತ್ಮೀಯಭಾವನೆ ಅನ್ಯೋನ್ಯವಾಗಿ ಪರಿಣಮಿಸಿತೆಂದು ಹೇಳಬಹುದು. ಇಲ್ಲವಾದರೆ 'Bathing Beauty'ಯೊಳಗಿನ ಕೆಲಕೆಲವು ಸನ್ನಿವೇಶಗಳನ್ನು ನೊಡಿದಾಗ ಇಬ್ಬರೂ ಅದನ್ನು ನೋಡಿ ನಕ್ಕು ಆನಂದಿಸುವಷ್ಟು ಸಲುಗೆ ಹುಟ್ಟುತ್ತಿರಲಿಲ್ಲ.

'ಹಾಗಾದರೆ ಇಷ್ಟೊತ್ತಿನವರೆಗೂ ಒಂದೂ ಕನ್ನಡ ಮಾತಾಡದೆ ಬರಿ ಇಂಗ್ರೇಜಿ ಮರಾಠಿ ಆಡಿದಿರಲ್ಲ ?'

'ಮುಂಬಯಿಯೊಳಗಿದ್ದುಕೊಂಡು ಒಮ್ಮೆಲೆ ಕನ್ನಡ ಹೇಗೆ ಮಾತಾಡುವುದು ?'

'ಹಾಗಾದರೆ ನಾವು ಕನ್ನಡಿಗರೂ ಅನ್ನುವುದು ಗೊತ್ತಾಗುವುದು ಹೇಗೆ ?'

'ನಿಮ್ಮ ಹರುಕುಮುರುಕು ಮರಾಠಿಯಿಂದ....' ಇಬ್ಬರೂ ಜೋರಾಗಿ ನಕ್ಕರು.

'ನಿಮಗೂ ಮರಾಠಿ ಚೆನ್ನಾಗಿ ಬರೋದಿಲ್ಲ ಹಾಗಾದರೆ ?' ರಾಮನಾಥ ಕೇಳಿದ.

'ನಿಮಗೆ ಹೇಗೆ ಎನಿಸಿತು ?'

'ಮರಾಠಿಯ ಸೂಕ್ಷ್ಮ ಲಿಂಗಭೇದಗಳು ನನಗೇನು ತಿಳಿಯಬೇಕು ?'

'ಸ್ಥೂಲಭೇದವಾದರೂ ತಿಳಿಯುತ್ತದಲ್ಲ ?'

'ಹೂಂ ! ಗಂಡಸರು ಯಾರು ಹೆಂಗಸರು ಯಾರು ತಿಳಿಯುತ್ತದೆ.'

' ಸರಿ. ಅಷ್ಟಾದರೂ ತಿಳಿದರೆ ಅಡ್ಡಿಯಿಲ್ಲ. '

ರಾಮನಾಥನು ಅದೇ ನಗೆಯ ಓಘದಲ್ಲಿ ' ಮುಂಬಯಿಯಲ್ಲಿ ಕನ್ನಡ ಜನರನ್ನು ಗುರುತಿಸಲಿಕ್ಕೆ, ಲೋಕಲ್ ಗಾಡಿಗಳಲ್ಲಿ, ವಾಹನಗಳಲ್ಲಿ ಕನ್ನಡ ಕಾದಂಬರಿಗಳನ್ನೋದಲು ತೊಡಗಬೇಕು. ಕನ್ನಡಭ್ರಮರಗಳು ಕನ್ನಡದ ವಾಸನೆಗೆ ಹಾರುತ್ತ ಬರುತ್ತವೆ. '

' ಹೌದು, ಅದೇನು ಸುಳ್ಳಲ್ಲ. ಕಾರಂತರ 'ಮರಳಿ-ಮಣ್ಣಿಗೆ' ಮುಗಿಸು ವಷ್ಟರಲ್ಲಿ ನಾನು ಅನೇಕ ಜನರ ಪರಿಚಯ ಮಾಡಿಕೊಂಡಿದ್ದೇನೆ. '

' ಗಂಡಸರದೊ ಹೆಂಗಸರದೊ ? '

' ಕನ್ನಡಿಗರದು. '

' ಕನ್ನಡಿಗರಿಗೂ ಲಿಂಗಭೇದವಿಲ್ಲೇನು ? '

ಸಿನೇಮವು ಪ್ರಾರಂಭವಾಗಿರದಿದ್ದರೂ ಪ್ರಾರಂಭದ ಸುದ್ದಿ-ಚಿತ್ರಗಳಿಗೆ ಟೀಲರಗಳಿಗೆ ಮೊದಲಾಗಿ, ತಮಗೆ ಗದ್ದಲವಾಗುತ್ತದೆಂಬ ಸಂಜ್ಞೆಯನ್ನು ಎಡಬಲದವರು ಇವರತ್ತ ದುರುದುರು ನೋಡಿ ಸೂಚಿಸಿದರು. ಇವರೂ ಅದನ್ನು ಗ್ರಹಿಸಿ ಸುಮ್ಮನಾದರು. ಮಧ್ಯಂತರದ ವಿಶ್ರಾಂತಿಯ ವರೆಗೆ ತುಟಿ ಎರಡು ಮಾಡದಿದ್ದರೂ ಕಣ್ಣು-ಮುಗುಳುನಗೆಗಳಿಂದಲೆ ಮಾತನಾಡುತ್ತಿದ್ದರು. ಆಗಾಗ ಸಹಜವಾಗಿ ಒದಗುವ ಸ್ಪರ್ಶಗಳು ಇಬ್ಬರಲ್ಲೂ ಇನ್ನಷ್ಟು ಆತ್ಮೀಯತೆ ಯನ್ನೆ ತರುತ್ತಿದ್ದುವಲ್ಲದೆ ಯಾರೂ ಅವನ್ನು ಆಕ್ಷೇಪವಾಗಿ ಗ್ರಹಿಸುತ್ತಿರಲಿಲ್ಲ. ಸ್ಪರ್ಶದ ಪರಿಣಾಮವನ್ನೂ ಸಹ, ಒಳಗೊಳಗೇ ಅನುಭವಿಸಿದರೂ, ಹೊರಗೆ ಇಬ್ಬರೂ ತೋರಗೊಡಲಿಲ್ಲ. ಇದರಿಂದ ರಾಮನಾಥನಿಂದ ಸಹಜವಾಗಿ ಬರುತ್ತಿರುವ ಕೈಸೋಂಕು ಒಮ್ಮೊಮ್ಮೆ ಉದ್ದಿಷ್ಟವಾಗಿ ಬರುತ್ತಿತ್ತೆಂದರೂ ಆ ತರುಣಿ ದೊಡ್ಡ ಮನಸ್ಸಿನವಳೆಂದು ಕಂಡುಬರುತ್ತಿತ್ತು. ರಾಮನಾಥನಿಗೆ ವಿಚಿತ್ರ ಅನುಭವ. ಈ ಹಿತಸ್ಪರ್ಶದ ಸೋಂಕೇ ಇಲ್ಲದ ಅವನಿಗೆ ಏನೊ ಒಂದು ಸಿಗಬಾರದ ಸುಖ ಸಿಕ್ಕಂತಾಯಿತು.

' Interval ' ಆಯಿತು. ದೀಪ ಹತ್ತಿದಾಗ ರಾಮನಾಥನ ನಗೆಯಲ್ಲಿ ಒಂದಿಷ್ಟು ಪೆಚ್ಚುತನವಿತ್ತು. ಅದರ ಅರ್ಥ ಆ ತರುಣಿಗಾದರೂ ಅದರ ಬಗ್ಗೆ ಆಕೆ ಏನೂ ಪ್ರತಿಕ್ರಿಯೆ ತೋರಲಿಲ್ಲ, ಎಂದರೆ ಅಕ್ಷೇಪವೆತ್ತ ಲಿಲ್ಲ. ಮಧ್ಯಂತರದಲ್ಲಿ ಇಬ್ಬರೂ 'ಆರೇಂಜ-ಜ್ಯೂಸ್' ಪಾನಮಾಡಿದರು.

ವಿಶೇಷ ಮಾತು-ಕತೆಗೆ ಮುಂದುವರಿಯುವಷ್ಟರಲ್ಲಿ ಮತ್ತೆ ಕತ್ತಲೆಯಾಯಿತು. ತಮ್ಮ ತಮ್ಮ ಗ್ಲಾಸುಗಳನ್ನು ಕೆಳಗೆ ಬದಿಗೇ ಇಟ್ಟರು. 'ಇವು ನಮ್ಮೂರ ಅಡಿಕೆ' ಎಂದು ರಾಮನಾಥನು ಒಂದೆರಡು ರಾಶಿಯ ಹೋಳು ಕೊಟ್ಟನು. ತರುಣಿ ಬಾಯಲ್ಲಿ ಸ್ವೀಕರಿಸಿದಳು. ಎಷ್ಟೋ ಹೊತ್ತಿನ ಮೇಲೆ 'ಡ್ರಿಂಕ್ಸ್'ನವನು ಗ್ಲಾಸು, ರೊಕ್ಕಗಳಿಗಾಗಿ ಬಂದನು. ರಾಮನಾಥನೇ ರೊಕ್ಕ ಕೊಟ್ಟನು. ಗ್ಲಾಸುಗಳಿಗಾಗಿ ಕುರ್ಚಿಯ ಕೆಳಗೆ ಕೈಯಾಡಿಸಿದಾಗ ಎರಡು ಮೂರು ಸಲ ತರುಣಿಯ ಪಾದಸ್ಪರ್ಶವಾಯಿತು. ಕಾಲು ತಾಕಿದಾಗೊಮ್ಮೆ ತರುಣಿ 'I am sorry' (ಕ್ಷಮಿಸಿ). ಎನ್ನುವಳು. ರಾಮನಾಥನು ಮತ್ತೆ ಮತ್ತೆ ಗ್ಲಾಸು ಹುಡುಕತೊಡಗಿದನು. ಗ್ಲಾಸು ಸಿಕ್ಕವು. ಇನ್ನೇನು ಮತ್ತೆ ದೀಪ ಆರುವ ದಾರಿ ಕಾಯಬೇಕು.

'ಪಿಕ್ಚರ ಮುಗಿದ ಮೇಲೆ ನೀವೆಲ್ಲಿಗೆ ಹೋಗುವುದು ?'

'ಲೇಡೀಜ ಹಾಸ್ಟೆಲ್.'

'ಆಂ! ನೀವಿನ್ನೂ ಕಲಿಯುತ್ತೀರೇನು ?'

'ಹೂಂ.'

'ಏನು ? ಯಾವ ಪರೀಕ್ಷೆಗೆ ತಯಾರಿ ?'

'ಎಂ. ಎ.'

'ಓ ! ಏಕೆ ಬಿ. ಎ. ಸಾಕಾಗಲಿಲ್ಲವೇನು ?'

'ಏನಿದೆ ಬಿ. ಎ. ದಲ್ಲಿ? ಕೊನೆವರೆಗೂ ರೇಶನಿಂಗನಲ್ಲೇ ದುಡಿಯುವುದೆ?.

'ಕೊನೆಯುವರೆಗೂ ರೇಶನಿಂಗ ಎಲ್ಲಿರುವುದು ಬಿಡಿರಿ.'

'ಅಂತೇ ನಾನು M. A. ಮಾಡುತ್ತಿದ್ದೇನೆ.'

'M. A. ಆಗಿ ?'

'ಆಗಿ ಏನು, ಆಗುವುದು, ಮಾಸ್ಟರ ಆಫ್ ಆರ್ಟ್ಸ.'

'And Mistress of Home ?' (ಮತ್ತು ಮನೆಯ ಒಡತಿ ?)

'No. bachelor in life !' (ಅಲ್ಲ. ಅಜೀವ ಬ್ರಹ್ಮಚಾರಿ)

'ಹೌದು, ಹಾ:ಲಿವುಡ್‌ದಲ್ಲೂ ಎಲ್ಲರೂ ಬ್ಯಾಚಲರರೇ ಇರ್ತಾರಂತೆ!'

'ಇದು ಹಾ:ಲಿವುಡ್ ಅಲ್ಲವಲ್ಲ.'

‘ ಅಂತೇ ಒಬ್ಬರು ಒಬ್ಬರನ್ನೇ ಮದುವೆಯಾಗಬೇಕು. ಲೀಲಾವತಿ ಮುನ್ಸಿಯವರು ಮದುವೆಯ ರೇಶನ್ ಕಾಯಿದೆ ತಂದಿದ್ದಾರಲ್ಲ......’

‘ ಹೌದು ಅದು ಗಂಡಸರಿಗೆ—’

‘ಆದರೂ ಸಂಸ್ಥಾನದೊಳಗಿನ ಗಂಡಸರು ಸುರಕ್ಷಿತವಾಗಿಯೆ ಇದ್ದಾರೆ.’

‘ ನಿಮ್ಮದೂ ಸಂಸ್ಥಾನವೇನು ? ’

‘ ಅಲ್ಲ’ Anarchy. ನನ್ನ ಜೀವನವೇ ಒಂದು Anarchy.’

‘ So you are not the monarch of yourself. ’

‘ ಸಾಮ್ರಾಜ್ಞಿಯಿಲ್ಲದ ಸಮ್ರಾಟ ನಾನು. ’

ತರುಣಿ ಇದಕ್ಕೇನು ಉತ್ತರ ಕೊಡಬೇಕೆಂದು ಬಗೆದಿದ್ದಳೊ! ಒಮ್ಮೆಲೆ ದೀಪವಾರಿದುವು. ಇಬ್ಬರೂ ಚಿತ್ರದಲ್ಲಿ ಚಿತ್ತವುಳ್ಳವರಾದರು.

* * * *

ಸಿನೇಮಾ ಮುಗಿದಾಗ ಇನ್ನೂ ಆರು ಹೊಡೆದಿರಲಿಲ್ಲ. ಸೂರ್ಯನು ಅಖಂಡವಾಗಿದ್ದ. ಗಗನಸಮ್ರಾಟನಾಗಿದ್ದರೂ ಪಶ್ಚಿಮಸಾಮ್ರಾಜ್ಞಿ ಇನ್ನೂ ವಶವಾಗಿರಲಿಲ್ಲ.

‘ ನೀವೆಲ್ಲಿಗೆ ಹೋಗುವುದು ? ’ ತರುಣಿ ಕೇಳಿದಳು.

‘ ಕೊಂಡವಾಡ ಸೇರುವ ಮೊದಲು ಸ್ವಲ್ಪ ಅತ್ತಿತ್ತ ಮೇಯ್ದು ಬರ ಬೇಕೆನ್ನುತ್ತೇನೆ. ’

‘ ನನ್ನೊಟ್ಟಿಗೆ ಬರುವಿರಾ ? ’

‘ ನೀವು ಮೇಯಿಸುತ್ತೀರೇನು ? ’ ರಾಮನಾಥ ಜೋರನೆ ನಕ್ಕ.

‘ ಅದೋ ಬಸ್ ಬಂತು........’

‘ ಹುಂ. ಬಸ್ ಬಂದರೆ ಅದೊ ಕ್ಯೂ ನೋಡಿರಿ, ಮೈಲುದ್ದ !’

‘ ಟ್ರಾಮಿಗೆ ಹೋಗೋಣವೆ ? ’

‘ ಎಲ್ಲಿಗಿಳಿಯುವುದು ? ’

‘ ನಮ್ಮ ರೂಮಿಗೆ. ’

‘ ನಿಮ್ಮ ರೂಮು ಎಲ್ಲಿ ? ’

‘ ಭಾಯುಖಳಾ. ’

‘ ಸ್ತ್ರೀಯರ ವಸತಿ ಎಂದಿರಲ್ಲ ? ’

'ತಪ್ಪೇನಾಯ್ತು ?'

'ನಾನು ಪುರುಷನಾಗಿದ್ದುದು—'

'ಪರವಾಯಿಲ್ಲ. ನಮ್ಮ 'Brother' ಅಂತ ಹೇಳುತ್ತೇನೆ.'

'Brother ?' ರಾಮನಾಥನಿಗೆ ಏನು ಹೇಳಬೇಕೊ ತಿಳಯಲಿಲ್ಲ.

'ಯಾಕೆ ?'

'ಮತ್ತೆ ಮುಖಗಳು ಒಂದೇ ಇಲ್ಲವಲ್ಲ ಅಂದರೆ ?'

'Cousin-brother ಎಂದು ಹೇಳೋಣವೆ ?'

'ಉಂ ಹೂಂ. ಮುಖಗಳು ಒಂದೇ ಇರದಿದ್ದರೇನಾಯಿತು, ಮನಸ್ಸು ಒಂದೇ ಇವೆ ಎಂದು ಹೇಳೋಣ.'

'ಸರಿ. ಅಂತೂ Brother ಎನ್ನುವುದಕ್ಕೆ ನಿಮ್ಮದೇನೂ ಆಕ್ಷೇಪ ಇಲ್ಲವಷ್ಟೇ ?'

'ಅದೋ ಟ್ರಾಮ್ ಬಂತು.'

ಅಂತೂ ಗದ್ದಲವಲ್ಲಿ ನುಗ್ಗುತ್ತ ಹೋಗುವುದು ತೀರ ದುಸ್ತರವೆನಿಸಿ ತರುಣಿ ಸ್ವಲ್ಪ ಹಿಂಜರಿದಂತೆ ತೋರಲು, ರಾಮನಾಥನು ಅವಳ ಕೈಹಿಡಿದು, ಭುಜ ಹಿಡಿದು ದಾಟಿಸಿದನು. ಅಂತೂ ನಿಲ್ಲುವುದಕ್ಕಾದರೂ ಸ್ಥಳ ದೊರೆಯುವುದು ಅಸಾಧ್ಯವೆನಿಸಿ, ಇಬ್ಬರೂ ನುಗ್ಗುನುಗ್ಗಾಗಿ ಹೋದರು. ಇಂಥದರಲ್ಲೂ ಪ್ರವಾಸಿಗರ ಮತ್ತೊಂದು ತೆರೆ ಬಂದು ಅಪ್ಪಳಿಸಲು ಅನಿವಾರ್ಯವಾಗಿ ಜೋಲಿ ಹಿಡಿಯಲು ತರುಣಿಯು ಭುಜಗಳನ್ನಾಶ್ರಯಿಸಬೇಕಾಯಿತು. ಇದನ್ನು ನೋಡಿ ಯಾವನೊ ಒಬ್ಬ ಪುಂಡ, 'ಯೇ ಭಯ್ಯಾ, ಉಧರ ಔರತ್ ಲೋಕ, ದೇಖತಾ ನಹಿ ?' ಎಂದು ಗದ್ದರಿಸುತ್ತ ಮುಂದೆ ಬಂದು ತಾನೇ ತರುಣಿಯ ಬಳಿ ನಿಲ್ಲಲೆತ್ನಿಸಿದ. ಅಷ್ಟರಲ್ಲೇ ಮತ್ತೊಬ್ಬ—'ಅರೆ, ಯೆ ತೊ ಇಸ್ಕಿ ಔರತ ಹೈ.' ಎಂದು ಅವನ ಬಾಯಿ ಗಪ್ಪು ಮಾಡಿದ. ತರುಣಿ ರಾಮನಾಥನನ್ನು ನೋಡಿ ಒಳಗೊಳಗೇ ನಕ್ಕಳು. ರಾಮನಾಥನೂ ಅದನ್ನು ಸ್ವಾರಸ್ಯವಾಗಿ ಸ್ವೀಕರಿಸಿದ. ಆ ಚಕ್ರವ್ಯೂಹದಲ್ಲಿ ಸಿಕ್ಕು ಒದ್ದಾಡಿದರೂ ಇಬ್ಬರೂ ಚಕ್ರವಾಕಗಳಂತೆ ಅತ್ಯಂತ ಸಾಮಿಪ್ಯವನ್ನು ಅನುಭವಿಸಿದರು. ಸಾಮಿಪ್ಯವೆಂದರೇನು, ಮೈಗೆ ಮೈ ತಾಕಲಾಡಿದವು. ತರುಣಿಯ ಮುಡಿ ರಾಮನಾಥನ ಮೂಗಿಗೇ ಬಂದು ಆನುತ್ತಿರುವಾಗ ಆ ಪರಿಮಳವು ಮಾದಕ

ದ್ರವ್ಯದಂತೆ ಅವನಿಗೆ ಹುಚ್ಚು ಹಿಡಿಸುವಂತಾಯಿತು. ಮತ್ತೆ ಮತ್ತೆ ಬಗ್ಗಿ ಆ ಪರಿಮಳವನ್ನು ಸವಿಯುತ್ತಿದ್ದ. ಶಕೆಯಿಂದ ಸೂಸುವ ಅವಳ ಸ್ವೇದದ ಪರಿಮಳವು ಸಹ ತುಂಬಿಗೆ ತಾವರೆಯ ರಸದಂತೆನಿಸುತ್ತಿತ್ತು ರಾಮನಾಥನಿಗೆ. ಕೂಟಕೂಟಕ್ಕೆ ಜನದಟ್ಟಣೆ ಹೆಚ್ಚುತ್ತಲಿದ್ದಷ್ಟು ರಾಮನಾಥನ ಹುರುಪಿನ ರಭಸವು ಹೆಚ್ಚಾಗುತ್ತಿತ್ತು. ತರುಣಿಯ ಮುಡಿಯಿಂದ ಸೂಸುತ್ತಿರುವ ವಾಸನೆಯ ಜಾಡು ಹಿಡಿದು ರಾಮನಾಥನ ಕಲ್ಪನೆಯು ಜಾನಕಿಯ ಜೊತೆಗಿನ ರಸನಿಮಿಷಗಳನ್ನು ಕಣ್ಮುಂದೆ ತಂದುಕೊಟ್ಟಿತು, Associations ಎಂದು ಹೇಳುವರಲ್ಲ, ಆ ಮಾದರಿಯಲ್ಲಿ. ಒಂದು ಸಂಗೀತವನ್ನೆ ಕೇಳಲಿ, ಸವಿತಿನಿಸನ್ನೆ ತಿನ್ನಲಿ, ವಿಶಿಷ್ಟ ಒಂದು ವಾಸನೆಯನ್ನೆ ಮೂಸಲಿ, ಆಯಾ ಸಂದರ್ಭದ ಸಹವಸ್ತುಗಳು ಮತ್ತೊಂದು ಕಾಲಕ್ಕೆ ಅದೇ ಸಂಗೀತವನ್ನು, ಅದೇ ಸವಿಯನ್ನು, ಅದೇ ವಾಸನೆಯನ್ನು ಅನುಭವಿಸಿದಾಗ ನಮ್ಮ ಕಲ್ಪನೆಯ ಮುಂದೆ ರೂಪವೆತ್ತು ನಿಲ್ಲುತ್ತವೆ. ತರುಣಿಯ ಮುಡಿಯಿಂದ ಸೂಸಿದ ವಾಸನೆಯಾವುದೆ ಹೂವಿನ ಮಾಲೆಯದಿರದಿದ್ದರೂ ಅವಳ ಹೆಳಲ ತೈಲದ ವಾಸನೆಯಷ್ಟೆ ಸಾಕಾಗಿತ್ತು, ರಾಮನಾಥನಿಗೆ ಜಾನಕಿಯ ನೆನಪು ತರುವುದಕ್ಕೆ....

ಮದುವೆಯಾದ ಹೊಸತಾಗಿ ಒಮ್ಮೊಮ್ಮೆ ಬಿಸಿಲು ಹೊತ್ತೇರಿದಾಗ ಜಾನಕಿ ಬಾವಿಯ ನೀರು ಜಗ್ಗುತ್ತಿರುವಾಗ ಬಿಸಿಲಲ್ಲಿ ಕಷ್ಟಪಡುತ್ತಿರುವ ಅವಳಿಗೆ ನೆರವಾಗಲೆಂದು ನೀರು ಜಗ್ಗಲು ಹಿಡಿಯುವಾಗ ಅವಳ ಹೆಳಲಿನ ಸಮೀಪದ ವಾಸನೆ ಅದು ಎಷ್ಟೆ ಅಸ್ವಾರಸ್ಯವೆನಿಸಿದರೂ ಏನೋ ಅವನಿಗೊಂದು ಜುಮ್ಮು ಹಿಡಿಸುವ ರೋಮಾಂಚ ಅದರಲ್ಲಡಗಿರುತ್ತಿತ್ತು. ಆ ಮೋಹಕ ರಸನಿಮಿಷವೀಗ ರಾಮನಾಥನಿಗೆ ಜಾನಕಿಯಿಂದಗಲಿದ ಅಸಹಾಯತೆಯ ತೀವ್ರವೇದನೆಯನ್ನುಂಟುಮಾಡಿತು. ಆ ತರುಣಿಯೆ ಜಾನಕಿಯಾಗಿದ್ದರೆ ?....ಎಂಬ ಹುಚ್ಚು ಕಲ್ಪನೆಯೂ ಬಂದು ತನ್ನ ಭಾವನೆಯ ಓಟದಲ್ಲಿ, ಕಲ್ಪನೆಯ ಮಾಟದಲ್ಲಿ ತರುಣಿ ತನ್ನನ್ನು ನೋಡಿದಾಗೊಮ್ಮೆ ಏನೋ ಅಧೀರತೆಯ ಹುಚ್ಚು ಮುಗುಳ್ನಗೆಯೊಂದನ್ನು ಸುಳಿಸಿ ಹಾಗೇ ನಿಲ್ಲುತ್ತಿದ್ದನು. ಪ್ರೇಮದ ವಸ್ತುವೊಂದಿರದಿದ್ದರೆ ಪುರುಷನಿಗೆ ಜೀವನವು ನೀರವ ನಿಸ್ಸಾರವೆನಿಸುವುದೇನು ಸೋಜಿಗ! ರಾಮನಾಥನಿಗೀಗ ಪ್ರೇಮವೆಂಬುದು ದೇವತ್ವದ ಮಟ್ಟವನ್ನು ಮುಟ್ಟದೆ ದೇಹದ ಸುಖದ ಮಟ್ಟಿಗಿಳಿದು ಅವನ

ವ್ಯಕ್ತಿತ್ವವನ್ನೆ ಮುಟ್ಟಿಗೆ ಮಾಡಿಬಿಟ್ಟಿತು. ಹಸಿದ ಹೊಟ್ಟೆಗೆ ಒಗ್ಗರಣೆಯ ವಾಸನೆ ಏನೇನೋ ಮಾಡಿಬಿಡುತ್ತದೆ. ರಾಮನಾಥನ ಅವಸ್ಥೆ ಬಹಳ ಅಸಹಾಯ ವಾಗಿತ್ತು. ತಾಯಿಯನ್ನು ಕಳೆದುಕೊಂಡ ಮಗು ಕಂಡವರನ್ನು ತಾಯಿಯಂತೆ ಕಾಣಹೋಗುತ್ತದೆ; ಅದನ್ನು ಕಂಡವರಲ್ಲಿ ಕನಿಕರವನ್ನು ಹುಟ್ಟಿಸುತ್ತದೆ.

ಟ್ರಾಮು ಜೆ. ಜೆ. ಹಾಸ್ಪಿಟಲ್ ಕೂಟಿಗೆ ನಿಂತಿತು. ತರುಣಿ ಅಲ್ಲಿಯೆ ಇಳಿಯೋಣ ಎಂದು ಸನ್ನೆಮಾಡಿದಳು. ರಾಮನಾಥ ಇಳಿದುಬಿಟ್ಟ. ಮತ್ತೊಮ್ಮೆ ನೂಕುನುಗ್ಗಲಿಂದ ಹೊರಬರುವುದರೊಳಗೆ ಸಾಕಾಗಿಹೋಯಿತು. ತರುಣಿ ಟ್ರಾಮು ಇಳಿದು, ತಲೆ ಅಲ್ಲಾಡಿಸಿ ಕೂದಲು ಓರಣ ಮಾಡಿಕೊಂಡು, ಕೈಯೊಳಗಿನ ಕಿರುಗಡಿಯಾರ ಸರಿಪಡಿಸಿಕೊಂಡು, ಕತ್ತು ಕೆಳಗೆ ಮಾಡಿ ತನ್ನ ಮೈ ತಾನೇ ನೋಡಿಕೊಳ್ಳುತ್ತ, ಜಾರಿ ಬಿದ್ದ ಸೆರಗನ್ನು ಮತ್ತೆ ಎಡಭುಜದ ಮೇಲೆ ನಿಲ್ಲಿಸಲೆತ್ನಿಸಿದಳು. ಅದೆಷ್ಟು ಮಟ್ಟಿಗೆ ಸ್ಥಿರವಾಗಿ ನಿಂತಿತೊ ಹೇಳಲಿಕ್ಕೆ ಬಾರದು.

' ನಮ್ಮ ರೂಮಿಗೆ ಹೋಗೋಣವೆ ? '

' ನಿಮ್ಮ ಝನಾನಾದಲ್ಲಿ ನಮಗೆಲ್ಲಿಯ ಪ್ರವೇಶ ? '

ತರುಣಿ ನಕ್ಕಳು. ಮತ್ತೆ ಮುಂದುವರಿಯುತ್ತ—

' ಪರವಾಯಿಲ್ಲ ಬನ್ನಿರಿ. ನನ್ನ ಗೆಳತಿಯರಿಗೆ ನಿಮ್ಮ ಪರಿಚಯ ಮಾಡಿ ಕೊಡುತ್ತೇನೆ. '

' ಯಾರೆಂದು ಪರಿಚಯ ಮಾಡಿಕೊಡುತ್ತೀರಿ ? '

' ನನ್ನ Friend ಎಂದು. ' ತರುಣಿ ರಾಮನಾಥನ ಮನಸ್ಸನ್ನು ನೋಡಲು ಬೇಕೆಂದೇ ಬೇರೆ ತರಹ ಹೇಳಿದಳು.

ರಾಮನಾಥ ಸುಮ್ಮನಿದ್ದ.

'ಹಾಗಾದರೆ ನಮ್ಮಣ್ಣ ಬಂದಿದ್ದಾರೆ ಮಂಗಳೂರಿನಿಂದ, ಎಂತಲೆ ಹೇಳಲೆ ? '

ರಾಮನಾಥ ಸುಮ್ಮನಿದ್ದ.

' ಏಕೋ ಬಹಳ ಯೋಚನೆಯಲ್ಲಿದ್ದಂತೆ ಕಾಣುತ್ತದೆ ? '

' ಇಲ್ಲಿಯೇ ಎಲ್ಲಾದರೂ ಒಂದು ಇರಾಣಿ ಹೋಟ್ಲಿನಲ್ಲಿ ಆಮ್ಲೆಟ್ ತಗೊಳ್ಳೋಣವೆ ? ನನಗೆ ತುಂಬಾ ಹಸಿವು. '

‘ ಹಾಗಿದ್ದರೆ ಫ್ಲೋರ್ಟಿನಲ್ಲೇ ತಕ್ಕೊಳ್ಳುತ್ತಿದ್ದೆವಲ್ಲ ? ’

‘ ಇರಲಿ, ಈಗ ಮತ್ತೆ ಫ್ಲೋರ್ಟಿಗೆ ಬೇಡ. ಫ್ಲೋರ್ಟಿಗೆ ನಾಳೆ ಹೋಗೋಣಂತೆ. ’

‘ ನಾಳೆ ಫ್ಲೋರ್ಟಿಗೆ, ನಾಡಿದ್ದು ? ’ ತರುಣಿ ನಗುತ್ತ ಕೇಳಿದಳು.

‘ ನಾಡಿದ್ದು ಕೋರ್ಟಿಗೆ. ’ ವಿಶೇಷ ಅರ್ಥವನ್ನಿಟ್ಟುಕೊಳ್ಳದೆ ಕೇವಲ ಪ್ರಾಸದ ಛಲದಿಂದ ಉತ್ತರಿಸಿದ ರಾಮನಾಥ.

‘ ಕೋರ್ಟಿಂಗ್ ಮಾಡಲಿಕ್ಕೆ ಕೋರ್ಟಿಗೆ ಹೋಗುತ್ತಾರೇನು? ’ ತರುಣಿ ನಗುತ್ತ ಕೇಳಿದಳು.

‘ ಕೋರ್ಟಿಗೆ ಅಂದರೆ ಟೇನಿಸ್ ಕೋರ್ಟಿಗೆ ಅಂತ ನಾನಂದದ್ದು.

‘ ನೀವು ಟೇನಿಸ್ ಆಡುತ್ತೀರಾ ? ’

‘ ನೀವು ? ’

‘ ನಾನೂ ಆಡುತ್ತೇನೆ. ’

‘ ಹಾಗಾದರೆ ಇಬ್ಬರೂ ಆಡೋಣವೆ ? ’

‘ ಇದೇನು ಈಗಲೆ ಆಟ ಹೂಡುವವರೇನು ಮತ್ತೆ ನೀವು ? ’

‘ ನಾವಿಬ್ಬರೂ ಸರಿಯಾದ ಹುದ್ದರಿಗಳಲ್ಲವೆ ? ’

‘ ಜೀವನವೂ ಒಂದು ಟೇನಿಸ್ ಕೋರ್ಟೇ ಅಲ್ಲವೆ ? ’

ನಗುತ್ತ ಇಬ್ಬರೂ ಒಂದು ಇರಾಣಿ ಹಾಟೆಲ್ಲಿಗೆ ಬಂದರು. ಒಂದು ಫ್ಯಾಮಿಲಿ ರೂಂ ಪ್ರವೇಶಮಾಡಿದರು. ತೆರೆ ಎಳೆದರು. ಸಾಮಾನ ತಂದಿಟ್ಟು ಹೋಗುತ್ತಿರುವ ‘ ಬಾ:ಯ್ ’ ಇವರ ಸ್ವಾತಂತ್ರ್ಯವನ್ನೇನೂ ಅಪಹರಿಸಲಿಲ್ಲ. ಆಮ್ಲೆಟ್ ಆಯಿತು, ‘ ವೇಫ಼ರ್ ’ ಆಯಿತು, ‘ ದೋ ಚಾ ’ ಎಂದು ರಾಮನಾಥ ಆಜ್ಞಾಪಿಸಿದ.

‘ ಇಶ್ಶಿ, ನನಗೆ ಈ ಪಾವಡರ ಚಹಾ ಓಕರಿಕೆ ಇಟ್ಟುಹೋಗಿದೆ. ಏನಾದರೂ ಡ್ರಿಂಕ್ಸ ಹೇಳಿರಿ. ’

‘ ದೋ ರಾಜರ್ಸ ಆ:ರೆಂಜ್ ಲಾನಾ ! ’

‘ ಈಗ ತಂಪಾಯಿತಲ್ಲವೆ ? ’ ಪಾನೀಯ ಮುಗಿಯುತ್ತಲೆ ಕೇಳಿದಳು ತರುಣಿ.

‘ ಜ್ವಾಲಾಮುಖಿಯ ಮೇಲೆ ಆಯಿಸ್ ಇಟ್ಟಂತೆ. ’

‘ ಎಷ್ಟು ಛಂದಾಗಿ ಮಾತಾಡ್ತೀರಿ ನೀವು ? ’

‘ ನಾನು ಮಾತಾಡೋದಿಲ್ಲ, ಒಳಗಿನ ಹೃದಯ ಮಾತಾಡಿಸುತ್ತದೆ.’

‘ ಏನು ನಿಮ್ಮ ಹೃದಯದೊಳಗೇ ಜ್ವಾಲಾಮುಖಿ ಇದ್ದವರ ಹಾಗೆ ಮಾತಾಡುತ್ತೀರಲ್ಲ ? ’

‘ ಬಹಳ ಸರಿಯಾಗಿ ಹೇಳಿದಿರಿ. ’

ರಾಮನಾಥನ ಕಂಠ ಗದ್ಗದಿತವಾಯ್ತು. ತರುಣಿ ಸ್ವಲ್ಪ ಅನುಮಾನಿಸುತ್ತ ಮಾತಾಡಿದಳು :

‘ ಪ್ರಥಮಪರಿಚಯಕ್ಕೇ ಬಹಳ ಮಾತಾಡಿದೆನಲ್ಲವೆ ? ’

‘ ನನ್ನೊಡನೆ ಇಷ್ಟು ಆಪ್ತವಾಗಿ ಮಾತಾಡುವವರು ಇಲ್ಲಿ ಒಬ್ಬರೂ ನನಗೆ ದೊರೆತಿರಲಿಲ್ಲ. ’

‘ ನಾನೂ ‘accidentally’ ದೊರೆತೆನಲ್ಲವೆ ? ’

‘ Accidentally ’ ಎಂಬ ಶಬ್ದ ರಾಮನಾಥನನ್ನು ಸೆರೆಹಿಡಿಯಿತು.

‘ Life is an accident. Love is an accident.’ ( ಜೀವನವೊಂದು ಆಕಸ್ಮಿಕತೆ. ಪ್ರೇಮವೊಂದು ಆಕಸ್ಮಿಕತೆ.)

‘ ನೀವು ಬಹಳ ನೊಂದುಕೊಂಡವರಂತೆ ತೋರುತ್ತೀರಲ್ಲ ? ’ ರಾಮನಾಥ ಇದೇ ಮಾತಿನ ಸರಣಿಯನ್ನು ಮುಂದರಿಸಲು ಇಷ್ಟಪಡಲಿಲ್ಲ.

‘ ನನ್ನ ಕತೆ ದೊಡ್ಡದಿದೆ. ’

‘ ಹೊಂ ! ನೀವೂ ದೊಡ್ಡವರಂತೆ ಕಾಣುತ್ತೀರಿ. ’ ತರುಣಿಯ ಬೆಡಗು ಬಿನ್ನಾಣದ ಮಾತುಕತೆ, ನಡೆನುಡಿಗಳ ಚಾಕಚಕ್ಯತೆ ರಾಮನಾಥನಲ್ಲಿ ಏನೇನೊ ಭಾವನೆಗಳನ್ನು ಹುಟ್ಟಿಸಿದುವು. ಜಾನಕಿಯೊಡನೆ ಇಷ್ಟು ಸರಸವಾಗಿ ಸರಿಸಮಾನವಾಗಿ ತಾನು ಮಾತಾಡಿರಲಿಲ್ಲವೆನಿಸಿತು. ಸುಶಿಕ್ಷಿತ ದಾಂಪತ್ಯವು ಹೇಗಿರುತ್ತದೆ ಎಂದು ರಾಮನಾಥನಿಗೆ ಆಗಾಗ ಒಂದು ಸೋಜಿಗವು ತೋರುತ್ತಿತ್ತು. Accidentನಿಂದ ಉಂಟಾದ ಈ ತರುಣಿಯ ಪರಿಚಯವು ರಾಮನಾಥನಿಗೆ ಮೊದಲಿನ ಗಾಡಿಯ ಪರಿಚಯವನ್ನು ದೃಢಪಡಿಸಬೇಕೆಂಬ ಚಾಪಲ್ಯಕ್ಕೆ ಹೆಚ್ಚೆಚ್ಚು ಆಸ್ಪದ ಮಾಡಿಕೊಟ್ಟಿತು.

ರಾಮನಾಥ ತರುಣಿಯ ಕೈತಿರುವಿ ಅವಳ ಗಡಿಯಾರ ನೋಡಿ—‘ಓ ಹೊತ್ತಾಯಿತು ! ’ ಎಂದ.

' ಯಾತಕ್ಕೆ ? '

' ಹೌದು ಅದೂ ನಿಜವೆ. ಯಾವುದಕ್ಕೂ ಹೊತ್ತಾಗಲಿಲ್ಲ. ಹೋಟೆಲಿನವನು ಸೊರೆಗೆ ಹಾಕಿಯಾನು ಅಂತ ಅಂದೆ ಅಷ್ಟೆ. ' ತರುಣಿ ಬೆಲ್ ಬಾರಿಸಿದಳು. ಬಾಃಯ್ ಬಂದ. ' ಅಭಿ ದೋ ವೇಫರ್ ಲಾನಾ ' ಎಂದಳು. ' ಅಚ್ಛಾ ದೋ ಚಾಭೀ ಲಾನಾ ' ರಾಮನಾಥನೆಂದ.

' ಇದೇನು ? ಇದೀಗ ತಂಪಾಯಿತು. ಈಗಾಗಲೆ ಬಿಸಿಯೇ ? '

' ಜೀವನವೆ ಹಾಗಿರುತ್ತದೆ. ತಂಪಾದ ಮೇಲೆ ಬಿಸಿ, ಬಿಸಿಯಾದ ಮೇಲೆ ತಂಪು. '

ವೇಫರ್ ಸೇವಿಸುತ್ತ ಚಹ ಕುಡಿಯುತ್ತಿರುವಾಗಲೇ ರಾಮನಾಥನಿಗೊಂದು ಸ್ಫೂರ್ತಿ ಹೊಳೆಯಿತು. ' Let us exchange our cups' (ನಮ್ಮ ಕಪ್ಪುಗಳನ್ನು ಬದಲಿಸೋಣ) ಎಂದು ಹೇಳಿದ.

' Sorry, ನಾನು ಕಪ್ಪಿನಿಂದಲೆ ಕುಡಿದಿದ್ದೇನೆ. '

' ನಾನೂ ಸಹ, ಅದಕ್ಕೆಂತಲೆ ಕೇಳಿದ್ದು. '

ತರುಣಿ ಒಪ್ಪುವಂತೆ ತೋರಲಿಲ್ಲ. ಮಗುವಿನಂಥ ಮನಸ್ಸಿನಿಂದ ಕನಿಕರಬಟ್ಟು ಕೇಳುತ್ತಿರುವ ರಾಮನಾಥನ ಹೃದಯವನ್ನು ಸೂಕ್ಷ್ಮವಾಗಿ ಓದಿಕೊಂಡಳು ತರುಣಿ. ಒಬ್ಬರನ್ನೊಬ್ಬರು ಮುಗುಳ್ನಗುತ್ತ ನೋಡಿದರು. ಕಪ್ಪುಗಳು ಬದಲಾದವು. ಮೊದಲನೆಯ ಸುರುಕು ಎಳೆದಾಗ ಅದರ ಬಿಸಿ ನಾಲಗೆಗೆ ಚುರುಕು ಹತ್ತಲಿಲ್ಲ. ರಾಮನಾಥನ ಹೃದಯಾಂತರಾಳವನ್ನೆ ಚುರುಗುಟ್ಟಿಸಿತು. ಪೆಚ್ಚು ಮುಖಮಾಡಿ ತರುಣಿಯ ಕೈ ಹಿಡಿದ. ತರುಣಿಯೂ ಭಾವಪೂರ್ಣವಾಗಿ ಅವನನ್ನೆ ನೋಡುತ್ತ ಸುಮ್ಮನಿದ್ದಳು ಎಷ್ಟೋ ಹೊತ್ತು ಇಬ್ಬರೂ ಮೌನದಿಂದಿದ್ದರು. ಮನಸ್ಸುಗಳು, ಹೃದಯಗಳು ಸಮೀಪ ಬಂದುವೆಂದು ತೋರಿಸಲು ಮುಖಗಳು ಮೊದಲು ಸಮೀಪ ಬಂದುವು. ಪ್ರೇಮದ ಸವಿಯನ್ನೇ ಹೀರುವಂತೆ ರಾಮನಾಥ ಕಸುವಿನಿಂದ ತರುಣಿಯ ತುಟಿಗೆ ಮುತ್ತಿಟ್ಟ. ಬಾಃಯ್ ಬಿಲ್ಲು ತಂದಿಡಲು ಒಳಗೆ ಬಂದಾಗ ಅವರಿಗೆ ಬಾಣ ಬಿಟ್ಟಂತಾಯಿತು. ಬಿಲ್ಲು ಕೊಟ್ಟು ಹೊರಬಂದರು.

' ನಾಳೆ ಫ್ಲೋರ್ಟಿಗೆ ಹೋಗೋಣವೆ ? '

ಸ್ಥಳ ವೇಳೆ ನಿಶ್ಚಿತವಾದುವು. ಮರುದಿನ ಸಂಜೆಗೆ ಸರಿಯಾಗಿ ಆರು ಗಂಟೆಗೆ ' ಕಿಟ್‌ಕ್ಯಾಟ್ 'ನಲ್ಲಿ ಬೆಟ್ಟಿಯಾದರು...........

' ನಾಳೆ ಗೇಟವೇದಲ್ಲಿ ಬೆಟ್ಟಿಯಾಗೋಣವೆ? '

ಸ್ಥಳ ವೇಳೆ ನಿಶ್ಚಿತವಾದುವು. ಮರುದಿನ ಸಂಜೆ ಸರಿಯಾಗಿ ಆರು ಗಂಟೆಗೆ ' ಗೇಟ-ವೇ ' ಬಳಿ ಬೆಟ್ಟಿಯಾದರು. ಸಮುದ್ರವು ಶಾಂತವಾಗಿದ್ದರೂ ದಂಡೆಗೆ ಅಪ್ಪಳಿಸುವ ತೆರೆಗಳ ಅಬ್ಬರ ಕಡಿಮೆಯಾಗಿರಲಿಲ್ಲ. ' ಚಲೋ ಚಾರ ಚಾರಾನಾ. ಹರೇಕ ಚಾರಚಾರಾನಾ. ' ಬೋಟಿನವ ಕೂಗುತ್ತಿದ್ದ. ಇಬ್ಬರೂ ಸೇರಿ ಬೋಟಿಂಗ ಮಾಡಿ ಬಂದರು. ಬೋಟಿಂಗ ಮುಗಿಸಿ ಭಾರತದ ಮಹಾ-ದ್ವಾರದಿಂದ ಹಾಯ್ದು ಬಂದಾಗ, ಪರದೇಶದ ಪರಕೀಯ ದೇಹಗಳೆರಡು ಸ್ವದೇಶ ಭೂಮಿಯ ಆತ್ಮೀಯತೆಯನು ಪಡೆದು ಪ್ರವೇಶ ಮಾಡಿದುವು...........

' ನಾಳೆ ಚರ್ನಿರೋಡ ಗಾರ್ಡನ್‌ನಲ್ಲಿ ಬೆಟ್ಟಿಯಾಗೋಣವೆ ? '

ಸ್ಥಳ ವೇಳೆ ನಿಶ್ಚಿತವಾದುವು. ಮರುದಿನ ಸಂಜೆ ಸರಿಯಾಗಿ ಆರು ಗಂಟೆಗೆ ಚರ್ನಿರೋಡ ಗಾರ್ಡನ್ನದಲ್ಲಿ ಬೆಟ್ಟಿಯಾದರು. ಎತ್ತರದಲ್ಲಿ ಕೆಂಪು ಬಣ್ಣದಿಂದ ಕಂಗೊಳಿಸುವ ' 501 ' ಸಾಬಾಣದ ಜಾಹೀರಾತು ಉನ್ನತ-ವಾಗಿ ಮೆರೆಯುತ್ತಿತ್ತು. ಸುತ್ತಲೂ ಹಬ್ಬಿದ ಮಲಬಾರ ಬೆಟ್ಟದ ಪ್ರೇಕ್ಷಣೀಯ ದೃಶ್ಯ ! ಚೌಪಾಟಿಯ ವಿಸ್ತಾರವಾದ ಪುಲಿನಸ್ಥಳ, ಅಚ್ಚುಕಟ್ಟಾಗಿ ಅಂದವಾಗಿ ಓಡಾಡುತ್ತಿರುವ ಮಾನವಚಕ್ರವಾಕಗಳು, ನಿಮಿಷಕ್ಕೊಮ್ಮೆ ವಾಯುವೇಗ ದಿಂದ ಓಡಾಡುತ್ತಿರುವ ಝುಗಝುಗಿಸುವ ಕಾರುಗಳು, ಎಲ್ಲವೂ ಅವರ ಮನಸ್ಸಿನ ಮೇಲೆ ಏನೋ ಒಂದು ಬಗೆಯ ಭವ್ಯಕಲ್ಪನೆಯನ್ನು ಮೂಡಿಸಿದವು. ಜೀವನವು 'Accident' ಎಂದರೂ ಅದರಲ್ಲೊಂದು ಕೌತುಕವಿದೆ. 'Life is after all interesting' (ಅಂತೂ ಜೀವನವು ಮೋಜಿನದಾಗಿದೆ.) ಎಂದು ಯಾರೋ ಹೇಳಿದಂತೆ ಆ ಮಾತಿನ ಕಲ್ಪನೆ ರಾಮನಾಥನಿಗೆನಿಸತೊಡಗಿತು. ಚರ್ನಿ-ರೋಡ ಗಾರ್ಡನ್ನಿನಲ್ಲಿ ಎಷ್ಟೆಷ್ಟೋ ಮಾತುಕತೆಯಾಡಿ ತಮ್ಮ ಭವಿಷ್ಯ ಜೀವನವನ್ನು ಹೇಗೆ ರೂಪಿಸಬೇಕೆಂಬುದನ್ನೂ ಚಿತ್ರಿಸಿಕೊಂಡರು !

ದಿನಕ್ಕೊಂದು ಸ್ಥಳ. ದಿನಕ್ಕೊಂದು ವಿಚಾರ. ದಿನಕ್ಕೊಂದಿಷ್ಟು ಸಾಮಿಪ್ಯ. ಯಾವೊ ಎರಡು ಮುಖಗಳು ಸಮ್ಮುಖವಾಗಿ ಇಷ್ಟು ಸಮೀಪವಾಗುತ್ತಿರುವುದು ಕೇವಲ ಒಂದು 'Accident' ಅಲ್ಲ, ಈಶಸಂಕಲ್ಪ ಎಂದು ರಾಮನಾಥನಿಗೆನಿಸತೊಡಗಿತು. ಹೀಗೇ ಎಷ್ಟು ಸಲ, ಎಷ್ಟು ಸ್ಥಳಗಳಲ್ಲಿ ಅರಿತಲ್ಲದಿದ್ದರೂ ಬೆರೆತು ಮಾತನಾಡಿದರೊ ಎಣಿಕೆಯಿಲ್ಲ.

'ಹಾಗಾದರೆ ನಾಳೆ ರಜಿಸ್ಟ್ರಾರ ಕಚೇರಿಯಲ್ಲಿ ಕೂಡೋಣವೆ ?'

'ಹಾ! ಕೋರ್ಟಿನಲ್ಲಲ್ಲ ಮತ್ತೆ!' ತರುಣಿ ನಕ್ಕಳು.

'ಟಾ—ಟಾ'....ಎಂದು ಕೆಂಪು ಕರವಸ್ತ್ರದಿಂದ 'Signal' ಕೊಟ್ಟಳು. ಮರುದಿನವೇ ಇಬ್ಬರದೂ ರಜಿಸ್ಟರ ವಿವಾಹವಾಯಿತು. ಅವರಿಬ್ಬರನ್ನೂ ಒಂದುಗೂಡಿಸಿದುದು ಅಂದಿನ ಅವಳ ಅಂಗಾಂಗಸಾಮೀಪ್ಯ,ಅವನ ಮನಸ್ಸಿನ ಅವಸ್ಥೆ. ಅಂತೂ ಇಬ್ಬರೂ ಬೆರೆತರು. ಅರಿತರೆಷ್ಟೊ ಅವರಿಗೇ ಗೊತ್ತಿರಲಿಲ್ಲ.

ಆ ತರುಣಿಯೇ ವಿದ್ಯಾ.

೦ ೦ ೦ ೦

ಕಿರುಕುಳ ರಜೆ ಮುಗಿದುಹೋದರೂ ವಿದ್ಯಾ ಇನ್ನೂ ಮುಂಬಯಿಗೆ ಬರಲಿಲ್ಲ. ರಾಮನಾಥನಿಗೆ ಏಕಾಂತವಾಸ ಬೇಸರವಾಗಹತ್ತಿತ್ತು. ಹೊತ್ತು ಹೊತ್ತಿಗೆ ಊಟವಿಲ್ಲ, ಉಡಿಗೆಯಿಲ್ಲ. ಒಂದು ದಿನ ಬರಿ ಹಣ್ಣು-ಹಂಪಲಗಳ ಮೇಲೆ ಹೊಟ್ಟೆಗೆ ಭರತಿ ಆಗಬೇಕು. ಮತ್ತೊಂದು ದಿನ ಬರಿ ಆಮ್ಲೆಟ್ ಮೇಲೇ ಸಾಗಬೇಕು. ಒಮ್ಮೊಮ್ಮೆ ರಾತ್ರಿ ಪೇಟೆಯಿಂದ ಹಲ್ವಾ-ಘಾಟೆ ಇಂಥವೇನಾದರೂ ಕಟ್ಟಿಕೊಂಡು ಬಂದು ತಿಂದು ಮಲಗಬೇಕು. ರಾತ್ರಿ ಮನೆಗೆ ಬರುವಾಗ ಬದಿಯ ಮನೆಯ ಸಹಸ್ರಬುದ್ಧೆ ಅವರ ಅಡುಗೆಮನೆಯಲ್ಲಿ ಒಲೆಯ ಕಟ್ಟೆಯ ಕೆಳಗೆ ದುಂಡುಪಂಜ್ತಿಯಲ್ಲಿ ಗಂಡ-ಹೆಂಡತಿ-ಮಕ್ಕಳು ನಡುವೆ ಅಡಿಗೆಯನ್ನು ಹರಹಿಕೊಂಡು ವಿನೋದದಿಂದ ಚೇಷ್ಟೆ ಮಾಡುತ್ತ ಜೀವನದ ಸುಖವನ್ನೇ ಸವಿ ಮಾಡಿಕೊಂಡು ಊಟ ಮಾಡುತ್ತಿರುವಂತೆ ತೋರುತ್ತಿತ್ತು. ಕನ್ನಡಿಯಂತಹ ಕಲ್ನೆಲದ ಮೇಲೆ ಊಟಕ್ಕೆ ಮಣೆಗಳು ಸಹ ಬೇಕಾಗದೆ ಸಹಸ್ರಬುದ್ಧೆಕಾಕಾ ಅವರು ಕಾಲು ಚಾಚಿಕೊಂಡು ಊಟಕ್ಕೆ ಕುಳಿತಿರಬೇಕು. ಅವರೊಂದಿಗೆ ರಾಮನಾಥನು ಸಾಕಷ್ಟು

ಕಾಲ ಕೂಡಿ ವಾಸವಾಗಿದ್ದರೂ ಇಬ್ಬರೂ ಒಬ್ಬರಿಗೊಬ್ಬರು ಮುಖಪರಿಚಯ ಕೂಡ ಇಲ್ಲದ ಹಾಗೆ ಇರುತ್ತಿದ್ದರು. ಇದು ಯಾರದೆ ಉದಾಸೀನತೆ ಇಲ್ಲವೆ ಅಹಂಕಾರ ಇಲ್ಲವೆ ಅಪ್ರೇಮಭಾವವೆಂದು ಹೇಳಲಿಕ್ಕಾಗದಿದ್ದರೂ ಅಲ್ಲಿಯ ಜೀವನದ ರೀತಿಯೇ ಅವರನ್ನು ಈ ರೀತಿ ಮಾಡಿತ್ತೆಂದು ಹೇಳಬಹುದು. ಒಬ್ಬರ ಅಡುಗೆಮನೆಯ ಗ್ಯಾಲರಿಯಲ್ಲಿ ನಿಂತರೆ ಇನ್ನೊಬ್ಬರ ಅಡುಗೆ-ಮನೆ ನಡು-ಮನೆಯೊಳಗಿನ ವ್ಯವಹಾರವೆಲ್ಲ ಬಯಲಾಟದಂತೆ ಬಹಿರಂಗವಾಗಿ ನಡೆಯುತ್ತಿದ್ದರೂ ಒಬ್ಬರ ಗೊಡವೆ, ಆಸಕ್ತಿ, ಕುತೂಹಲ ಇನ್ನೊಬ್ಬರಿಗಿಲ್ಲ ದಷ್ಟು ಸ್ವಗತ ರೀತಿಯಲ್ಲಿ ಯಾಂತ್ರಿಕವಾಗಿರುತ್ತಿದ್ದರು. ಎಷ್ಟೋ ಸಲ ರಾಮನಾಥನು ಸ್ನಾನ ಮಾಡಿಕೊಂಡು ಗ್ಯಾಲರಿಯ ಹೊರಗೆ ಬಂದಾಗ ಎದುರಿನ ಮನೆಯ ಗೃಹಿಣಿಯರು, ತರುಣಿಯರು ಇವನನ್ನು ನೋಡಿಯೂ ನೋಡದಷ್ಟು ಅಲಕ್ಷ್ಯದಿಂದ ಹೆಳಲು, 'ಮೇಕಪ್ಪು', ಪ್ರಸಾಧನಗಳನ್ನೆಲ್ಲಾ ನಡೆಯಿಸುತ್ತಿದ್ದರು. ಒಂದೊಂದು ಸಲ ಅವರು ಮೈ ಕಾಣುವಂತೆ ಮಾಡು ತ್ತಿರುವ ಈ ಮೇಕಪ್ಪುಗಳೆಲ್ಲಾ ಮತ್ತೊಬ್ಬರನ್ನು ಮರುಳು ಮಾಡುವುದಕ್ಕಾ ಗಿಯೊ ಇಲ್ಲವೆ ಇನ್ನೊಬ್ಬರ ಗೊಡವೆಯಿಲ್ಲದೆ, ದರಕಾರು ಇಲ್ಲದೆ ತನ್ನೊಳಗೆ ತಾವು ಮಗ್ನರಾಗುವ ರೀತಿಯೊ ಅವನಿಗೆ ತಿಳಿಯುತ್ತಿರಲಿಲ್ಲ.

'ಛಬಿ' ಸಹಸ್ರಬುದ್ಧೆಯವರ ಹಿರಿಯ ಮಗಳು. ಅವಳದು ಬಹಳ ಗಳಬಿಳಿಸ್ವಭಾವ. ಯಾರಾದರೂ 'ವಡೀಲ ಆಹೆತ ಕಾಯ?' (ತಂದೆಯ ವರಿದ್ದಾರೇನು?) ಎಂದು ಕೇಳುತ್ತ ಬಂದಾಗ ಅವರಾರು, ಅವರ ಹೆಸರೇನು, ಗೋತ್ರವೇನು, ಯಾತಕ್ಕೆ ಬಂದದ್ದು, ಏನೆಂದು ತಿಳಿಸ ಬೇಕು, ಮತ್ತೆ ಯಾವಾಗ ಬರುವರು ಎಂದೆಲ್ಲಾ ರಾಮಾಯಣ ಕೇಳಿ, ಹೇಳಿ ಕೊನೆಗೆ ಕಾಗದ ಪೆನ್ಸಿಲ್ ಕೊಟ್ಟು ಅವರಿಂದ ಬಂದ ಉದ್ದೇಶವನ್ನು ಬರೆಯಿಸಿಕೊಂಡು ಇಡುತ್ತಿದ್ದಳು. ಅವರೊಡನೆ ಇಷ್ಟೆಲ್ಲಾ ಪ್ರಶ್ನೋತ್ತರಗಳು ನಡೆದಾಗ ತಾನು ಸುಮ್ಮಸುಮ್ಮನೆ ಮೊಂಡಾದ ಹೆಳಲನ್ನು ಮತ್ತೆ ಹೆಣೆದುಕೊಳ್ಳುವದು, ಹೆಣೆದುಕೊಂಡ ಹೆಳಲನ್ನು ಭುಜದ ಮೇಲಿಂದ ಎದೆಯ ಮೇಲೆ ನೀಳಾಗಿ ಬಿಡುವುದು, ಮತ್ತೊಮ್ಮೆ ಗಕ್ಕನೆ ಎಡಕ್ಕೆ ಕತ್ತು ಹೊರಳಿಸಿ ಹೆಳಲನ್ನು ಹಿಂದೆಮಾಡಿಕೊಳ್ಳುವುದು. ಇದೂ ಆದ ಮೇಲೆ ಸುಮ್ಮಸುಮ್ಮನೆ ಸೆರಗು ಸರಿಪಡಿಸಿಕೊಳ್ಳಹೋಗಿ ಇನ್ನಷ್ಟು ಶಿಥಿಲ

ಮಾಡಿಕೊಳ್ಳುವುದು. ಛಬಿ ಸಹಸ್ರಬುದ್ಧೆಯವರ ಮನೆಯ ಒಂದು ವಿದ್ಯುಲ್ಲತೆ ಯಾಗಿದ್ದಳು. ನೀಳವಾದ ದೇಹ, ನೀಳವಾದ ಮೂಗು, ಚೂಪಾದ ಸಾಲಾದ ಹಲ್ಲುಗಳು, ಸ್ವಲ್ಪ ಹಸಿರುಛಾಯೆಯ ಮೇಲೆ ಕಣ್ಣಿನ ಆಲೆಗಳು. ದೇಹ ನೀಳವಾದರೂ ತುಂಬಿಕೊಂಡ ವ್ಯಕ್ತಿ. ಛಬಿ ಕಾಲೇಜಿನಲ್ಲಿ ಓದುತ್ತಿದ್ದಳು. ಮನೆಯಲ್ಲಿ ಹೆಚ್ಚು ವೇಳೆ ಅಭ್ಯಾಸದಲ್ಲೂ ಹೋಗುತ್ತಿರಲಿಲ್ಲ, ಅಡಗೆ-ಮನೆ ಯಲ್ಲೂ ಹೋಗುತ್ತಿರಲಿಲ್ಲ—ವಿಶೇಷವಾಗಿ ಮೇಕಪ್ಪಿನಲ್ಲಿ, ರೇಡಿಯೊ ಹಚ್ಚು ವುದರಲ್ಲಿ. ಸಿನೇಮಾ ಸಂಗೀತವೆಂದರೆತೀರಿತು, ಛಬಿಗೆ ಮಿತಿಮೀರಿದ ಹುಚ್ಚು. ಹಗಲು ಹನ್ನೆರಡು ತಾಸೂ ಸಿನೇಮಾ ಸಂಗೀತವೆ ಅವಳ ಬಾಯಲ್ಲಿ. ಬಾಯಿ ಬಂದ್ ಇದ್ದಾಗ ರೇಡಿಯೊ ಕೇಳುವುದರಲ್ಲಿ ಕಿವಿ ಕೆಲಸ ಮಾಡುತ್ತಿತ್ತು, ಅಷ್ಟೆ. ಛಬಿಗೆ ಇಪ್ಪತ್ತೊಂದು, ಇಪ್ಪತ್ತೆರಡು ವಯಸ್ಸಾಗಿರಬೇಕು. ಒಂದೆರಡು ವರುಷ ಇಂಟರ ಯಾತ್ರೆ ಆದುದರಿಂದ ಈ ಸಲ ಜ್ಯೂನಿಯರ ಬಿ.ಎ.ದಲ್ಲಿ ಓದುತ್ತಿದ್ದಳು. ಅದೇ ಹೊಸತಾಗಿ 'ಇಂಪೀರಿಯಲ್' ಥಿಯೆಟರಿನಲ್ಲಿ 'ರತನ್' ಚಿತ್ರ ಬಂದಿತ್ತು. ಪ್ರತಿಯೊಂದು ರವಿವಾರದ 'ಮ್ಯಾಟನಿ'ಗೂ ಛಬಿಯ ಹಾಜರಿ ಇದ್ದದ್ದೆ. ಸಿನೇಮಾ ಮುಗಿಸಿ ಬಂದೊಡನೆಯೆ 'ಅಖಿಯ ಮಿಲಾಕೆ..........ಚಲೆ ನಹಿ ಜಾನಾ' ಎಂಬ ಸಂಗೀತ ಸುರುವು. ಬ್ರೆಕ್ ಎಂಬುದೇ ಇಲ್ಲ. ರಾಮನಾಥನಿಗೆ ಕೇಳಿ ಕೇಳಿ ಈ ಗೀತ ಮುಖಗತವಾಗಿ ಹೋಗಿತ್ತು.

ಛಬಿಯ ಈ ಸಿನೇಮಾ ಆಸಕ್ತಿಗೆ ಹೆಚ್ಚು ಪುಟ ಸಿಗುವುದಕ್ಕೆ ಸಹಸ್ರ ಬುದ್ಧೆಯವರು ಜಿ. ಆಯ್. ಪಿ.ದಾದರಿನಲ್ಲಿ ಒಂದು 'ಫಿಲ್ಮ ಡಿಸ್ಟ್ರಿಬ್ಯೂಟಿಂಗ್' ಕಚೇರಿಯಲ್ಲಿ ಕೆಲಸ ಮಾಡುತ್ತಿದ್ದುದೂ ಕಾರಣವಾಗಿತ್ತು. ಅವರ ಮುಖಾಂತರ ಛಬಿಗೆ ಕೆಲವು ಥಿಯೇಟರಗಳ ಸ್ಟುಡಿಯೋಗಳ ಪರಿಚಯವೂ ಆಗಿತ್ತು. ಯಾವಾಗಲಾದರೊಮ್ಮೆ, ಏಕೆ ಹೆಚ್ಚಾಗಿ, 'ಬೆನಿಫಿಟ್'ಶೋನೇ ಆಗುತ್ತಿತ್ತು ಛಬಿಗೆ. ತಮ್ಮ ಕಚೇರಿ ಕೆಲಸದ ಅವ್ಯವಸ್ಥಿತ ವೇಳೆಯ ಮೂಲಕ ಸಹಸ್ರ ಬುದ್ಧೆಯವರು ಯಾವಾಗ ಮನೆಗೆ ಬರುತ್ತಿದ್ದರೊ ಯಾವಾಗ ಹೋಗು ತ್ತಿದ್ದರೊ ಇದೇ ತಿಳಿಯುತ್ತಿರಲಿಲ್ಲ.

ರಾಮನಾಥ ಶನಿವಾರಕ್ಕೊಮ್ಮೆ ಕಚೇರಿ ಮುಗಿಯುತ್ತಲೆ ಮಧ್ಯಾನ್ಹ ಎರಡು ಗಂಟೆಯೊಳಗಾಗಿ ಮನೆಗೆ ಬಂದುಬಿಡುತ್ತಿದ್ದ. ಮನೆಗೆ ಬಂದ

ಮೇಲೆ ಮತ್ತೊಂದು ಕಪ್ಪು ಸಕ್ಕರೆಯ ಚಹ ಕುಡಿಯಬೇಕೆಂದರೆ ಅವನಿಗೆ ಸಿಗುತ್ತಿದ್ದಿಲ್ಲ. ಏಕೆಂದರೆ ಹಾಲೇ ಉಳಿಯುತ್ತಿರಲಿಲ್ಲ. ನಸುಕಿನಲ್ಲಿ ಬಂದು ಹೋದ ದೂದಭಯ್ಯಾ ಮತ್ತೆ ಮಧ್ಯಾಹ್ನ ಒಂದು ಗಂಟೆಯೊಳಗಾಗಿ ಹಾಲು ಕೊಟ್ಟುಬಿಟ್ಟು ಹೋಗಿರುತ್ತಿದ್ದನು. ವಿದ್ಯಾ ಪುಣೆಗೆ ಹೋದಾಗಿನಿಂದ ರಾಮ ನಾಥ ಮಧ್ಯಾಹ್ನದಲ್ಲಿ ಹಾಲು ತೆಗೆದುಕೊಳ್ಳುವದನ್ನೆ ಬಿಟ್ಟುಬಿಟ್ಟಿದ್ದನು. ಒಕ್ಕಲಗಿತ್ತಿಯೂ ಮನೆಯ ಕಡೆಗೆ ಬರುತ್ತಿರಲಿಲ್ಲ. ಆದರೆ ಶನಿವಾರಕ್ಕೊಮ್ಮೆ ಮಧ್ಯಾಹ್ನ ಹಾಲೇ ಇರುತ್ತಿರಲಿಲ್ಲ. ಬೆಳಗಿನ ಹಾಲಿನಲ್ಲೇ ಉಳಿಸಿ, ಕಾಯಿಸಿಟ್ಟು ಹೋಗಬೇಕೆಂದರೆ ಅಷ್ಟೊಂದು ಜಾಗರೂಕತೆಯಿಂದ ನೋಡಿಕೊಳ್ಳುವುದು ಸಾಧ್ಯವಾಗುತ್ತಿರಲಿಲ್ಲ. ಹಾಗೆ ಉಳಿಸಿಟ್ಟು ಹೋದಾಗ ಹಾಲು ಕೆಟ್ಟು ಹೋಗಿರುತ್ತಿರುವ ಸಂಭವವೂ ಹೆಚ್ಚಾಗಿರುತ್ತಿತ್ತು.

ಇಂದಿನಿಂದ ಮಾತ್ರ ರಾಮನಾಥನು ಶನಿವಾರಕ್ಕೊಮ್ಮೆ ಮಧ್ಯಾಹ್ನ ಹಾಲು ತೆಗೆದುಕೊಳ್ಳುವ ವ್ಯವಸ್ಥೆ ಏನಾದರೂ ಮಾಡಬೇಕೆಂದೆಣಿಸಿದ. ಬೆಳಿಗ್ಗೆ ಕಚೇರಿಗೆ ಹೋಗುವ ಹೊತ್ತಿಗೆ ಇದೇ ಮೊದಲನೆಯ ಸಲ ಸಹಸ್ರಬುದ್ಧೆಯವರ ಮನೆಯಲ್ಲಿ ಹಾಲಿನ ಪಾತ್ರೆ ಕೊಟ್ಟು ಹೋಗಬೇಕೆಂದು ಮನಸ್ಸು ಮಾಡಿದ. ಸ್ನಾನ ಮುಗಿಸಿ, ಡ್ರೆಸ್ ಮಾಡಿಕೊಂಡು, ಬಾಗಿಲು ಕೀಲಿ ಹಾಕಿ, ಕೈಯೊಳಗೆ ಪಾವುಸೇರಿನ ಸ್ಟೇನಲೆಸ್ ಪಾತ್ರೆ ಹಿಡಿದುಕೊಂಡು, ಸುಮ್ಮನೆ ಹೊರಗೆ ನಿಂತ. ಎದುರಿಗಿನ ಬಾಗಿಲು ತೆರೆಯಲಿಲ್ಲ. ಸ್ವಲ್ಪಹೊತ್ತು ಹಾದಿಕಾಯ್ದು ಎದುರಿಗಿನ ಬೆಲ್ ಬಾರಿಸಿದ. ಎಲ್ಲಿಂದಲೊ 'ಕೋಣ ಆಹೆಽಽಽ' (ಯಾರವರು?) ಎಂದು ಧ್ವನಿ ಬಂತು. 'ಮೀ ಆಹೆ' (ನಾನು) ಎಂದು ಸ್ವಗತಪಾತ್ರದಂತೆ ಗುಣು ಗುಟ್ಟಿದ. 'ಕೋಣ್' (ಯಾರು) ಎಂದು ಧ್ವನಿ ಸಮೀಪ ಬಂತು. ತಲೆಬಾಗಿಲಿನ ಮಧ್ಯದಲ್ಲಿದ್ದ ಕಣ್ಣಿನಾಕಾರದ ಜಾಳಿಗೆಯ ಕಿಂಡಿಯಿಂದ ಹಳದಿ ಛಾಯೆಯ ಕಣ್ಣೊಂದೇ ಕಂಡಿತು. 'ಮೀ' (ನಾನು) ಎಂದು ಮತ್ತೆ ಮೆಲ್ಲಗೆ ನುಡಿದ ರಾಮನಾಥ. ಬಾಗಿಲು ತೆರೆಯಿತು. 'ಆಪಣ ಕೋಣ್ ?' (ನೀವಾರು?) ಎಂದು ಎಲ್ಲಿ ಕೇಳುವರೋ ಎಂದುಕೊಂಡಿದ್ದ ರಾಮನಾಥನಿಗೆ 'ಆಪಽಣ ಹೋಯ್! '(ನೀವೇನು!) ಎಂದು ಮುಗುಳ್ನಗೆಯ ಉತ್ತರ ಬಂದುದಕ್ಕೆ ಬಹಳ ಖುಷಿಯೆನಿಸಿತು. ಹಾಲಿನ ಪಾತ್ರೆಯನ್ನು ಮುಂದೆ ಮಾಡಿ ರಾಮ ನಾಥನು, 'ದೂಧವಾಲಾ ಆಲಾ ತಽರ ಪಾವಸೇರ ದೂಧ ಘ್ಯಾಲ ಕಾಯ?'

ಹಾಲಿನವ ಬಂದರೆ [illegible]ಪಾವಸೇರು ತೆಗೆದುಕೊಳ್ಳುವಿರಾ ?) ಎಂದು ಬಹಳ ಸೌಜನ್ಯದಿಂದ ಕೇಳಿದ ರಾಮನಾಥ.

'ಬsರ' (ಆಗಲಿ) ಎಂದವಳೇ ಛಬೆ 'ಆಯೀsss' ಎಂದು ಪಾತ್ರೆಯನ್ನು ತೆಗೆದುಕೊಂಡು ಒಳಗೇ ಹೋದಳು. ಆಮೇಲೆ ಹೊರಗೆ ಬಂದು 'ಬsರ ಹಾ ಘೇತೆ' (ಒಳ್ಳೇದು, ತೊಗೋತೀನಿ ಅಂ.) ಎಂದುತ್ತರಿಸಿದಳು. ರಾಮನಾಥ 'Thanks very much' ಎಂದು ಮೆಟ್ಟಲಿಡೆಗೆ ಸಾಗಿದ. 'No mention please' ಎಂದಳು ಛಬೆ. ರಾಮನಾಥ ಮುಗುಳ್ನಗೆಯಿಂದ ಕೆಳಗಿಳಿದು ಹೋದ.

ದುರ್ದೈವದಿಂದ ಆ ದಿನವೇ ರಾಮನಾಥನಿಗೆ ಕಚೇರಿಯಲ್ಲಿ ವಿಶೇಷ ಕೆಲಸ ಬಿದ್ದು ಸಂಜೆ ಆರುಗಂಟೆಯ 'ಫಾಸ್ಟ' ಗಾಡಿ ಹಿಡಿಯಬೇಕಾಯಿತು.

ಅಂದು ೧೯೪೬ನೆಯ ಸಪ್ಟಂಬರ೧ನೆಯ ತಾರೀಖು ! ಜಿನ್ನಾ ಸಾಹೇಬರ 'ಡಿರೆಕ್ಟ ಆ್ಯಕ್ಶನ್'ದ ಪರಿಣಾಮ. ಫಾಸ್ಟ ಗಾಡಿ ಹಿಡಿಯಬೇಕೆಂದು ಧಾವಿಸಿ ಚರ್ಚಗೇಟಿಗೆ ಬರಬೇಕೆನ್ನುವಷ್ಟರಲ್ಲಿ 'ದಂಗೆ ಆರಂಭವಾಗಿದೆ' 'ಭೆಂಡಿ-ಬಜಾರದಲ್ಲಿ ಮೂರು ಇರಿತಗಳಾದುವು! ' 'ಪ್ರಾರ್ಥನಾ ಸಮಾಜದ ಬಳಿಯಿಂದಲೆ ದಂಗೆಗೆ ಪ್ರಾರಂಭವಾಯಿತು!..' ಎಂದು ಮೊದಲಾಗಿ ಊರ ತುಂಬೆಲ್ಲ, ಗುಲ್ಲು, ಗುಡುಗು, ಗಾಬರಿ ! 'ಕರ್ಫ್ಯೂ' ಸಾರಬಹುದು ಎಂದು ಎಲ್ಲರೂ ಬೇಗ ಬೇಗ ಮನೆಯತ್ತ ಧಾವಿಸುವವರೆ ! ಗಾಡಿಯ ಫುಟ್ ಬೋರ್ಡಮೇಲೆ ಸಹ ನಿಲ್ಲದಷ್ಟು ವಿಪರೀತ ಜನ ! ಜನರು ಗಾಡಿಯಲ್ಲಿ ಮರೀನ್ ಲಾಯಿನ್ಸಿಂದ ಚರ್ಚಗೇಟಿಗೆ ಬಂದು ಸ್ಥಳ ಹಿಡಿದುಕೊಳ್ಳುತ್ತಿದ್ದರು. ಅಂತೂ ರಾಮನಾಥನಿಗೆ ೬.೩೫ಕ್ಕೆ ಎಲ್ಲ ನಿಲ್ದಾಣಗಳಿಗೂ ನಿಲ್ಲುವ ಗಾಡಿಯೊಂದು ಸಿಗಬೇಕಾದರೆ ಸಾಕು ಬೇಕಾಗಿ ಹೋಯಿತು. ರಾಮನಾಥನು ಬೇಸತ್ತು ಸಿಕ್ಕಷ್ಟೆ ಸ್ಥಳದಲ್ಲಿ ಕುತ್ತು ಸುರುಬಡುತ್ತ ಕಬ್ಬಿಣದ ಬಾರು ಹಿಡಿದುಕೊಂಡು ಎದ್ದು ನಿಂತನು. ಗ್ರ್ಯಾಂಟ ರೋಡಿಗಾದರೂ ಸ್ಥಳ ದೊರಕುವದೇನೊ ಎಂದು ಹವಣಿಸುತ್ತಿರುವಾಗ ಎಲ್ಲಿಲ್ಲದ ಹಿಂಡುಜನ ಹುಡುಗೆಯರು ಎಗ್ಗಿಲ್ಲದೆ ಒಳಗೆ ನಗ್ಗಿದರು. 'ಗರಜಕು ಅಕ್ಕಲ್‌ನಹೀ' ಎಂಬಂತೆ. ಪ್ರತಿನಿತ್ಯವೂ ಇದೇ ಹಾಡು ಲೋಕಲ್ ಗಾಡಿಗಳದು. ಇಂತಹ ಪರಿಸ್ಥಿತಿಯಲ್ಲಿ ಹೇಗಾದರೂ ಮಾಡಿ 'ಫಾಜೆಗಟ್ಟಿ' ಮುಟ್ಟಿದರಾಯಿತು ಎಂಬ ತವಕದಲ್ಲಿ ಸ್ತ್ರೀಮರ್ಯಾದೆ, ನಯಭಯಗಳನ್ನು ಪಾಲಿಸುವಷ್ಟು

ತಾಳ್ಮೆ ಎಲ್ಲಿಂದಬರಬೇಕು? ಅದರಲ್ಲೂ ಇಂದಿನ ಕಳವಳದ ಸುದ್ದಿಯು ಎಲ್ಲರನ್ನು ಅಧೀರರನ್ನು ಮಾಡಿಬಿಟ್ಟಿತ್ತು. ಒಳನುಗ್ಗಿದ ಹುಡಿಗೆಯರ ಹಿಂಡು ರಾಮನಾಥ ನನ್ನು ಹಿಪ್ಪೆಮಾಡಿಬಿಟ್ಟುವು. ಅಂಥದರೊಳಗೆ ರಾಮನಾಥ ಸ್ವಲ್ಪ ಎಲ್ಲಿಯಾದರೂ ಆಸರ ಹಿಡಿದುಕೊಂಡು ನಿಲ್ಲಬೇಕೆಂದು ನೋಡುತ್ತಿರುವಷ್ಟರಲ್ಲೆ ಜೋಲಿ ಹೋಗಿ ಒಂದು ಹುಡುಗೆಯ ಮೇಲೆ ಜೀಕ ಹೊಡೆದ ಉಳಿದ ಹುಡಿಗೆಯರೆಲ್ಲ ಖೊಳ್ಳನೆ ನಕ್ಕರು. ಆದರೂ ಯಾರೂ ವಿಶೇಷ ಆಕ್ಷೇಪವೆತ್ತಲಿಲ್ಲ. ಜೋಲಿ ಹೊಡೆದಿದ್ದವಳ ಕ್ಷಮಾಯಾಚನೆ ಮಾಡಬೇಕೆಂದು 'I am very sorry' ಎಂದ. ಅವಳಾರೊ ಮುಖಮುದ್ರೆ ನೋಡುವಷ್ಟು ಸ್ಥಳವಿರಲಿಲ್ಲ. 'No mention please' ಎಂದು ಉತ್ತರ ಬಂತು. ಯಾವುದೋ ಪರಿಚಯದ ಧ್ವನಿ! ಪ್ರಯತ್ನಪಟ್ಟು ಸ್ವಲ್ಪ ಹೊರಗೆ ನುಗ್ಗಿ ಬಂದು ಕುತೂಹಲದಿಂದ ಮುಖ ನೋಡಿದರೆ ಅವಳು ಛಬಿ! 'I am verry sorry' ಎಂದು ಮತ್ತೆ ಹೇಳಿದ. 'ಅಯ್ಯಾ, ಆಪಣ ಹೋಯ್!' (ತಾವೇನು ?) ಎಂದಳಾಕೆ. ಇಬ್ಬರೂ ಸ್ವಲ್ಪಹೊತ್ತು ಮೌನಿಗಳಾದರು. ಛಬಿಯ ಗೆಳತಿ ಕುತೂಹಲ ದಿಂದ ಮೆಲ್ಲಗೆ ಅವಳನ್ನು ಚಿವುಟಿ 'ಯಾರು?' ಎಂದು ಸೋಜಿಗಗೊಂಡು ಕೇಳಿದಳು. ಛಬಿಗೆ ಅತಿಥಿಗಳ ಪರಿಚಯ ಮಾಡಿಕೊಡುವಷ್ಟು ತನಗೇ ಪರಿಚಯವಿರಲಿಲ್ಲ. ಗಾಡಿ ಎಲ್‌ಫಿನ್‌ಸ್ಟನ್‌ರೋಡ ದಾಟಿ ದಾದರ ಸಮೀಪಿಸಿತ್ತು. ಹಿಂದಿನಿಂದ ಇನ್ನೊಂದು ಫಾಸ್ಟ ಗಾಡಿ ಮಿಂಚಿನ ವೇಗ ದಿಂದ ಬಂದು ಇದನ್ನು ಹಿಂದೆ ಹಾಕಿತು. ಹಿಂದೆ ಹಾಕಿ ವಾಡಿಕೆಯ ಪ್ಲ್ಯಾಟಫಾರ್ಮಿಗೆ ಬರದೆ ಮತ್ತೊಂದು ಪ್ಲ್ಯಾಟಫಾರ್ಮಿಗೆ ಹೋಯಿತು 'ಸರಿ, ನಿಮ್ಮನ್ನು ಹೇಗೆ ತಪ್ಪಿಸಿವೆ?' ಎಂದು ಕಣ್ಣು ಚಿವುಟಿ ಸೀಟಿ ಹೊಡೆಯುತ್ತ ನಡೆದ ಗಾಡಿಯ ಬೆನ್ನು ಹತ್ತಿ ಜನರು ಆಚೆಯ ಪ್ಲ್ಯಾಟ್‌ ಫಾರ್ಮಿಗೆ ಓಡತೊಡಗಿದರು. ಇದೇ ಹೊತ್ತಿಗೆ ಬೋರಿವಲಿಯಿಂದ ಚರ್ಚ ಗೇಟಿನ ಫಾಸ್ಟಗಾಡಿಯೊಂದು ವಿರುದ್ಧ ದಿಕ್ಕಿನಿಂದ ಬಂದುಬಿಡಬೇಕೆ? ಜನರು ದಿಗಿಲಾಗಿ ಹುಚ್ಚೆದ್ದು ಆಚೆಗೆ ಈಚೆಗೆ ಹರಿದಾಡಹತ್ತಿದರು. ಸಿಕ್ಕ ಗಾಡಿಯನ್ನು ಕಳೆದುಕೊಳ್ಳಬಾರದೆಂದು ಜನ ಜೀವದ ಪರಿವೆಯಿಲ್ಲದೆ ಧಾವಿ ಸುತ್ತಿದ್ದರು. ಹಾಹಾ ಎನ್ನುವುದರೊಳಗೆ ಒಂದು ಅಪಘಾತ ಸಂಭವಿಸಿಯೇ ಹೋಯಿತು. ಜನಜಾತ್ರೆ ನೆರೆಯಿತು. ಮರುಕ ಹುಟ್ಟಿ ನೆರೆದವರಿಗಿಂತ ಕುತೂಹಲ ಹುಟ್ಟಿ ನೆರೆದವರೆ ಎಲ್ಲಾ ಎಂದೆನ್ನಬೇಕು.

' ಬೋರಿವಿಲಿ ಫಾಸ್ಟಗಾಡಿ ಬರುವಾಗ ಕೊನೆಯ ಪ್ಲ್ಯಾಟಫಾರ್ಮಿನ ಗೇಟನಿಂದ ಕ್ರಾಸ್ ಮಾಡಲಿಕ್ಕೆ ಹೋದನಂತೆ ಪಾಪ ! ' ಎಂದು ಆ ಗುಂಪಿನಿಂದ ಬಂದವರೊಬ್ಬರು ಇಲ್ಲದ ಮರುಕವನ್ನು ತಂದುಕೊಂಡು ಮಾತಾಡ ಹತ್ತಿದರು. ಸರಿ, ಮುಂಬಯಿಯಂತಹ ಮಹಾ ಸಮುದ್ರದಲ್ಲಿ ಎಷ್ಟು ಪ್ರಾಣಿಗಳು ನಿತ್ಯ ಹೀಗೆ ಏಳುತ್ತವೆಯೊ, ಮುಳುಗುತ್ತವೆಯೊ ಅದರ ಗೊಡವೆ ನಮಗೇಕೆ ಎನ್ನುವಂತೆ ಗೇಟಿನ ಬಳಿ ಜನ ಕಿಕ್ಕಿರಿಯುವ ಮೊದಲೆ ತಾವು ಪಾರಾಗಬೇಕೆಂದು ಅಲಿಪ್ತ ಜನರು ಗೇಟಿನತ್ತ ಧಾವಿಸಿದರು. ಇನ್ನು ಕೆಲವರು ಗೇಟಿಗೆ ಜನ ಕಿಕ್ಕಿರಿದಾಗಲೆ ನುಗ್ಗುತ್ತ ಮುನ್ನಡೆಯುವುದೆ ವಿಶೇಷ ಮೋಜೆಂದು ಬಗೆದು ಯಾರನ್ನು ತಡೆಹಾಯಬೇಕೆಂದು ಆಚೆ ಈಚೆ ಹಾದಾಡುವವರನ್ನೆ ಮಿಕಿಮಿಕಿ ನೋಡುತ್ತ ನಿಂತಿದ್ದರು. ಎಂಥ ದುರ್ಘಟನೆ ಸಂಭವಿಸಿದರೇನು, ಅಕ್ಕ ಸತ್ತರೆ ಅಮಾವಾಸ್ಯೆ ನಿಲ್ಲುತ್ತದೆಯೆ ಎನ್ನುವಂತೆ ಹಾದಿಯೊಳಗೆ ಸಿಕ್ಕ ಪ್ರಾಣಿಯನ್ನು ಲೆಕ್ಕಿಸದೆ ಫಾಸ್ಟಗಾಡಿ ಬಿರುಗಾಳಿಯಂತೆ ಮತ್ತೆ ಮುನ್ನೋಟ ಕೊಟ್ಟಿತು.

ಛಬೆ ಇಳಿದ ಡಬ್ಬೆಯಿಂದಲೆ ರಾಮನಾಥನೂ ಇಳಿದ. ಇಬ್ಬರದೂ ಒಂದೇ ಹಾದಿಯೆಂಬ ದೃಷ್ಟಿಯಿಂದ ಛಬೆ ರಾಮನಾಥನನ್ನು ಸ್ವಲ್ಪ ನೋಡಿದಳು. ಆಕೆಯ ಜೊತೆಗೆ ಗೆಳತಿಯರಾರೂ ಇಳಿಯಲಿಲ್ಲವೆಂದು ರಾಮನಾಥನೂ ಆವಳೊಡನೆ ನಡೆಯುವ ಅಪೇಕ್ಷೆ ತೋರಿದ.

" ಅರೇಚ್ಯಾ, ಮೋಠಾಚ್ ಸೀರಿಯಸ್ ಏ್ಯಕ್ಸಿಡೆಂಟ ಝಾಲೇಲಾ ದಿಸ್‌ತೊಯ್" (ಎಲೆ ಇವನ, ದೊಡ್ಡ ಅಪಘಾತ ಆದ ಹಾಗೆ ಕಾಣುತ್ತದೆ!) ಎಂದು ಎಲ್ಲಿಂದಲೊ ಒಂದು ದನಿ ಬಂತು. ಛಬೆ ರಾಮನಾಥನನ್ನು ನೋಡಿದಳು.

" ಫೇಟಲ್ ಕಾಹಿ ನಾಹಿ....... ...." (ಜೀವಕ್ಕೇನೂ ಧಕ್ಕೆ ಇಲ್ಲಲ್ಲ) ಎಲ್ಲಿಂದಲೊ ಇನ್ನೊಂದು ದನಿ ಬಂತು. ಛಬೆ ರಾಮನಾಥನನ್ನು ನೋಡಿದಳು. ಇಬ್ಬರೂ ಗದ್ದಲದತ್ತ ಸಾಗಿದರು.

ಆ ಪ್ರಾಣಿಗೆ ವಿಶೇಷ ಗಾಯವಾಗಿರಲಿಲ್ಲ. ಮೈಮೇಲೆ ಎಚ್ಚರವಿರಲಿಲ್ಲ. ತಲೆಯಿಂದ ರಕ್ತ ಹೊರಬರುತ್ತಿತ್ತು. ಕಾಲ ಬೆರಳುಗಳು ಜಿಬ್ಬೆಯಾಗಿ

ದ್ದುವು. “ ಗಾಡಿ ಬರುಬರುವ ಮುಂದೆ ರೇಲ್‌ಕ್ರಾಸ್ ( ಹಳಿ ದಾಟಲಿಕ್ಕೆ ಮಾಡಲಿಕ್ಕೆ ಹೊದ ಮಾರಾಯಾ ! ” ಮತ್ತೆ ಯಾರೊ ಮಾತಾಡಿದರು.

“ ಯಾರವರು ? ಎಲ್ಲಿಯೊ ನೋಡಿದ ಹಾಗಿದೆ ! ”

‘ ಹೆ ಇಕಡೆ ನಾಯುಗಾಂವ್ ರೋಡಲಾ ಫಿಲ್ಮ ಕಂಪನೀತ.......... ( ಇವರು ಇಲ್ಲೆ ನಾಯುಗಾಂವ ರೋಡದಲ್ಲಿ ಫಿಲ್ಮ ಕಂಪನಿಯಲ್ಲಿ.......... ) ಛಬೆಯ ಎದೆ ಧಸ್ ಎಂದಿತು. ರಾಮುನಾಥನ ಲಕ್ಷ್ಯವಿಲ್ಲದೆ ತಾನೊಬ್ಬಳೆ ಗದ್ದಲದಲ್ಲಿ ಧಾವಿಸಿದಳು. “ ದೇವರೆ! ನನ್ನ ತಂದೆಗೆ ಇನ್ನೇನಾದರೂ ಆಗಿರದಿರಲಿ ! ” ಎಂದು ಒಳಗೊಳಗೆ ಅಸಹಾಯ ಅಂತಃಕರಣವು ಕೂಗುತ್ತಿತ್ತು. ಹತ್ತಿರ ಬಂದಳು. ಮುಖದ ಮೇಲಿನ ಮುಸುಕು ತೆರೆದಳು. “ ಮತ್ ಖೋಲೋ..........” ಪೋರ್ಟರನು ಜಬರು ಮಾಡಿದ. ಛಬೆಗೆ ಅತ್ತ ಲಕ್ಷ್ಯವೇ ಇಲ್ಲ ರಾಮುನಾಥನು ಪೋರ್ಟರನ ಕೂಗಿಗೆ ಸಮೀಪಕ್ಕೆ ಬಂದನು. ಛಬೆ ವ್ಯಕ್ತಿಯ ಮುಖದ ಮುಸುಕು ತೆಗೆಯುವಷ್ಟು ಧೈರ್ಯ ಮಾಡಿ ಬಿಟ್ಟಿದ್ದಳು. ರಾಮುನಾಥನಿಗೂ ಗುರುತು ಸಿಕ್ಕಿತು. ಛಬೆ ಮೈಮರೆತು ಹೋದಳು. ಮುಗಿಲು ಹರಿದು ಬೀಳುವ ಹಾಗೆ ಆಕ್ರೋಶ ಮಾಡಬೇಕೆಂಬಷ್ಟು ಭಾವನಾವೇಶ ಬಂದರೂ ಹೇಗೊ ಸುತ್ತಲಿನ ಸಮೂಹ ನೋಡಿ ಅದರುತ್ತಿರುವ ತುಟಿಗಳನ್ನು ಕಚ್ಚಿಹಿಡಿದು ಮೆಲ್ಲನೆ, ತೀರ ಮೆಲ್ಲನೆ—ತನ್ನ ಕಾಕಾ ತನ್ನ ಕಿವಿಮಾತನ್ನು ಕೇಳಿ ಉತ್ತರಿಸುವನೇನೊ ಎಂಬಂತೆ— ‘ ಕಾಕಾಽಽ ’ ಎಂದು ದುಃಖವನ್ನು ಅತ್ಯಂತ ನಿಗ್ರಹದಿಂದ ತಡೆದು ಮಾತಾಡಿದಳು. ಕಾಕಾ ಉತ್ತರ ಕೊಡಲಿಲ್ಲ. ರಾಮುನಾಥನು ಛಬೆಯ ಕೈಹಿಡಿದು ಬೆನ್ನುತಟ್ಟಿ ತುಂಬಿ ಬಂದ ಅಂತಃಕರಣದಿಂದ ಅವಳ ಸಮಾಧಾನ ಮಾಡ ಹೋಗಿ ತಾನೇ ಒಂದೆರಡು ಹನಿ ಕಂಬನಿ ಸುರಿಸಿದನು. ಛಬೆ ರಾಮುನಾಥನನ್ನು ತನ್ನ ತಾಯಿಯೆಂದು ತಿಳಿದುಕೊಂಡಳೊ ಏನೊ ಅವನನ್ನು ತಬ್ಬಿಕೊಂಡು, ‘ ಕಾಕಾಽಽ ’ ಎಂದು ಮೆಲ್ಲನೆ ಗೋಗರೆದಳು. ಅವಳ ಕಣ್ಣೀರು, ಬಿಸಿಯುಸಿರು ರಾಮುನಾಥನ ಬಟ್ಟೆಗಳಿಂದ ಒಳಗೆ ಇಂಗಿ ಅಂತರಂಗವನ್ನು ಮುಟ್ಟಿದುವು.

ಪಂಚನಾಮೆ ನಡೆಯಿತು. ರಾಮುನಾಥ ಎಲ್ಲಾ ವಿವರಗಳನ್ನು ಹೇಳಿದ. ಹಾಗೇ ಸಹಸ್ರಬುದ್ಧೆಯವರನ್ನು ಕೆ. ಇ. ಎಂ. ಹಾಸ್ಪೆಟಲ್‌ಗೆ ಸಾಗಿಸಿದರು. ಛಬೆ ಹೆಜ್ಜೆ ಹೆಜ್ಜೆಗೆ ರಾಮುನಾಥನನ್ನಗಲದೆ ಇರುತ್ತಿದ್ದಳು.

" ಹೀ ಸ್ಟ್ಯಾಬಿಂಗಚೀ ಕೇಸ ಕೀ ಕಾಯ ? " (ಇದು ಇರಿತದ ಕೇಸು ಗೀಸೇನು ?)

'ಆಜ್ ಕಮಿೂತ್‌ಕಮಿೂ ಏಕ ಢಜನ್‌ತರೀ ಕೇಸಿಸ್ ಆಲ್ಯಾಅಸತೀಲ್.' (ಇಂದು ಏನಿಲ್ಲೆಂದರೂ ಒಂದು ಡಜನ್ ಕೇಸಾದರೂ ಬಂದಿರಬೇಕು.)

ಛಬೆಯ ಎದೆ ಮತ್ತೆ ಹೊಡೆದುಕೊಳ್ಳಹತ್ತಿತು. ರೈಲು-ಆ್ಯಕ್ಸಿಡೆಂಟ ಎಂಬುದು ಪ್ರತ್ಯಕ್ಷ ಗೊತ್ತಿದ್ದರೂ ರಾಮನಾಥನಿಗೆ ಕನಿಕರದಿಂದ ಕೇಳದಳು: 'ಹೀಕಾಹೀ ಸ್ಟ್ಯಾಬಿಂಗ್‌ಚೀ ಕೇಸ ನವ್ಹೆನಾ? (ಇದೇನು ಇರಿತದ ಕೇಸಲ್ಲಲ್ಲs) ರಾಮನಾಥ ಹುಸಿನಗೆ ನಕ್ಕು ಅವಳ ಭುಜದ ಮೇಲೆ ಕೈಯಿಟ್ಟು 'Don't lose your heart' (ಧೈರ್ಯ ಬಿಡಬೇಡಿ) ಎಂದು ಹೇಳಿದ.

ವ್ಯಕ್ತಿಗೆ ಪ್ರಥಮ ಚಿಕಿತ್ಸೆ ಎಲ್ಲಾ ನಡೆಯಿತು. ಮನೆಯವರಿಗೆ ಈ ಸುದ್ದಿಯನ್ನು ಹೇಗೆ ತಿಳಿಸುವುದು, ಎಂಬುದೊಂದು ಪ್ರಶ್ನೆಯಾಗಿತ್ತು ರಾಮನಾಥನಿಗೆ. ಹೊರಗೆ ಕರ್ಫ್ಯೂ ಬೇರೆ.ಏನಾದರೂ ವಾಹನದ ವ್ಯವಸ್ಥೆ ಆಗಬೇಕು.

'Patient is alright. He is to be in the hospital at least for three weeks. You make your other arrangements.' (ಪೇಶಂಟನ ಜೀವಕ್ಕೇನೂ ಅಪಾಯವಿಲ್ಲ.ಕನಿಷ್ಟ ಮೂರು ವಾರ ದವಾಖಾನೆಯಲ್ಲಿಯೆ ಇರಬೇಕಾಗುವುದು. ನೀವು ಇತರ ವ್ಯವಸ್ಥೆ ಮಾಡಿಕೊಳ್ಳಬಹುದು). ಎಂದು ಸ್ಟೆಥೊಸ್ಕೋಪಿನ ಬಿಲ್ಲೆಯನ್ನು ಕೈಗೆ ಬಡೆಯುತ್ತ ಗಂಭೀರವಾಗಿ ಹೇಳಿದರು ಸರ್ಜನ್.

ತಾವಿಬ್ಬರೂ ಕೂಡಿಯೇ ಮನೆಗೆ ಹೋಗಿ ಬರುವುದಾಗಿ ಹೇಳಿ 'hospital van (ದವಾಖಾನೆಯ ಮೋಟರಿ)ಗಾಗಿ ವಿನಂತಿಸಿಕೊಂಡರು. ಸರ್ಜನ್‌ರು ಸಮ್ಮತಿಸಿದರು. ಛಬೆ ರಾಮನಾಥರು ವ್ಹ್ಯಾನ್‌ನಲ್ಲಿ ಹೋಬರು. ರಾಮನಾಥನು ತನ್ನ ಬದಿಗೆ ಕುಳಿತುದನ್ನು ಸ್ವಾಗತಿಸುವ ತಾಳ್ಮೆಯನ್ನು ಛಬೆ ತೋರಿದಳು. ವ್ಹ್ಯಾನನ್ನು 'ವ್ಹಿನ್‌ಸೆಂಟ್'ರೋಡಿಗೆ ಒಮ್ಮೆಲೆತಿರಿಗಿಸಿಕೊಳ್ಳುವಾಗ ರಾಮನಾಥನು ಸ್ವಲ್ಪ ಜೋಲೆ ತಪ್ಪಿ ಛಬೆಯ ಮೇಲೊರಗುತ್ತಿದ್ದವನು ತಾನೇ ನಿಗ್ರಹಿಸಿಕೊಂಡನು.ಆದರೂ ಭುಜಕ್ಕೆ ಭುಜವು ಸಮೀಪವಾಗಿ ಬಂತು. ಛಬೆ ಯಾವುದಕ್ಕೂ ಆಲಕ್ಷ್ಯವಾಗಿಯೆ ಇದ್ದಳು. ಸಮಯ ಸಂದರ್ಭಗಳನ್ನರಿತುಕೊಂಡು ರಾಮನಾಥನು ಇನ್ನಾವುದೆ ಬಗೆಯ ಅಸಹ್ಯ ಕಲ್ಪನೆಯನ್ನು ತಂದು

ಕೊಳ್ಳಲು ಸಾಧ್ಯವಿಲ್ಲದಿದ್ದರೂ ಅವನ ಒಳಗಿನ ಒಳಗಿನ ಮನಸ್ಸಿನಲ್ಲಿ ಏನಾದರೊಂದು ರೋಮಾಂಚಕಲ್ಪನೆ ಸುಳಿದು ಹೋಗಿದ್ದರೆ ಅದು ಅಮಾನುಷವೇನೂ ಅಲ್ಲ. ಮನೆ ಸಮೀಪ ಬಂತು. ಛಬೆ ಕಣ್ಣೊರಸಿಕೊಂಡಳು. ರಾಮನಾಥನು ಛಬೆಯ ಮೈದಡವಿ 'Don't you worry. Everything will be alright 'ಎಂದು ಹೇಳಿದ. ಅವಳ ಬಿಸಿಯುಸಿರು ರಾಮನಾಥನ ಬೆಣ್ಣೆಯಂತಹ ಅಂತಃಕರಣವನ್ನೂ ಕರಗಿಸಿತು.

"Stop here" (ಹಾಂ, ತಡೆ) ಎಂದು ರಾಮನಾಥ ಡ್ರೈವ್ಹರನಿಗೆ ಕೂಗುವಾಗ ಗಾಡಿ ಮನೆಯಿಂದ ಹತ್ತು ಹೆಜ್ಜೆ ದೂರ ಹೋಗಿತ್ತು.

ರಾಮನಾಥ ಓ. ಟಿ. ಯಿಂದ ನಿತ್ಯ ಬೇಗನೆ ಮನೆಗೆ ಮರುಳುತ್ತಿದ್ದ. ಸಾಯಂಕಾಲ ಕೆ. ಇ. ಎಂ. ಹಾಸ್ಪಿಟಲ್‌ಗೆ ಬೆಟ್ಟಿ ಕೊಟ್ಟು ಬರುವುದೊಂದು ವಾಡಿಕೆಯ ದಿನಚರಿಯಾಗಿಬಿಟ್ಟಿತ್ತು.

ಆ ದಿನ ರಾತ್ರಿ ಅವನು ಸಹಸ್ರಬುದ್ಧೆಯವರಿಗಾಗಿ ಅನ್ನ ಕಟ್ಟಿ, ನಿದ್ದೆ ಕಟ್ಟಿ ಅಂತಃಕರಣಪೂರ್ವಕವಾಗಿ ಮಾಡಿದ ಸಹಾಯಕ್ಕಾಗಿ ಛಬೆಯ ತಾಯಿ 'ವೈನಿ' ಅತ್ಯಂತ ಕೃತಜ್ಞತೆ ತೋರಿದರು; ರಾಮನಾಥನು ನೆರೆಯವನಲ್ಲ ಮನೆಯವನೆಂದೇ ಕಾಣತೊಡಗಿದರು.

ಮೂರು ನಾಲ್ಕು ದಿನಗಳಲ್ಲಿ ಸಹಸ್ರಬುದ್ಧೆಯವರು ಗುಣಮುಖರಾಗುತ್ತ ಬಂದರು. ಹೆಂಡತಿಯ ಮುಂದೆ, ಮಗಳ ಮುಂದೆ ಆಗಾಗ ಅಂದಿನ ತಮ್ಮ ಅನಾಹುತದ ಪ್ರಕರಣವನ್ನು ಕಥೆಮಾಡಿ ಹೇಳುತ್ತಿದ್ದರು. ಛಬೆ, ವೈನಿ ಇಬ್ಬರೂ ರಾಮನಾಥನ ಸಹಾಯ, ಅವನ ಸಹಾನುಭೂತಿ, ಒಳ್ಳೆಯ ಗುಣಗಳನ್ನು ಅವರ ಮುಂದೆ ಕೊಂಡಾಡಿದಾಗ ಸಹಸ್ರಬುದ್ಧೆ ಅವರೂ ರಾಮನಾಥನ ಬಗ್ಗೆ ಒಳ್ಳೇ ಅಭಿಪ್ರಾಯ ತಾಳಿ ಪ್ರೀತಿಯಿಂದ ಕಾಣುತ್ತ ಬಂದರು.

ವಿದ್ಯಾ ಏಳು ದಿನ ರಜೆ ತೆಗೆದುಕೊಂಡು ಹೋದವಳು ಇನ್ನೂ ಮುಂಬಯಿಗೆ ಮರಳಲಿಲ್ಲ. ರಾಮನಾಥನಿಗೆ ಇದರ ಕಾರಣವೇ ತಿಳಿಯಲಿಲ್ಲ. ಪುಣೆಯವರೆಗಾದರೂ ಹೋಗಿ ಬರಬಹುದಿತ್ತು; ಹೋಗಿಬರಬೇಕೆಂದೂ ಎನಿಸುತ್ತಿತ್ತು. ಆದರೆ ಮತ್ತೊಂದು ಕ್ಷಣಕ್ಕೆ, ಹೋಗಬಾರದೆಂದೂ ಎನಿಸಿಬಿಡುತ್ತಿತ್ತು.

ಛಬಿಯನ್ನು ದವಾಖಾನೆಯಿಂದ ಮನೆಗೆ ಕಳಿಸುವ ಪಾಳಿ ಅನೇಕ ಸಲ ರಾಮನಾಥನ ಪಾಲಿಗೇ ಬರುತ್ತಿತ್ತು. ರಾಮನಾಥನೂ ಅಲ್ಲಗಳೆಯುತ್ತಿರಲಿಲ್ಲ. ಅವನೂ ಒಬ್ಬ ತಮ್ಮ ಮಗನೆಂದು ಒಮ್ಮೆ ವಿಶ್ವಾಸದಿಂದ ಕಾಣುತ್ತ ಬಂದ ಸಹಸ್ರಬುದ್ಧೆ ದಂಪತಿಗಳಿಗೆ ರಾಮನಾಥನ ಬಗೆಗೆ ಅನ್ಯಥಾ ಭಾವಿಸುವುದು ಒಂದು ನರಕ ಕಲ್ಪನೆಯೆನಿಸುತ್ತಿತ್ತು. ರಾಮನಾಥನಿಗೂ ಅವರ ವಿಶ್ವಾಸದ ಬೆಲೆ ತಿಳಿದು, ಅದನ್ನು ಕಾಪಾಡಿಕೊಳ್ಳುವಲ್ಲಿಯೆ ತನ್ನ ಬೆಲೆಯೆಂದು ಭಾವಿಸುತ್ತ ಬಂದ.

ಅಂದು ಶನಿವಾರ. ರಾಮನಾಥ ಬೇಗನೆ ತನ್ನ ಕಚೇರಿ ಮುಗಿಸಿ ಮನೆಗೆ ಬಂದುಬಿಟ್ಟ. ಡ್ರೆಸ್ ಬದಲಿಸಿದವನೆ ಎದುರಿನ ಮನೆಯ ಬಾಗಿಲದ ಬೆಲ್ ಬಾರಿಸಿದ. ಛಬಿ ಒಳಗೆ ತನ್ನೊಳಗೇ " ಪಿಯಾಘರ ಆಜಾ ಆಜಾ " ಎಂಬ ನಕ್ಷತ್ರಗಾನವನ್ನು ಗೋಣಗುತ್ತಿದ್ದಳು. ಬೆಲ್ ಬಾರಿಸಿದ ಸಪ್ಪಳ ಕೇಳಿ ' ಕೋಣ್........' ( ಯಾರು ? ) ಎಂದು ಒಳಗಿನಿಂದಲೇ ಕೂಗಿದಳು. ಬೆಲ್ ಬಾರಿಸುವ ಶೈಲಿಯ ಮೇಲೆಯೇ ಅದಾರೆಂಬುದನ್ನರಿತು— ' ಆಲೇ ಹಾ........' ( ಬಂದೆನಾ........ ) ಎಂದವಳೆ ಲಗಬಗಿಸುತ್ತ ಬಂದು ಬಾಗಿಲ ತೆರೆದು ' ಮೀ ಓಳಖಲ, ಆಪಣಚ್ ಮಣೂನ್ ' ( ನೀವೇ ಇರಬೇಕೆಂದು ಗುರುತಿಸಿದೆ ) ಎಂದು ನಗುತ್ತ ಹೇಳಿದಳು.

" ಆಪಣ ಗಾಣ್ಯಾಚ್ಯಾ ಲಹರೀತ್ ಆಹಾತ್, ತೇವ್ಹಾ ಘರಿ ಕೋಣ ನಾಹಿ ವಾಟತ " ( ನೀವು ಹಾಡುವ ಲಹರಿಯಲ್ಲಿದ್ದೀರಿ ಎಂದ ಮೇಲೆ ಮನೆಯಲ್ಲಿ ಯಾರೂ ಇಲ್ಲವೆಂದು ಕಾಣುತ್ತದೆ ? )

" ವಾ-ವಾ—ವಾ! ಆಮುಚ ಗಾಣ ಇತಕಽ ವಾಯಿಟ್ ಅಸತಕೀ ಕಾಯ ?" ( ವಾ-ವಾ ನಮ್ಮ ಹಾಡೂ ಅಂದರ ಇಷ್ಟು ಕೆಟ್ಟ ಇರತದೇನು ?)

" ತರೀಹಿ ಮೀ ಆಯಿಕಲ The poet sings and world overhears " ( ಅಂದರೂ ಕೇಳಿದೆನಲ್ಲ. ಕವಿ ಹಾಡುತ್ತಾನೆ, ಜಗತ್ತು ಮರೆಯಾಗಿ ಕೇಳುತ್ತದೆ. )

" ಓಹೋ ಹೊ ! But I am not a poet " ( ಆದರೆ ನಾನು ಕವಿ ಅಲ್ಲಲ್ಲ. )

"He is also a poet who feels and sings.( ಅನುಭವಿಸಿ ಹಾಡುವವನೂ ಕವಿಯೆ. )"

" But I am not he" ಛಬಿ ಜೋರಿನಿಂದ ನಕ್ಕಳು.

" ಥಾಂಬಾ ಹಾ, ಏಕ ಕಪ್ ಚಹಾ ಕರೂನ ಆಣತೆ" (ನಿಂದರ್ರಿ ಒಂದು ಕಪ್ ಚಹಾ ಮಾಡಿ ತರತೇನಿ) ಎಂದವಳೆ ಸ್ಟೋಕ್ಕೆ ಕೈಹಾಕಿದಳು.

"ಅಹೋ ಪಣ ಏಕಚ ಕಪ್ ಮ್ಹಣೂನ ಏಕಚ ಪ್ಯಾಲಾ ಹೋಯಿಲ."

ಇಬ್ಬರೂ ದ್ವಂದ್ವಹಾಸ್ಯದಲ್ಲಿ ಮುಳಿಗಿದರು. ಐದೇ ನಿಮಿಷಗಳಲ್ಲಿ ಚಹ ಇಳಿಸಿಟ್ಟವಳೆ, ಬಾಥ್‌ರೂಮ್‌ಗೆ ಹೋಗಿ ಮುಖ ತೊಳೆದುಕೊಂಡು ಬಂದಳು. ಹಣೆಯ ಮೇಲೆ ಸಾಬೂನಿನ ನೊರೆ ಅಂಟಿಕೊಂಡಿತ್ತು. ಮುಖ ಕ್ಕೊಂದು ಕಾಂತಿ ಬಂದಿತ್ತು. 'ನ್ಯಾಪ್-ಕಿನ್'ನಿಂದ ಮುಖ ಒರಿಸಿಕೊಳ್ಳುತ್ತ ಹೊರಬರಲು, ರಾಮನಾಥ " Why, you wanted to sing again?" ( ಏನು, ಮತ್ತೆ ಹಾಡಬೇಕಾಗಿತ್ತೊ ? ) ಎಂದು ನಕ್ಕ.

" No. why," ( ಇಲ್ಲ, ಯಾಕೆ ? )

" You went to the bath-room" (ಬಚ್ಚಲ ಮನೆಗೆ ಹೋದಿರಿ.)

" ತುಮಿ ಫಾರ ವಿಟ ದಿಸ್ತಾ."

" ವಿಟ ಆಹೆ, ಪಣ ವಾಯಿಟ ನಾಹಿ ನಾ ?"

" ತೆ ಮಲಾ ಕಾಯ ಮಾಹೀತ ?" (ಅದು ನನಗೆ ಹೇಗೆ ಗೊತ್ತು?)

"What is your name ಛಬಿ? "( ನಿಮ್ಮ ಹೆಸರೇನು, ಛಬಿ ?) ರಾಮನಾಥ ವಿಷಯಾಂತರ ಮಾಡಬೇಕೆಂದೇನೂ ಪ್ರಶ್ನೆ ಮಾಡದೆ, ಅದು ತಾನಾಗಿಯೆ ವಿಷಯಾಂತರವಾಯಿತು.

' ಅಹೋ ಹೇ ಕಾಯ್? ಛಬಿ ಮಣತಾ, ಆಣಖೀನ್ ನಾವ ವಿಚಾರತಾ' ( ಏನ್ರಿ, ಬಾಯಿಲೆ ಛಬಿ ಅಂತೀರಿ, ಮತ್ತ ಹೆಸರೇನು ಅಂತ ಕೇಳತೀರಲ್ಲ ? )

' No, your christian name. ' ( ನಿಮ್ಮ ಕ್ರಿಶ್ಚಿಯನ್ ಹೆಸರು. )

' No, I am not a christian ' (ನಾ ಕ್ರಿಶ್ಚಿಯನ್ ಅಲ್ಲ.)

ರಾಮನಾಥ ಜೋರಿನಿಂದ ನಕ್ಕು 'ತುಮಿ ಘಾರ ವಿಟಿದಿಸ್ತಾ' ಎಂದು ಸಂದರ್ಭೋಚಿತವಾಗಿ ಉತ್ತರಿಸಿದ.

' ವಿಟಿ ಆಹೆ ಪಣ ವಾಯಿಟ ನಾಹಿ ನಾ ? ' ಎಂದು ಮಾರ್ಮಿಕ ವಾಗಿ ನಕ್ಕಳು ಛಬಿ.

'But what is your name please?' (ಆದರೆ ನಿಮ್ಮ ಹೆಸರೇನು?)

'I will tell you' ( ಹೇಳತೇನಿ ) ಎಂದು ಚಹ ಸೋಸಿ ಎರಡು ಕಪ್ಪಿನಲ್ಲಿ ಹಾಕಿ, ಟ್ರೇದ ಮೇಲಿಟ್ಟುಕೊಂಡು, ಒಂದು ಬಸಿಯೊಳಗೆ ಖಾರಾ ಬಿಸ್ಕಿಟ್ ಹಾಕಿ ಅದೇ ಟ್ರೇದಲ್ಲೇ ಒಂದು ಮಗ್ಗುಲಿಗಿಟ್ಟುಕೊಂಡು ಟೀಪಾಯ್ ಮೇಲಿಟ್ಟು—' ಬಸಾ ' ( ಕೂಡ್ರಿ ) ಎಂದು ರಾಮನಾಥನನ್ನು ಕುಳ್ಳಿರಿಸಿದಳು.

'Tell me what is your name?' ( ಹುಂ, ಹೇಳ್ರಿ, ನಿಮ್ಮ ಹೆಸರೇನು ? )

" ಛಬಿ. "

'No. this is only your pen-name' (ಉಹುಂ. ಇದು ನಿಮ್ಮ ಕಾವ್ಯನಾಮ.)

"I am not a poet please" ಅಹೋ ಪಣ ಆಪಲಂ ನಾವ್ ಕಾಯ್ ? ( ನಾ ಕವಿಯಲ್ಲ ಅಂತ ಹೇಳಲಿಲ್ವೇ. ತಮ್ಮ ಹೆಸರೇನು ? )

" But ಛಬಿ is not a good name. A girl below five is called ಛಬಿ." (ಉಹುಂ. ಛಬಿ ಎಂಬ ಹೆಸರು ಚನ್ನಾಗಿಲ್ಲ. ಐದು ವರ್ಷದ ಕೆಳಗಿನ ಮಕ್ಕಳಿಗೆ ಛಬಿ ಎನ್ನುತ್ತಾರೆ.)

" Yes. I am below five." (ಹೌದು. ನಾನು ಐದು ವರ್ಷದ ಕೆಳಗಿದ್ದೇನೆ.)

' Yes below five into five ' (ಹೌದು, ಐದೈದಲೆ.)

ರಾಮನಾಥ is not a good name. Why not have it only as ' am or Nath ? ' ( ಆದರೆ ರಾಮನಾಥ ಎಂಬ ಹೆಸರು ಚೆನ್ನಾಗಿಲ್ಲ ಬರೇ ರಾಮ್ ಅಥವಾ ನಾಥ ಎಂದೇಕೆ ಇಟ್ಟುಕೊಳ್ಳಬಾರದು?)

'But how can I be a Nath for all?' (ಎಲ್ಲರಿಗೂ ನಾಥನಾಗಿರುವದು ಹೇಗೆ ಸಾಧ್ಯ ?) ಛಬೆ ಮತ್ತೆ ನಗುತ್ತ—' ಆಪಸಣ ಘಾರಚ ವಿಟ ಆಹಾ' ಎಂದಳು. ಹಾಗೆ ಮುಂದರಿಯುತ್ತ 'So you be Nath for your Mrs. and Ram for all.' (ಹಾಗಾದರೆ ನೀವು ನಿಮ್ಮ ಶ್ರೀಮತಿಗೆ ನಾಥನಾಗಿ ಉಳಿದವರಿಗೆ ರಾಮನಾಗಿರಿ.)

'ಮ್ಹಣಜೆ? ಅಮುಚ್ಯಾ ಮಿಸೆಸ್‌ಲಾ, ರಾಮನಾಮಾಚೆ ಪುಣ್ಯ ನಕೋಕಿ ಕಾಯ ?' (ಎಂದರೆ ನಮ್ಮ ಶ್ರೀಮತಿಗೆ ರಾಮನಾಮೋಚ್ಚಾರದ ಪುಣ್ಯ ಬೇಡವೇನು ?)

'ಅಹೋ ತುಮಚಿ ಮಿಸೆಸ್ ಅಜೂನಿ ಕಧಿ ಯೇಣಾರ ?' (ನಿಮ್ಮ ಮನೆಯವರು ಎಂದು ಬರುವವರು ?)

ರಾಮನಾಥನೇಕೊ ಉತ್ತರ ಕೊಡಲು ಉತ್ಸಾಹ ತೋರಿಸಲಿಲ್ಲ. ಸೂಕ್ಷ್ಮದರ್ಶಿಯಾದ ಛಬೆ ಅದನ್ನೋದಿ ಅರಿತುಕೊಂಡು "ಅಹೋ ತುಮಚೀ ಮಿಸೆಸ್ ಆಲ್ಯಾನಂತರ ಮಾಲಾ 'introduce' ಕರೂನ್ ದ್ಯಾನಾ" (ನಿಮ್ಮ ಮನೆಯವರು ಬಂದ ಮೇಲೆ ನನಗೆ ಅವರ ಗುರುತು ಮಾಡಿ ಕೊಡಿರಲ್ಲ.)

'Oh yes. (ಅಗತ್ಯ) ಎಂದು ರಾಮನಾಥನು ಉತ್ತರ ಕೊಟ್ಟರೂ ಅದರಲ್ಲೂ ಉತ್ಸಾಹವಿರಲಿಲ್ಲವೆಂದು ಛಬೆಗೆ ತಿಳಿಯಿತು.

'ಅಹೋ ತುಮಚ್ಯಾ ಮಿಸೆಸ್ ಅತ್ತಾ ಗಾವಾಲಾ ಕಾ ಗೇಲ್ಯಾ ?.... ಕಾಹಿತರಿ ವಿಶೇಷ ?....' (ನಿಮ್ಮ ಮನೆಯವರು ಈಗೇಕೆ ಊರಿಗೆ ಹೋಗಿದ್ದಾರೆ ? ಏನಾದರೂ ವಿಶೇಷ....?) ಮತ್ತೆ ಅನಿಸಿತು ಛಬೆಗೆ ಇದೂ ರಾಮನಾಥನಿಗೆ ಇಷ್ಟವಿಲ್ಲವೆಂದು. ಆದರೂ ಮತ್ತೆ ಅದನ್ನೇ ಸ್ವಲ್ಪ ವಿನೋದ ಮಾಡಿ ರಾಮನಾಥನನ್ನು ಮನರಂಜಿಸುವ ಉದ್ದೇಶದಿಂದ 'ಅಹೋ ತುಮ್ಹೀ ಪಹಿಲೇ ಫೇಡೆ ಕಧಿ ದೇಣಾರ ? ಎಂದಳು. '

'My ಪಹಿಲಾ ಫೆಡಾ is at Dharwar.'

ಛಬೆಗೆ ಏನೂ ಅರ್ಥವಾಗಲಿಲ್ಲ. 'ಮ್ಹಣಜೆ ?' (ಅಂದರೆ ?) ಎಂದು ಕುತೂಹಲದಿಂದ ಪ್ರಶ್ನೆ ಮಾಡಿದಳು.

"ಛಬೆ, this is my second wife...' (ಇದು ನನ್ನ ಎರಡನೆಯ ಸಂಬಂಧ) ಎಂದಿಷ್ಟು ಹೇಳುವದರೊಳಗೆ ರಾಮನಾಥನ ಕಂಠ ಗದ್ಗದಿತವಾಗಿತ್ತು.

' ಬಿಸ್ಕೀಟ ಘ್ಯಾ ನಾ ? ' (ಬಿಸ್ಕೀಟು ತೊಗೊಳ್ರಿಲ್ಲಾ) ಕೈಯಿಂಪೆತ್ತಿ ಕೊಟ್ಟಳು ಛಬೆ. ರಾಮನಾಥ ಯಂತ್ರವತ್ತಾಗಿ ಬಿಸ್ಕೀಟ ಸ್ವೀಕರಿಸಿದ. ಮತ್ತೆ ಚೇತರಿಸಿಕೊಂಡಂತವನಾಗಿ ಛಬೆಯನ್ನು ನೋಡಿ ಸುಮ್ಮನೆ ಮುಗುಳ್ನಗೆ ನಕ್ಕ.

" ಮ್ಹಣಜೆ, ಅಮುಚೀ ಪಹಿಲೀ ವೈನೀ ಧಾರವಾಡಚೀ " (ನಮ್ಮ ಮೊದಲನೆ ವೈನಿ ಧಾರವಾಡದವರೇನು ? ) ರಾಮನಾಥ ಛಬಿಯ ಕೈ ಹಿಡಿದ. ದುಃಖವುಕ್ಕೇರಿ ಬರಹತ್ತಿತು.ಅವಳ ಕೈ ಗಟ್ಟಿಯಾಗಿ ಹಿಡಿದು ಕಣ್ಣೀರು ಹಾಕುತ್ತ " ಛಬೆ, don't mistake me"(ನನ್ನನ್ನು ತಪ್ಪು ತಿಳಿಯಬೇಡ) ಎಂದು ಮೆಲ್ಲನೆ ನುಡಿದ. ಛಬೆ ಸೆರಗಿನಿಂದ ರಾಮನಾಥನ ಕಣ್ಣೀರು ಒರಸಿದಳು.

" ಛಬೆ, ಮಾಝಾ ರಾಮಾಯಣ ಪುನಃ ಕೆವ್ಹಾ ತರಿ ಸಾಂಗತೊ. ಅತ್ತಾ ಕ್ಷಮಾ ಕರಾ ಹಾ ? " (ನನ್ನ ರಾಮಾಯಣ ಮತ್ತೆ ಯಾವಾಗಲಾದರೂ ಹೇಳುತ್ತೇನೆ ಈಗ ಕ್ಷಮಿಸುವಿರಾ ?) ಛಬೆ ಮತ್ತೊಮ್ಮೆ ಮೆಲ್ಲನೆ ರಾಮನಾಥನ ಕೈಹಿಡಿದು. ' Execuse me. ಅಮ್ಹೀ ಉಗೀಚ ತುಮ್ಹಾಲಾ ತ್ರಾಸ ದೇಲಾ, (ಕ್ಷಮಿಸಿರಿ. ನಿಮಗೆ ಸುಮ್ಮನೆ ತ್ರಾಸಕೊಟ್ಟೆ.) ಎಂದು ಅವನ ಬೆನ್ನ ಮೇಲೆ ಕೈಯಾಡಿಸಿದಳು.

'ತ್ರಾಸ ಕಸಚಾ ! you have done your sisterly duty. ' (ತ್ರಾಸ ಎಲ್ಲಿಯದು. ತಂಗಿಯ ಕರ್ತವ್ಯ ಮಾಡಿದಿರಿ) ಛಬೆಗೆ ಏನೋ ಒಂದು ಅಪಾರ ಸಮಾಧಾನವಾಗಿ, ಎರಡೂ ಕೈಗಳಿಂದ ಗಟ್ಟಿಯಾಗಿ ರಾಮನಾಥನ ಕೈ ಹಿಡಿದು ತಲೆಯ ಮೇಲಿಟ್ಟುಕೊಂಡು, ' Good men like you are very rare !...girls in Bombay have to be very careful before they can give out their heart ' (ನಿಮ್ಮಂಥ ಒಳ್ಳೆ ಗಂಡಸರು ಬಹಳ ವಿರಳ. ಮುಂಬೈಯಲ್ಲಿಯ ಹುಡಿಗೆಯರು ತಮ್ಮ ಗುಟ್ಟು ಕೊಡುವ ಮೊದಲು ಬಹಳ ಜಾಗರೂಕರಾಗಿರಬೇಕಾಗುತ್ತದೆ.)

ಆ ದಿನ ಇಬ್ಬರೇ ಹಾಸ್ಪಿಟಲ್ ವ್ಹ್ಯಾನಿನಲ್ಲಿ ಬರುವಾಗ ಅಂತಹ ಗಂಭೀರ ಸಮಯದಲ್ಲೂ ತನ್ನಲ್ಲಿ ಯಾವುದೋ ಒಂದು ರೋಮಾಂಚ ಕಲ್ಪನೆ ಸುಳಿದುಹೋದುದು ನಿಜವಾಗಿಯೂ ಅಮಾನುಷವೆಂದು ಈಗನಿಸಿತು. ಛಬೆಯ ಕೊನೆಯ ವಾಕ್ಯವು ಚಾಬುಕದ ಏಟಿನಂತೆ ಅವನ ಸರ್ವಾಂಗವನ್ನೂ

ಜಾಗ್ರತಗೊಳಿಸಿತು....' girls in Bombay have to be very careful ............ರಾಮನಾಥ ಕ್ಷಣಹೊತ್ತು ಮೌನ ತಾಳಿದ.....ಹಾಗಾದರೆ ವಿದ್ಯಾ ಎಷ್ಟು ಶೀಘ್ರವಾಗಿ ವಶವಾಗಿಹೋದಳಲ್ಲ ?...........

"What are you thinking about ?" (ಏನು ವಿಚಾರ ಮಾಡುತ್ತಿದ್ದೀರಿ ?)

" ಛಬಿ, yon must learn Kannada you will be my life-long sister"(ನೀನು ಕನ್ನಡ ಕಲಿಯಲೇಬೇಕು. ಅಂದರೆ ನೀನು ನನ್ನ ಆಜೀವ ತಂಗಿಯಾಗುವೆ.) ಛಬಿ ನಕ್ಕಳು. ಆ ನಗೆಯ ಅರ್ಥವೂ ರಾಮನಾಥನಿಗೆ ಆಯಿತು.

' I am a mad man, is it not ? ' (ನಾನು ಹುಚ್ಚ, ಅಲ್ಲವೆ ?)

' Don't say like that. I respect you ಆಪಣ ಮಲಾ ಒಡೀಲ ಬಂಧು ಸಾರಖೆ ಆಹಾತ್. ' (ಹಾಗೆನ್ನಬೇಡಿರಿ. ನಿಮ್ಮ ಬಗ್ಗೆ ನನಗೆ ಆದರ ವಿದೆ. ನೀವು ನನಗೆ ಹಿರಿ ಅಣ್ಣನ ಸಮಾನ.)

ರಾಮನಾಥ ಛಬಿಯ ಕೈಹಿಡಿದು ತನ್ನ ಎರಡೂ ಕೈಗಳಿಂದ ಎದೆಗೆ ಅಮುಚಿಕೊಂಡ.

' Shall we go out for a walk ? ' (ತಿರುಗಾಡಲಿಕ್ಕೆ ಹೋಗೋಣವೆ ? )

' ಪಣ, ಪಹಿಲ್ಯಾಂದಾ ಹಾಸ್ಪಿಟಲ್‌ಲಾ ಜಾವೂ'(ಮೊದಲು ದವಾಖಾನೆಗೆ ಹೋಗೋಣು)

' Oh, yes ! ' (ಆಗಲಿ)

' ತರ, ಮೀ ಲುಗಡೆ ಬದಲತೆ' (ಸೀರಿ ಬದಲಾಯಿಸುತ್ತೆನೆ.) ' ಕ್ಷಣ ಆಲಾ ಭಾಗ್ಯಾಚಾ' ' ಎಂದು ಗುಣುಗುಡುತ್ತ ಒಳಗೆ ಹೋದಳು. ಛಬಿಯ ಸರಳತೆ ರಾಮನಾಥನನ್ನು ಮುಗ್ಧನನ್ನಾಗಿ ಮಾಡಿತು. ಛಬಿ....ಐದು ವರುಷದ ಮಗುವಿನ ಹೆಸರು ....ಹೌದು ಛಬಿಯ ಹೃದಯ ಅಷ್ಟು ಸರಳ, ಅಷ್ಟು ಮುಗ್ಧ, ಅಷ್ಟು ಪವಿತ್ರ !

ಐದು ನಿಮಿಷಗಳಲ್ಲಿ ವೇಷ ಬದಲಿಸಿ, ಟಾಯಲೆಟ್ ಮಾಡಿಕೊಂಡು, ಹಿಮ್ಮಗ್ಗಲಿಗೆ ಬಾಗಿ ನೋಡಿಕೊಳ್ಳುತ್ತ ' ಚಲಾ ' (ನಡೆಯಿರಿ) ಎಂದು ಅದೇ

ಹಾಡು ಗುಣುಗುಡುತ್ತ–The poet sings & the world overhears! ಎಂದು ತನ್ನ ಹಾಡಿಗೆ ತಾನೇ ಚೇಷ್ಟೆ ಮಾಡುತ್ತ ಮುಗುಳ್ನಗೆಯಿಂದ ಮುಂದೆ ಬಂದು ಚಪ್ಪಲಿ ಹಾಕಿಕೊಂಡಳು. ಹೆಜ್ಜೆಹೆಜ್ಜೆಗೂ ಛಬೆಯ ಮುಗ್ಧಸ್ವಭಾವವನ್ನವಲೋಕಿಸುತ್ತ ನಿಂತಿದ್ದ ರಾಮನಾಥ ಛಬೆಯನ್ನು ಆವೇಶದಿಂದ ತಬ್ಬಿಕೊಂಡು ' ಛಬೆ, you are a goddess and your heart is golden' (ಛಬೆ,ನೀನೊಬ್ಬ ದೇವಿ! ನಿನ್ನ ಮನಸ್ಸುಬಂಗಾರದಂತಹದು.) ಎಂದು ನುಡಿದ.

ಅದೇ ಹೊತ್ತಿಗೆ ಹೊರಗೆ ' ಬೆಲ್ ' ಬಾರಿಸಿತು. ರಾಮನಾಥ ಸ್ವಲ್ಪ ಗಾಬರಿಗೊಂಡಂತೆ ಛಬೆಯನ್ನು ನೋಡಿದ. ಛಬೆ ಯಥಾಪ್ರಕಾರವಾಗಿ, ' ಕೋಣ ಆಹೆ? ' (ಯಾರವರು?) ಎಂದು ಒದರಿದಳು. ಸಮೀಪ ಬಂದು ಬಾಗಿಲು ತೆರೆದಳು. ವಿದ್ಯಾ!

ಛಬೆ ಮಾತನಾಡದೆ ರಾಮನಾಥನನ್ನು ನೋಡುತ್ತ ನಿಂತಳು. ರಾಮನಾಥ ಬಾಗಿಲಿಗೆ ಬಂದು ನೋಡಿದ. ವಿದ್ಯಾ ! ಕೈಯೊಳಗೊಂದು ಹ್ಯಾಂಡಬ್ಯಾಗು, ಕಣ್ಣಿಗೆ ಗಾಗಲ್ಸು, ಹೆಗಲಿಗೊಂದು ಮನಿಬ್ಯಾಗು.

' ಕೀ ' ಎಂದು ಕೈಸನ್ನೆಯಿಂದ ಕೇಳಿದಳು ವಿದ್ಯಾ. ರಾಮನಾಥ ಕೀಲಿಯ ಕೈ ಕೊಟ್ಟ. ವಿದ್ಯಾ ತಮ್ಮ ಮನೆಯೊಳಗೆ ಹೋದಳು. ರಾಮನಾಥ ಹೋಗಲಿಲ್ಲ.

' ಕಾಯ ? ಇಥಚ ಬಸಲಾ ? (ಏನು, ಇಲ್ಲೇ ಕೂತಿರಿ ?)

' That's all right ' (ಏನು ಅಡ್ಡಿ ಇಲ್ಲ.)

ಛಬೆಗೆ ಸ್ವಲ್ಪ ಅನುಮಾನವಾಯಿತು. ಗಾಬರಿಯೂ ಆಯಿತು. ' She may misunderstand ' (ಆಕೆ ಏನಾದರೂ ತಪ್ಪು ತಿಳಿಯಬಹುದು ) ಎಂದು ಮೆಲ್ಲನೆ ರಾಮನಾಥನ ಕಿವಿಯಲ್ಲಿ ಉಸುರಿದಳು

' Don't worry ' (ನೀವೇನೂ ಚಿಂತಿಸಬೇಡಿರಿ.) ಎಂದು ಸುಮ್ಮನಾಗಿ ಬಿಟ್ಟ ರಾಮನಾಥ.

' No that's not right ' ಆಪಣ ಘರಿ ಜಾ. ಮಿ ಹಾಸ್ಪಿಟಲ್‌ಲಾ ಜಾತೇ. ಪುನಃ ಭೇಟೂs, (ಹಾಗೆ ಮಾಡುವದು ಸರಿಯಲ್ಲ ಅದು. ನೀವು ಮನೆಗೆ ಹೋಗಿರಿ. ನಾನು ದವಾಖಾನೆಗೆ ಹೋಗುತ್ತೇನೆ. ಮತ್ತೆ ಭೆಟ್ಟಿಯಾಗೋಣ,) ಛಬೆ ರಾಮನಾಥನನ್ನು ಮುಂದಟ್ಟಿಕೊಂಡೇ ಬಾಗಿಲ ಕೀಲಿ

ಹಾಕಿದಳು. ಜಡವಾದ ಕಣ್ಣುಗಳಿಂದ ರಾಮನಾಥ ಛಬಿಯನ್ನು ನೋಡುತ್ತ ನಿಂತ. ಛಬಿಯೂ ಅಂತಃಕರಣಪೂರಿತ ದೃಷ್ಟಿಯಿಂದ ನೋಡುತ್ತ ಒಂದೊಂದೇ ಮಜಲು ಇಳಿದು—ಒಳಗೆ ಹೋಗುವಂತೆ ಅವನಿಗೆ ಸನ್ನೆ ಮಾಡಿ, ಕರವಸ್ತ್ರ ಹಿಡಿದು "Bye, bye" ಎಂದಳು.

ರಾಮನಾಥ ಒಳಗೆ ಬಂದಾಗ ವಿದ್ಯಾ ವೇಷ ಬದಲಾಯಿಸುತ್ತ "ದುನಿಯಾ ಬದಲ್ತೀ ಹೈ" ಎಂಬುದೊಂದು ಗೀತವನ್ನು ಗುಣುಗುತ್ತಿದ್ದ ವಳು—'The poet sings and world overhears' ಎಂದು ನುಡಿದಳು. ಆ ನುಡಿಯ ಕಿಡಿ ರಾಮನಾಥನನ್ನು ತಾಗದೆ ಇರಲಿಲ್ಲ. ಆದರೂ ಉದ್ವೇಗವನ್ನು ತಡೆಹಿಡಿದ.

"ನಾನು ಬಂದು ನಿಮ್ಮ ಮಾರ್ಗದೊಳಗೆ ಅಡ್ಡ ಬಂದಂತಾಯಿ ತೇನೋ....?" ಎಂದು ಮತ್ತೆ ಕೊಂಕು ಮಾತನಾಡಿದಳು ವಿದ್ಯಾ.

"ನಮ್ಮ ಮಾರ್ಗ ರಾಜಮಾರ್ಗ ವಿದ್ಯಾ. ರಾಜಮಾರ್ಗದೊಳಗೆ ಎಷ್ಟು ಎಡೆತಡೆಗಳು ಬಂದರೂ ಮಾರ್ಗ ಸಾಗಲು ಯಾವ ಅಡ್ಡಿಯೂ ಆಗುವುದಿಲ್ಲ,"

"ಸಾಕು ನಿಮ್ಮ ಅಲಂಕಾರಿಕ ಭಾಷೆ."

"Vidya, it is you that owes an explaination" (ಹಂ! ಜವಾಬು ಕೊಡಬೇಕಾದವರು ನೀನು.)

"Explaination? ಇದೇನು ನೀವೇ ನಮ್ಮ ಕಚೇರಿಯ ಬಾ:ಸ್ ಆಗಿ ಬಿಟ್ಟಿರಲ್ಲ ?........ ಇದೇನು ಎರಡು ವಾರದೊಳಗೆ ಇಷ್ಟೊಂದು ಸ್ಥಿತ್ಯಂತರ ವಾಗಿಬಿಟ್ಟದೆ ನಿಮ್ಮಲ್ಲಿ ?"

'ವಿದ್ಯಾ, ಸ್ಥಿತ್ಯಂತರ ಯಾರಲ್ಲಿ ಉಂಟಾಗಿದೆಯೊ ವಿಚಾರ ಮಾಡ ಬೇಕಾದ ವಿಷಯ. ಒಂದು ವಾರದೊಳಗಾಗಿ ಬರುತ್ತೇನೆಂದು ಹೇಳಿ ಹೋದವಳು ಬಾರದೆ 'Courtesy'ಗಾಗಿ (ಶಿಷ್ಟಾಚಾರಕ್ಕಾಗಿ) ಕೂಡ ಕ್ಷಮೆ ತೋರದ ನಿನ್ನಲ್ಲಿ ಸ್ಥಿತ್ಯಂತರವುಂಟಾಗಿದೆಯೋ..........!

'..........ಇನ್ನೊಬ್ಬ ಸಂಗಡಿಗರನ್ನು ಹುಡುಕಿಕೊಂಡ ನಿಮ್ಮಲ್ಲಿ ಉಂಟಾಗಿದೆಯೊ ವಿಚಾರಿಸಬೇಕಾದ ವಿಷಯ.'

‘ ವಿದ್ಯಾ, ಇದೇನು ಕಾಳಿಗದ ಕುದುರೆಯನ್ನೆ ಏರಿ ಬಂದವರ ಹಾಗೆ ಮಾಡುತ್ತಿದ್ದೀಯಲ್ಲ ? ’

‘ ಮನೆಯೊಳಗೆ ಕಾಲಿಡುವ ಮೊದಲೆ ನೀವು ಕಾಳಿಗದ ಕಹಳೆಯನ್ನೆ ಊದಿಬಿಟ್ಟಿದ್ದೀರಲ್ಲ ? ’

‘ ವಿದ್ಯಾ, ಹೆಂಗುಸು ಎಷ್ಟು ಸುಶಿಕ್ಷಿತಳಾದರೇನು ? ಹೆಂಗುಸಿನ ಸ್ವಭಾವ ಅವರನ್ನು ಬಿಡಲಾರದು. ಹೆಂಗುಸಿನ ಮನಸ್ಸೆಂದರೆ ಸಂಶಯ ಪಿಶಾಚಿಯ ತವರುಮನೆ. ಜಾನಕಿ ನಿನ್ನಷ್ಟು ವಿದ್ಯಾವಂತಳಿದ್ದಿಲ್ಲ. ಅವಳಲ್ಲಿದ್ದ ಸಂಶಯಸ್ವಭಾವ ನಿನ್ನಲ್ಲೂ ಇದೆ. ಸಂಶಯದ ಹೊರತಾಗಿ ಅವಳ ಸಂಸ್ಕೃತಿ ಎಂತಹದು, ಅವಳ ಹೃದಯವೆಂತಹದು!.... ನೀನು ಅವಳಿಗಿಂತಲೂ ವಿದ್ಯಾವಂತೆ. ಆದರೆ.... ಆದರೆ....’ ರಾಮನಾಥನಿಗೆ ಮುಂದೆ ಮಾತಾಡುವ ಆಶೆಯಾಗಲಿಲ್ಲ. ವಿದ್ಯಾನೂ ಮಾತನ್ನು ಮುಂದರಿಸುವ ಅಪೇಕ್ಷೆ ತೋರಿಸದೆ ಬಾಥ್‌ರೂಮಿಗೆ ಹೋಗಿ ಹಿಂದಿನಿಂದ ಧಡಕ್ಕನೆ ಬಾಗಿಲು ಹಾಕಿಕೊಂಡಳು. ಆ ಬಾಗಿಲದ ಧಡಕ್ ಎಂಬ ಶಬ್ದದಲ್ಲಿ ಅವಳ ಹೃದಯದ ಉದ್ವೇಗವು ಪ್ರತಿಧ್ವನಿತವಾಗಿತ್ತು. ರಾಮನಾಥ ನಿಶ್ಯಬ್ದವಾಗಿ ಪಾಯಿಜಾಮಿನ ಮೇಲೇ ಕೋಟು ಚಪ್ಪಲಿ ಧರಿಸಿ ಮಾಹೀಮನಿಂದ ಬರುವ ಬಸ್ ಹಿಡಿದು ಪರೇಳ ಕಡೆಗೆ ನಡೆದ. ಕೆ. ಇ. ಎಂ. ಹಾಸ್ಪಿಟಲ್ ಸ್ಟಾಪಿಗೆ ಇಳಿದವನೆ ಅತ್ತ ಧಾವಿಸುವಷ್ಟರಲ್ಲಿ ‘ ರಾಮ್ ! ’ ಎಂದು ದೂರಿಂದ ಯಾರೊ ಕೂಗಿದ ಹಾಗಾಯಿತು. ಹಿಂದೆ ಹೊರಳಿ ನೋಡುವಾಗ ದಾದರ ಟ್ರಾಮಿನಲ್ಲಿ ಛಬೆ! ಟ್ರಾಮ್ ಹಿಡಿಯಬೇಕೆಂದು ಆಚೆಗೆ ಕಂಗೆಟ್ಟು ಓಡುವಷ್ಟರಲ್ಲೇ ಟ್ರಾಮು ಬಿಟ್ಟುಬಿಟ್ಟಿತು. ರಾಮನಾಥನು ಎಲ್ಲಿ ಏನಾದರೂ ಅಪಾಯಮಾಡಿಕೊಳ್ಳುವನೋ ಎಂದು ಅತ್ಯಂತ ಕಾತರಳಾಗಿ ಛಬೆ ಕುಳಿತವಳೆದ್ದು ದಂಡೆಗೆ ಬಂದು ನಿಂತು ಅವನಿಗೆ ತಡೆಯುವಂತೆ ಸನ್ನೆಮಾಡಹತ್ತಿದಳು. ರಾಮನಾಥ ಟ್ರಾಮಿನ ಬಾರು ಹಿಡಿದು ಹತ್ತುವುದರಲ್ಲಿದ್ದ. ಛಬೆ ತಾನೇ ಹೊರನುಗ್ಗಿ ಬಂದು ಕಂಡಕ್ಟರನನ್ನು ಆಸುಗೊಳ್ಳದೆ ಟ್ರಾಮಿನ ಕೆಳಗೆ ಜಿಗಿದುಬಿಟ್ಟಳು. ರಾಮನಾಥ ಅವಳಿಗೆ ಆಧಾರ ಕೊಡ ಹೋಗಿ ತಾನೇ ಜೋಲಿ ಹೊಡೆದನು. ಅವನೊಂದಿಗೆ ಛಬೆಯೂ ಜೋಲಿ ಹೊಡೆದು ಇಬ್ಬರೂ ಕೊಪ್ಪರಿಸಿಕೊಂಡು ಬಿದ್ದುಬಿಟ್ಟರು. ಸುತ್ತಲಿನ ಜನಸಮೂಹ ಇವರನ್ನು ನೋಡಿ ಖೊಳ್ಳನೆ ನಕ್ಕುಬಿಟ್ಟಿತು.

ಯಾರೋ ಒಬ್ಬರು —'ಅಯ್ಯೋ ಪಾಪ, ಪಾತಳವೆಲ್ಲಾ ಮಣ್ಣುಗೂಡಿ ಹೋಯಿತು!' ಎಂದು ಕೂಗಿದರು. ಅದೇ ದನಿಗೂಡಿಸಿ ಇನ್ನೊಬ್ಬರು ಕಿಡಿಗೇಡಿತನದಿಂದ—'ಒಳಗಿನ ಆ ಲಂಗಾನೂ ಮಣ್ಣುಗೂಡಿಹೋಯಿತು.' ಎಂದು ಖಿಕ್ ಖಿಕ್ ನಕ್ಕದ್ದು ಕೇಳಿಸಿತು. ಛಬೆಗೆ ಅಪಮಾನ ಅಸಹ್ಯ-ವಾಯಿತು. ರಾಮನಾಥನು ಬಳಿಯಿರುವಾಗ ಈ ತರಹದ ಅವಹೇಳನೆ ಅವಳಿಗೆ ತೀರ ಅಸಹ್ಯವೆನಿಸಿತು. ಒಳಗೆ ಕೋಪದ ಹೊಗೆ ಹಾಯುತ್ತಿದ್ದರೂ ರಾಮನಾಥನನ್ನು ನೋಡಿ ಮುಖ ಪೆಚ್ಚು ಮಾಡಿ ಹುಸಿನಗೆ ನಗಲೆತ್ನಿಸಿದಳು. ಅವಳ ಅಪಮಾನವೇ ತನ್ನ ಅಪಮಾನವೆಂದು ಬಗೆದ ರಾಮನಾಥನು ಅವಳಿಗಿಂತ ಇಮ್ಮಡಿಯಾಗಿ ಆ ಕಿಡಗೇಡಿಗಳ ಮೇಲೆ ಕಿಡಿಗಾರಿದನು. ತನ್ನ ಕರ-ವಸ್ತ್ರದಿಂದ ಅವಳ ಸೆರಗಿಗೆ ಅಂಟಿದ ಹುಡಿಯನ್ನು ಕೊಡವಿದನು. ಅವನ ಉಪಚಾರವು ಛಬೆಯಲ್ಲಿ ಅಷ್ಟೇ ಉಪಕೃತಭಾವವನ್ನು ಹುಟ್ಟಿಸಿತು. ಕೃತ-ಜ್ಞತೆಯಿಂದ ಮೂಡಿದ ನಗೆಯ ನೋಟದಿಂದ ರಾಮನಾಥನನ್ನು ನೋಡಿದಳು. ಆ ಸ್ಥಳದಿಂದ ಸುರಕ್ಷಿತ ದೂರ ಬಂದುದನ್ನು ನೋಡಿಕೊಂಡು, 'ಕಾಯ್ ವಾಯಿಟ ಲೋಕ!' (ಏನು ಕೆಟ್ಟ ಜನ ಇದು!) ಎಂದು ರಾಮ-ನಾಥನ ಮುಂದೆ ನುಡಿದು ನಕ್ಕುಬಿಟ್ಟಳು.

ರಾಮನಾಥ 'Hopless fellows'(ನಿರ್ಲಜ್ಜರು!)ಎಂದು ಉದ್ಗರಿಸಿದ.

'ಪಣ ನಾಯಿಹೋಏಕತರೀ ಲೆಹೆಂಗ್ಯಾಲಾ ಘಾಣ ಲಾಗಲಿ ಮ್ಹಣಾಲಾ ನಾಹಿ?'(ಒಳಗಿನ ಲಂಗಾ ಕೂಡ ಹೊಲಸಾಯಿತು ಎಂದೆನ್ನಲಿಲ್ಲವೇ ಒಬ್ಬ?)

ರಾಮನಾಥನಿಗೆ ಆ ಮಾತನ್ನು ಮತ್ತೆ ನೆನೆದು ಅವಳನ್ನು ಕೆರಳಿಸುವುದು ಬೇಡವಾಗಿದ್ದರೂ ಅವಳೇ ಆ ಮಾತನ್ನೆತ್ತಿದಾಗ ಅವಳ ಕೋಪ-ವ್ಯಥೆಗಳೆಲ್ಲಾ ಅಡಗಿದುವೆಂದರಿತು ಸಮಾಧಾನಗೊಂಡ.'Why do you rake it again?' (ಅದನ್ನೇಕೆ ಮತ್ತೆ ನೆನಸುತ್ತೀ?) ಎಂದಿಷ್ಟೇ ಕೇಳಿದ.

'ನಾಹಿ, ಪಣ ಕಿತಿ ವಾಯಿಟ ಲೋಕಹೋ? ಕಾಹಿತರಿ ಭಲ್ತಚ ಬೋಲತಾತ' (ಅದಕಲ್ಲ; ಆದರೆ ಎಂಥಾ ಕೆಟ್ಟ ಜನ ಅಂದೆ! ಬಾಯಿಗೆ ಬಂದದ್ದು ಅಂತಾರೆ!) ಆ ಮಾತನ್ನು ಮತ್ತೆ ಮತ್ತೆ ಆಡಿ ತೋರಿಸುವಲ್ಲೇ ಹೆಚ್ಚಿನ ತೃಪ್ತಿಯೇನೊ ಎನ್ನುವಂತೆ ನುಡಿದಳು. 'Were you hurt?' (ನಿನಗೆ ನೋವಾಯಿತೆ?)ಎಂದು ಕೇಳಿದ ರಾಮ

ನಾಥ. ಛಬೆ ಲಕ್ ಹೊಡೆದು 'ಇಲ್ಲ' ಎಂದು ಸೂಚಿಸಿದಳು. ಇನ್ನೊಂದು ಟ್ರಾಮು ಹತ್ತುವ ಧೈರ್ಯವಾಗದೆ ದಾದರ ಸ್ಟ್ಯಾಂಡಿನ ವರೆಗೆ ಹಾಗೇ ನಡೆಯುತ್ತ ಬಂದರು. ಇಬ್ಬರೂ ಎದುರಿಗೇ ಬರುವ ಇರಾಣಿ ಅಂಗಡಿ ಯೊಂದನ್ನು ನೋಡಿ 'ಏಕೇಕ್ ಕಪ್ ಚಹಾ ಘೇವೂ ?' (ಒಂದೊಂದು ಕಪ್ ಚಹಾ ತಗೊಂಬೋಣ.) ಎಂದ ರಾಮನಾಥ. 'ಕಶಾಲಾಹೋ' (ಯಾತಕ್ಕೆ,) ಎಂದು ಇಲ್ಲವೆಂದರೂ ಪೂರ್ಣ ಅಸಮ್ಮತಿಯನ್ನೇನೂ ಸೂಚಿಸಲಿಲ್ಲ ಛಬೆ. 'ನುಸ್ತಾ ಏಕಚ ಕಪ್' (ಒಂದೇ ಕಪ್ ಮಾತ್ರ) ರಾಮನಾಥ ಮತ್ತೆ ಆಗ್ರಹಪಡಿಸಿದ. "ಅಹೋ ಪಣ ಏಕಚ ಕಪ್ ಮ್ಹಣೂನ ಏಕಚ ಪ್ಯಾಲಾ ಹೋಯಿಲ!" ಎಂದು ಛಬೆ ಚೇಷ್ಟೆ ಮಾಡಿದಳು. 'You are really witty' (ನಿನ್ನ ಬುದ್ಧಿ ಬಹಳ ಚುರು ಕಿದೆ ಆಂ! ಎಂದು ರಾಮನಾಥ ಮೆಲ್ಲನೆ ಬೆನ್ನ ಮೇಲೊಂದು ಗುದಿಕೆ ಕೊಟ್ಟ. ಛಬೆ ಅದನ್ನು ಬಹಳ ಪ್ರಸನ್ನತೆಯಿಂದ ಸ್ವೀಕರಿಸುತ್ತ 'ಆಯಿಗ!' ಎಂದು ಮೂಗು ಮುದುರಿಸಿ ನಕ್ಕು ಹಿಂದಿನಿಂದ ಬೆನ್ನು ಮುಟ್ಟುವಂತೆ ಕತ್ತು ಮೇಲ ಕ್ಕೆತ್ತಿದಳು. ನಗುವಾಗ ಅವಳ ಸಾಲಾದ ಹಲ್ಲಿನಿಂದ ಹೊಳಪು ಹೊಮ್ಮಿತು. ನಿಡಿದಾದ ಆದರೂ ಕೊನೆಗೆ ಜಾಡವಾಗಿ ಮೊಟಕಾದ ಹೆಳಲು ಧೊಪ್ಪನೆ ನೆಲಕ್ಕೇ ಬಿದ್ದಿತೇನೊ ಎನ್ನುವಂತೆ ತೋರಿತು. ಕುತೂಹಲದಿಂದ ಅದನ್ನೆ ನಿಟ್ಟಿಸುತ್ತ ರಾಮನಾಥ ಹೋಟಲ್ಲಿನ ಕಟ್ಟೆ ಹತ್ತಿದನು. ಇಬ್ಬರೂ 'ಫ್ಯಾಮಿಲಿ ರೂಮು' ಗೆ ಹೋದರು. 'ಕಾ ತುಮಚ್ಯಾ ಮಿಸೆಸ್‌ಲಾ ಸೋಡೂನ ಆಲಾ?' (ನಿಮ್ಮ ಶ್ರೀಮತಿಯವರನ್ನ ಯಾಕೆ ಬಿಟ್ಟುಬಂದಿರಿ ?) ಛಬೆ ಪ್ರಶ್ನೆ ಮಾಡಿ ದಳು. ರಾಮನಾಥನಿಗೆ ಚಹದೊಳಗೆದ್ದಿದ ಬಿಸ್ಕೀಟನ್ನು ಎತ್ತಿಕೊಳ್ಳಲಾಗದೆ ಅದು ಕರಗಿ ಚಹದ ತಳ ಕಂಡಿತು. ಛಬೆಯ ಪ್ರಶ್ನೆಗೆ ಮಲಗಿ ಎದ್ದವನಂತೆ 'ಆಂ ?' ಎಂದು ಪ್ರಶ್ನೆಮಾಡಿದ. ರಾಮನಾಥನ ಮನಸ್ಸು ಸ್ವಸ್ಥವಿಲ್ಲವೆಂದು ಛಬೆ ಅರಿತುಕೊಂಡು 'ಘರ್‍ಕಾಕಡೆ ಜಾವೂ?' (ಮನೆಯ ಕಡೆಗೆ ಹೋಗೋಣವೆ?') ಎಂದಳು.

'Let us go to Dadar beach.' (ದಾದರ ಬೀಚಿಗೆ ಹೋಗೋಣ) ಇಬ್ಬರೂ ಖುದಾದಾದ್ ಸರ್ಕಲ್‌ನಿಂದ ಫುಟ್‌ಪಾಥಿನ ಮೇಲೆ ನಡೆಯುತ್ತಲೆ ಹೊರಟರು.

'ತುಮ್ಹಿ ಪಾಹಿಲ ಕಾ ?' (ನೀವು ನೋಡಿದಿರೇನು ?) ರಾಮನಾಥ ಒಮ್ಮೆಂದೊಮ್ಮೆಲೆ ಪ್ರಶ್ನೆಮಾಡಿದ.

'ಕಾಯ್ ?' (ಏನು ?)

'ಆಮುಚ್ಯಾ ಹೆಡ್‌ಮಾಸ್ತರನಾ?' (ನಮ್ಮ ಹೆಡ್‌ಮಾಸ್ತರನ್ನ.)

ಛಬಿ ನಸುವೆ ಮುಗುಳ್ನಗೆಯೊಂದನ್ನು ಬೀರಿ, 'ಹೋ, ಪಣ—' (ಹೋ. ಆದರ........)

'ತುಮ್ಹಾಲಾ ತ್ಯಾಂಚೀ ಓಳಖ್‌ಕರೂನ ದ್ಯಾಯಚೀ ಆಹೆನಾ ?' (ಅವರ ಪರಿಚಯ ನಿಮಗೆ ಮಾಡಿಕೊಡಬೇಕಾಗಿದೆಯಲ್ಲವೆ ?)

'She seemed to be worried' (ಆಕೆ ಚಿಂತಾಮಗ್ನಳಾದಂತೆ ಕಂಡಿತು.)

'ಛಬಿ, ಸ್ತ್ರೀಯಾನಾ ಸಂಶಯವೃತ್ತಿ ಅಸಾಯಚೀಚ್. Jealousy, thy name is woman ಮ್ಹಣಾವ ಲಾಗೇಲ.' (ಸ್ತ್ರೀಯರಲ್ಲಿ ಸಂಶಯವೃತ್ತಿ ಇದ್ದದ್ದೇ ಛಬಿ. ಹೆಂಗಸೆಂದರೆ ಅಸೂಯೆಯ ಮೂರ್ತಿ ಎನಬೇಕಾಗುತ್ತದೆ.)

'ಶಂಕಾ ಕಶಾ ಬದ್ದಲ ?' (ಸಂಶಯ ಯಾತರ ಬಗ್ಗೆ ?)

'My wife seems to be.........ಛಬಿ, don't worry, let it go.' (ನನ್ನ ಹೆಂಡತಿ........ಹೋಗಲಿ ಛಬಿ ಬಿಟ್ಟುಬಿಡು.) ಛಬಿಗೆ ಯಾವುದೂ ತಿಳಿಯಲಿಲ್ಲ.

'ಛಬಿ, ಮೀ ಸಾಂಗತೊ, my first wife also was of suspicious nature...... ಪಣ ತೀ ಶಿಕಲೇಲಿ ನವ್ಹತೀ. ತರೀ ಹಿ, what a cultured soul! ಛಬಿ, I am of opinion that culture and education do not go together.' (ಛಬಿ, ನನ್ನ ಮೊದಲಿನ ಹೆಂಡತಿಯೂ ಸಂಶಯ ಸ್ವಭಾವದವಳೇ. ಆದರೆ ಕಲಿತವಳಲ್ಲ. ಆದರೂ ಏನು ಆ ಹೃದಯ ಸಂಸ್ಕಾರ! ಛಬಿ, ಸಂಸ್ಕೃತಿಗೂ ಶಿಕ್ಷಣಕ್ಕೂ ಆಗಿಬರುವದಿಲ್ಲವೆಂದು ತೋರುತ್ತದೆ.)

"So your first marriage was happier?" (ಹಂ, ಹಂಗಾರ ನಿಮ್ಮ ಮೊದಲ ಸಂಬಂಧ ಸುಖಕರವಾಗಿತ್ತು ಅಂದ್ಹಾಂಗಾಯಿತು.)

"Definitely ...... ತರೀ ಮಲಾ ವಾಟತ ಹೋತ, I should have married an educated woman, who could prove a better

companion in life, who could read and better understand the book of my mind and heart. ಪಣ, I am all the more unhappy and miserable, ಛಬೆ!' (ನಿಸ್ಸಂಶಯ. ಆದರೂ ನನ್ನ ಜೀವನದಲ್ಲಿ ಜೊತೆಜೊತೆಯಾಗಿ ನಿಂತು, ನನ್ನ ಅಂತಃಕರಣದ ಗ್ರಂಥವನ್ನು ಓದಿ ತಿಳಿದು ಕೊಳ್ಳುವ ಸುಶಿಕ್ಷಿತಳನ್ನು ಮದುವೆಯಾಗಬೇಕಾಗಿತ್ತು ಎಂದು ನನಗೆ ಅನಿಸದೆ ಇಲ್ಲ. ಆದರೆ.........ಅದಾಗಿಯೂ ನಾನು ಸುಖಿಯಾಗಲಿಲ್ಲ!) ಎಂದು ಹಾದಿ ಯನ್ನು ಮುಂದೆ ಸಾಗಬೇಕೆಂಬ ಅರಿವಿಲ್ಲದೆ ಟಿಳಕ ಬ್ರಿಜ್ ಮೇಲೇ ನಿಂತು ಆವೇಶದಿಂದ ಮಾತನಾಡತೊಡಗಿದನು. ಒಬ್ಬಿಬ್ಬ ಹಾದಿಹೋಕರಿಗೆ ಇತ್ತ ಕಡೆ ಸ್ವಲ್ಪ ಕುತೂಹಲವಾದರೂ ಬಸ್ಸಿಗಾಗಿ ದಾರಿ ಕಾಯುತ್ತಿರಬಹುದೆಂದು ಎಣಿಸಿ ಹಾಗೇ ಮುಂದೆ ಸಾಗಿದರು. ಬಹುಜನರಿಗೆ ಮುಂಬಯಿಯಂತಹ ಶಹರದಲ್ಲಿ ಹಾದಿಯಲ್ಲಿ ಇನ್ನೊಬ್ಬರ ಬಗ್ಗೆ 'ಕೆತ್ತಿಬಜೆ' ಮಾಡುವಷ್ಟು ಕುತೂಹಲ, ಅವಕಾಶ, ಸೋಜಿಗಗಳಿರುವುದಿಲ್ಲ. ಅಂತೆಯೇ ರಾಮನಾಥನಿಗೆ ಆವೇಶಪೂರ್ಣವಾಗಿ ಮಾತನಾಡುವುದಕ್ಕೆ ಯಾವ ಆತಂಕವೂ ಉಂಟಾಗ ಲಿಲ್ಲ. ಛಬೆ ಅವನ ಅಪ್ರ್ಯಾಹತವಾದ ಆವೇಶಪೂರ್ಣ ಭಾವನೋದ್ಗಾರ ಗಳನ್ನು ತಡೆಯಲು ಸಾಧ್ಯವಾಗದೆ, ನಡುನಡುವೆ ಹೂಂಗುಟ್ಟುವುದಕ್ಕೂ ಸಾಧ್ಯವಾಗದೆ, ಕಣ್ಣಿನಿಂದಲೆ ಅವನಿಗೆ ಉತ್ತರ ಕೊಡುತ್ತಿದ್ದಳು.

'ಛಬೆ, ನನ್ನ ಜಾನಕಿ ನನ್ನಷ್ಟೆ ಕಲಿತವಳಾಗಿದ್ದರೆ ಇಬ್ಬರೂ ಎಷ್ಟೊಂದು ಸರಸವಾಗಿ ಇರುತ್ತಿದ್ದೆವು! ನನ್ನ ಜಾನಕಿ ಕಲಿತಿದ್ದರೆ ಅವಳೆಂದೂ ಈ ರೀತಿ ವರ್ತಿಸುತ್ತಿರಲಿಲ್ಲ. ಅವಳ ಹೃದಯಸಂಸ್ಕಾರಕ್ಕೆ ಇನ್ನಷ್ಟು ಶಿಕ್ಷಣ ಸಿಕ್ಕಿದ್ದರೆ.... ಎಂದು ಆಗಾಗ ಚಿಂತಿಸುತ್ತಿದ್ದೆ. ಈಗ ಸುಶಿಕ್ಷಿತ ಹೆಂಡತಿ ಸಿಕ್ಕಿದ್ದಾಳೆ, ಆದರೆ ಆ ಹೃದಯವಂತಿಕೆಯಿಲ್ಲ. ಎರಡರಲ್ಲಿ ಯಾವುದು ಬೇಕು? ಎಂದು ದೇವರು ನನ್ನ ಪ್ರಶ್ನೆ ಮಾಡಿಕೇಳಲೆಂದೇ ಈ ಪರಿಸ್ಥಿತಿ ತಂದೊಡ್ಡಿದನೇನೊ ಎಂದೆನಿ ಸುತ್ತಿದೆ ನನಗೆ. ಛಬೆ, ಜಾನಕಿಯಂತಹ ಹೆಂಡತಿ ಇಲ್ಲದ ಮೇಲೆ ಜೀವನದಲ್ಲಿ ಸ್ವಾರಸ್ಯವಿಲ್ಲ ಎನಿಸುತ್ತದೆ. ಜಾನಕಿಯೆಂದರೆ ಜಾನಕಿಯೇ ಆಗಿದ್ದಳು.....' ಎಂದು ಹಲವಾರು ತರಹದಲ್ಲಿ ರಾಮನಾಥನು ಛಬೆಗೆ ತಿಳಿಯುವಂತೆ ತನ್ನ ಹರಕುಮುರಕು ಮರಾಠಿಯಲ್ಲೇ ಮಾತಾಡಿದ. ಅನಾಯಾಸವಾಗಿಯೇ ಬಸ್ಸು ಬಂದು ನಿಂತಿತು. ಛಬೆ ಬಸ್ಸಿನಲ್ಲಿ ಏರುವಂತೆ ಸನ್ನೆಮಾಡಿದಳು. ಇಬ್ಬರೂ ಬಸ್ಸಿನಿಂದ ಶಿವಾಜಿಪಾರ್ಕಿನ ಕೂಟಕ್ಕಿಳಿದರು.

'Let us go to sea-beach' (ಸಮುದ್ರದ ಬೀಚಿಗೆ ಹೋಗೋಣ) ಎಂದಳು ಛಬಿ. ರಾಮನಾಥ ತನ್ನ ಭಾವನೆಯ ಓಘದಲ್ಲಿ ಸುಮ್ಮನೆ ಅವಳನ್ನು ಹಿಂಬಾಲಿಸಿದ.

ಸಂಜೆಯ ಸಮಯ. ದಾದರ ಬೀಚು ಉಲ್ಹಾಸಮಯವಾಗಿ ರಂಗುರಂಗಿನಿಂದ ಮೆರೆಯುತ್ತಿತ್ತು. ಸಮುದ್ರದ ಭರತಿಯ ವೇಳೆ ಇದ್ದುದರಿಂದ ತೆರೆಗಳು ಅಬ್ಬರಿಸಿ ಬರುತ್ತಿದ್ದುವು. ಎಳೆಯ ಮಕ್ಕಳು ತೆರೆಯ ನೊರೆಯೊಡನೆ ಆಟವಾಡುತ್ತಿದ್ದರು. ತಂದೆತಾಯಿಗಳು ಸ್ವಲ್ಪ ದೂರದಲ್ಲಿ ಕುಳಿತು ಮಕ್ಕಳ ಆಟವನ್ನು ನೋಡಿ ಆನಂದಪಡುತ್ತಿದ್ದರು. ಶೀಖದಂಪತಿಗಳ ಮುದ್ದು ಮಗುವೊಂದು ತೆರೆ ಬರುತ್ತಲೆ ಉಸುಬಿನ ಮೇಲೆ ಕಾಲು ಅಪ್ಪಳಿಸಿ ಇಡುವಾಗ ಕಾಲೊಳಗಿನ ಚಪ್ಪಲಿಯೊಂದು ಜರಿದು ತೆರೆಯೊಡನೆ ಹೊರಳುಪ್ಪು ಮಾಡಿತು. ಬಾಲಕ, 'ನನ್ನ ಚಪ್ಪಲಿಯನ್ನು ಸಮುದ್ರ ತೆಗೆದುಕೊಂಡು ಹೋಯಿತು' ಎಂದು ಅಳಹತ್ತಿದ. ಅವರಪ್ಪ 'ಹೋಗಲಿ ಬಿಡು' ಎಂದರೂ ಕೇಳದೆ ಆ ಚಪ್ಪಲಿಯನ್ನು ತಂದೇ ಕೊಡಬೇಕೆಂದು ಹಟ ಹಿಡಿದ. ಅಂತೂ ಸರದಾರಜಿ ಏರುಗಚ್ಚೆ ಹಾಕಿ ಸಮುದ್ರಕ್ಕೆ ಇಳಿಯಬೇಕಾಯಿತು. ಚಪ್ಪಲಿ ಸಾಕಷ್ಟು ದೂರ ಹೋಗಿತ್ತು. ಆದರೂ ಸರದಾರಜಿ ಧಾವಿಸಿ ಏಳುತ್ತ ಬೀಳುತ್ತ ಚಪ್ಪಲಿ ಹುಡುಕಿ ತಂದ; ಮಗು ಹಿಗ್ಗಿನಿಂದ ಕೇಕೆಹಾಕುತ್ತ ಮತ್ತೆ ಚಪ್ಪಲಿಯನ್ನು ಕಾಲೊಳಗೆ ಹಾಕಿಕೊಂಡು 'ಭೇಲ್' ಎಂದು ಕೂಗುತ್ತಿದ್ದವನ ಕಡೆಗೆ ಲಕ್ಷ್ಯ ಹಾಕಿದ. ಇದನ್ನೇ ಕುತೂಹಲದಿಂದ ನೋಡುತ್ತಿದ್ದ ರಾಮನಾಥನಿಗೆ ಜೀವ ನಿಲ್ಲಲಿಲ್ಲ. ತನ್ನ ಕಿಸೆಯೊಳಗಿಂದ ಎರಡಾಣೆಯ 'ಭೇಲ್' ಕೊಂಡುಕೊಂಡು, 'ಬಚ್ಚಾ ಯೇ ಲೆವ್' ಎಂದು ಕೊಟ್ಟ. ರಾಮನಾಥನ ಅಂತಃಕರಣದ ಕೃತಿ ಸರದಾರ ದಂಪತಿಗಳನ್ನು ಕೃತಜ್ಞರನ್ನಾಗಿ ಮಾಡಿತು. 'ಬಾಬೂಜಿ ಮೈ ದೇಸಕ್ತಾಹೂಂ' ಎಂದು ಸರದಾರಜಿ ಹಣ ತೆಗೆದು ರಾಮನಾಥನ ಕೈಗೆ ಕೊಡಹೋದರೆ ರಾಮನಾಥ ಕೇಳಲಿಲ್ಲ. ಸರದಾರಜೀ ಪತ್ನಿ ಮುಗುಳ್ನಗೆಯಿಂದಲೆ ಕೃತಜ್ಞತೆಯನ್ನು ಸೂಚಿಸುತ್ತಿದ್ದಳು. 'ನೈ, ಮಾಫ ಕರ್ನಾ ಸರದಾರಜಿ. ರಹನೇ ದೋ. ಶುಕ್ರಿಯಾ' ಎಂದು ಹಣ ಸ್ವೀಕರಿಸದೆ ಸ್ವಲ್ಪ ಮುನ್ನಡೆದ. ಆ ಮುದ್ದು ಮಗುವಿನಲ್ಲಿ ಇಷ್ಟೊಂದು ಆಸ್ಥೆ ತೋರಿದ ರಾಮನಾಥನನ್ನು ಛಬಿ ಮತ್ತೂ ಆತ್ಮೀಯತೆಯಿಂದ, ಸ್ನಿಗ್ಧಭಾವದಿಂದ ಕಾಣಹತ್ತಿದಳು.

‘ ತೊ ಮುಲಗಾ ಫಾರ ಆವಡ್ಲಾ ತುಮ್ಹಾಲಾ ? ’ ( ಆ ಹುಡುಗ ನಿಮ್ಮ ಮನಸ್ಸಿಗೆ ಬಂತೇನು ಬಹಳ ? ) ಎಂದು ಪ್ರಶ್ನೆ ಕೇಳಿದಳು.

‘ ಛಬೆ, ತು ‘ಕಾಬೂಲಿವಾಲಾ’ ಟಾಗೋರಾಂಚೀ ಗೋಷ್ಟ ವಾಚಲೀ ಆಹೆಸನಾ ? ’ (ಟ್ಯಾಗೋರರ ಕಾಬೂಲಿವಾಲಾ ಓದೀದಿ ಇಲ್ಲ ? ) ಎಂದು ಪ್ರಶ್ನೆಮಾಡಿ ತನ್ನ ಸರ್ವ ಹೃದ್ಗತವನ್ನು ಅದೊಂದು ಪ್ರಶ್ನೆಯಲ್ಲೇ ಅಡಕ ವಾಡಿ ಹೇಳಿದ.

‘ ಓಹೋ! ಮ್ಹಣಜೆ, ತುಮಚಾ ಪಹಿಲಾ ಪೇಘಾ! ಲಕ್ಷಾಂತ ಆಲ. ’ ಎಂದಳು ಛಬೆ.

‘ ಛಬೆ, ಅಮುಚಾ ಮೋಹನ ಚಂದ್ರಹಾಸಾ ಸಾರಖಾ........’ ಮುಂದಿನ ಮಾತು ಬಾರದೆ ರಾಮನಾಥ ಮೌನಿಯಾಗಿಬಿಟ್ಟ.

ಛಬೆ ಸೂರ್ಯಾಸ್ತವನ್ನವಲೊಕಿಸುತ್ತ ‘ What a beauty !’ ಎಂದು ಉದ್ಗಾರವೆತ್ತಿದಳು. ಇಬ್ಬರೂ ಜನರ ಬಣ್ಣಗಳ ಸಂತೆಯಿಂದ ದೂರವಾಗಿ ‘ ವರ್ಲಿ ’ಯತ್ತ ನಡೆದರು. ಹಾದಿಯಲ್ಲಿ ಎತ್ತರದ ಆವಾರದ ಸ್ಮಶಾನವನ್ನು ನೋಡಿ ರಾಮನಾಥನು ‘ ಹತ್ತು ಹೆಜ್ಜೆಗಳಾಚೆ ಎಂತಹ ಜೀವಂತ ಸಂಭ್ರಮ! ಹತ್ತು ಹೆಜ್ಜೆಗಳೀಚೆ ಏನು ಸ್ಮಶಾನ ಮೌನ! ’ ಎಂದು ತನ್ನೊಳಗೇ ಉದ್ಗಾರವೆತ್ತಿದನು. ‘ ಛಬೆ, What a contrast between that sound and this silence! ’ (ಆ ಶಬ್ದಕ್ಕೂ ಈ ಮೌನಕ್ಕೂ ಏನು ವ್ಯತ್ಯಾಸ ಛಬೆ ! ) ಎಂದು ಛಬೆಯನ್ನುದ್ದೇಶಿಸಿ ನುಡಿದನು. ‘ಹೆ ದೋನೀಹಿ ನಕೊ, ತಿಸರೀ ಕಡೆ ಜಾವೂ ’ ( ಇವೆರಡೂ ಬೇಡ. ಮೂರನೇ ಕಡೆಗೆ ಹೋಗೋಣ) ಎಂದು ಛಬೆ ತೆಂಗಿನ ಮರಗಳಿಂದ, ಹಸಿರು ನೆಲದಿಂದ ಕಂಗೊಳಿಸುವ ರಮಣೀಯ ದೃಶ್ಯವನ್ನು ದಾಟಿ ‘ ಕ್ಯಾಡೆಲ್’ ರೋಡಿಗೆ ಕರೆದೊಯ್ದಳು. ರಾಮನಾಥ ಛಬೆಯ ಹೆಗಲ ಮೇಲೆ ಕೈಯಿಟ್ಟು ಅವಳ ಆಸರೆಯಿಂದ ನಡೆಯುತ್ತಿದ್ದ. ಎದುರಿಗೇ ಬಂದಳು ವಿದ್ಯಾ ! ಛಬೆ ಭುಜದ ಮೇಲಿನ ರಾಮನಾಥನ ಕೈ ಸರಿಸಿದಳು ‘ ಕಾಯ್ ? ’ ಎಂದು ಪ್ರಶ್ನೆಮಾಡಿದ ರಾಮನಾಥ. ಛಬೆ ಉತ್ತರ ಕೊಡದೆ ವಿದ್ಯಾವತಿಯನ್ನು ಪೆಚ್ಚುಮುಖದಿಂದ ನೋಡ ನೋಡುತ್ತ ‘ ಕಾಯ್ ? ವಾಕಿಂಗಲಾ ಚಾಲ್ಲಾ ? ’ (ಏನು ತಿರುಗಾಡಲಿಕ್ಕೆ ಹೊರಟಿದ್ದಿರಾ ? ) ತಾನಾಗಿಯೆ ಅವಳನ್ನು ಮಾತಾಡಿಸಿದಳು ಛಬೆ.

'ಆಪಣ ?' (ನೀವು ?) ಎಂದು ವಿದ್ಯಾ ಪ್ರಶ್ನೆಯಾಕಾರದಲ್ಲೇ ಹುಬ್ಬು ಕೊಂಕಿಸಿದಳು. ಛಬಿ ಸುಮ್ಮನೆ ಇದ್ದಳು. ರಾಮನಾಥನೂ ಸುಮ್ಮನೆ ಇದ್ದ. ವಿದ್ಯಾ ಬಿಮ್ಮನೆ ನಡೆದಳು. ಛಬಿಗೆ ನಿಜವಾಗಿಯೂ ಗಾಬರಿಯಾಯಿತು. ರಾಮನಾಥನ ಮುಖವನ್ನೆ ನೋಡುತ್ತ ಮುಂದೆ ಎಲ್ಲಿ ಹೋಗಬೇಕೆಂಬುದೆ ತಿಳಿಯದೆ ಸುಮ್ಮನೆ ನಿಂತುಬಿಟ್ಟಳು.

'ತ್ಯಾ ರಾಗಾವಲ್ಯಾ ವಾಟತ!' (ಸಿಟ್ಟಿಗೆದ್ದಾರ ಕಾಣಸ್ತದ.)

'Don't you worry!' (ಅದನ್ನೆಲ್ಲ ಚಿಂತಿಸಬೇಡ.)

'ಮಲಾ ಕಸಂತರಿ ವಾಟತ' (ನನಗ ಹೇಗೆ ಹೇಗೊ ಅನಿಸುತ್ತದೆ.)

'ಮ್ಹಣಜೆ ?' (ಅಂದರೆ ?)

'She seems to be suspecting us.' (ಆಕೆ ನಮ್ಮನ್ನು ಸಂಶಯದಿಂದ ನೋಡಿದಂತೆ ಕಾಣುತ್ತದೆ.)

'What if ? ಆಮಚೆ ಮನ ಶುದ್ಧ ಆಹೆ. Our conscience is clear. We need fear none.' (ಆದರೇನು ? ಮನಸ್ಸು ಶುದ್ಧ ಅದೆ ನಮ್ಮದು. ವಿವೇಕ ಜಾಗೃತ ಅದೆ. ಅಂದಮೇಲೆ ಯಾರಿಗೂ ಹೆದರಬೇಕಾಗಿಲ್ಲ.)

'Clear ಆಹೆ ತುಮಚ conscience ?' ಓಡುತ್ತಿರುವ ಕುದುರೆಯನ್ನು ಲಗಾಮು ಹಾಕಿ ಜಗ್ಗಿದಂತಾಯಿತು. ರಾಮನಾಥ ಏನೋ ವಿಚಾರಿಸತೊಡಗಿದ. ಅವನ ಹೃದಯದಲ್ಲಿ ವಿವೇಕದ ವಿದ್ಯುದ್ದೀಪ ಹತ್ತಿ ಪಾಪದ ಗುರುತು ಅಲ್ಲಲ್ಲಿ ಸ್ಪಷ್ಟವಾಗಿ ಕಾಣತೊಡಗಿತು. 'ಛಬಿ, ತಿಕಡೆ ಬಸೂ' (ಅತ್ತಲಾಗ ಕೂಡೋಣ) ಎಂದು ಛಬಿಯನ್ನು ಕೈಹಿಡಿದು ಕರೆದುಕೊಂಡು ಸ್ವಲ್ಪ ದೂರ ನಡೆದ. ಅಲ್ಲಿಯೆ ಚಿಕ್ಕ ಘಾಟದಂತಿರುವ ಪಾವಟಿಗೆಯ ಕಟ್ಟೆಯ ಮೇಲೆ ಕುಳಿತುಕೊಂಡ. 'clear' ಆಹೆ ತುಮಚ conscience ? ಮತ್ತೆ ಮತ್ತೆ ಚಾಟಿಯ ಏಟು ಕೊಟ್ಟಂತೆ ಛಬಿಯ ಪ್ರಶ್ನೆ ರಾಮನಾಥನ ವಿವೇಕವನ್ನು ಕೆಣಕಹತ್ತಿತು. ಪಾಪದ ಭೀತಿ, ಅದರ ಅರಿವು ಹೆಚ್ಚಾಗತೊಡಗಿತು. ಸ್ವಲ್ಪ ಹೊತ್ತು ಕಣ್ಣು ಮುಚ್ಚಿ ಸುಮ್ಮನಾದ. ಛಬಿಯ ತೊಡೆಯ ಮೇಲೆ ತಲೆಯಿಟ್ಟ. ಛಬಿ ಮೆಲ್ಲನೆ ರಾಮನಾಥನ ಕುರುಳು ತೀಡಿದಳು.

'ಛಬಿ, ಮೀ ಪಾಪಿ ಆಹೆ. ಮಾಝು ಮನ ಶುದ್ಧ ನಾಹಿ. ಛಬಿ, when I was with you in the Hospital-van my mind was not

pure; when I saw you changing your dress my mind was not pure; ಛಬಿ when I saw your long thick braid of hair stretching down your thighs my mind was not pure...ಛಬಿ ಮಲಾ ಕ್ಷಮಾ ಕರ್ ! I want to admit my sin and purify my mind. ಛಬಿ, ತುಮ್ಹಿ ಕಾಹೀಹೀ ಪ್ರಾಯಶ್ಚಿತ್ತ ದ್ಯಾ, ಮೀ ಘೇಯೀನ. ಮಾಝಾ ಮನ ಶುದ್ಧ ಕರೂನ ಘೇತೋ.' ( ಛಬಿ, ನಾನು ಪಾಪಿ ಇದ್ದೇನೆ. ನನ್ನ ಮನಸ್ಸು ಶುದ್ಧವಿಲ್ಲ. ದವಾಖಾನೆಯ ಮೋಟಾರಿನಲ್ಲಿ ನಾನು ನೀನು ಕುಳಿತು ಹೊರಟಾಗ ನನ್ನ ಮನಸ್ಸು ವಿಚಲಿತವಾಗಿತ್ತು; ನೀನು ನಿನ್ನ ವೇಷ ಬದಲಿಸುವಾಗ ನನ್ನ ಮನಸ್ಸು ಹರಿದಾಡಿತ್ತು; ನಿನ್ನ ನೀಳವಾದ ಹೆಳಲನ್ನು ನೋಡಿಯೂ ನನ್ನ ಮನಸ್ಸು ವಿವ್ಹಲಗೊಂಡಿತ್ತು. ಛಬಿ, ನನ್ನನ್ನು ಕ್ಷಮಿಸು. ನನ್ನ ಪಾಪವನ್ನು ಒಪ್ಪಿ ನನ್ನ ಮನಸ್ಸನ್ನು ತೊಳೆಯಬೇಕಾಗಿದೆ ನನಗೆ. ನೀನು ಕೊಟ್ಟ ಪ್ರಾಯಶ್ಚಿತ್ತವನ್ನು ತೆಗೆದುಕೊಳ್ಳಲು ಸಿದ್ಧನಿದ್ದೇನೆ. )

'ರಾವ್, ತುಮಚ ಮನ ಶುದ್ಧಚ ಆಹೇಚ.' Mahatma became a Mahatma by admitting his own follies ( ರಾವ್, ನಿನ್ನ ಮನಸ್ಸು ಶುದ್ಧವೇ ಇದೆ. ಮಹಾತ್ಮಾ ತನ್ನ ತಪ್ಪು ಒಪ್ಪಿಯೇ ಮಹಾತ್ಮನಾದ. )

'What a comparison ಛಬಿ! but ಛಬಿ, admission of errors shall not mean further license for commiting sin.' ( ಯಾರನ್ನು ಯಾರಿಗೆ ಹೋಲಿಸುವೆ ಛಬಿ! ತಪ್ಪು ಒಪ್ಪುವದು ಮತ್ತೆ ಹೊಸದಾಗಿ ತಪ್ಪು ಮಾಡುವುದಕ್ಕೆ ಅಲ್ಲ. )

'That is your lookout. ಛಬಿ, ತುಮ್ಹೀಚ್ ಆಜ್ ಮಾಝೆ ಡೋಳೆ ಉಘಡ್ಲೇ ( ಅದು ನಿನ್ನ ದೃಷ್ಟಿ. ಛಬಿ, ನೀನೇ ಇಂದು ನನ್ನ ಕಣ್ಣು ತೆರೆದೆ. ) ಆವೇಶಪೂರ್ಣವಾಗಿ ಮಾತನಾಡಿ ಛಬಿಯ ಕೈಹಿಡಿದು ಅದೇ ಕೈ ಹಣೆಗೆ ಹಚ್ಚಿಕೊಂಡ.

'ಹಾ ಮಾಝಾ ಪ್ರಣಾಮ, ಮಾಝ್ಯಾಪೇಕ್ಷಾ ಲಹಾನ ಅಸ್ಲೆಲ್ಯಾ ಛಬಿಲಾ ನವ್ಹೆ, ಮಾಝಾಪೇಕ್ಷಾ ಥೋರ ಅಸ್ಲೇಲ್ಯಾ ಛಬೀಚ್ಯಾ ಮಾತೃ

ಹೃದಯಾಲಾ, ಮಾತೃಪಣಾಲಾ.' ( ಇದೊ, ನನ್ನ ನಮಸ್ಕಾರ. ನನಗಿಂತಲೂ ಚಿಕ್ಕವಳಾದ ಅಲ್ಲ, ನನಗಿಂತಲೂ ದೊಡ್ಡದಾದ ಅವಳ ಮಾತೃ ಹೃದಯಕ್ಕೆ ತಾಯತನಕ್ಕೆ, ಈ ನನ್ನ ನಮಸ್ಕಾರ ! )

ಕಣ್ಣೀರು ಕೋಡಿವರಿದು ಭಬಿಯ ಸೆರಗನ್ನು ತೋಯಿಸಿಬಿಟ್ಟಿತು. ಸಣ್ಣ ಮಗುವಿನಂತೆ ದನಿ ತೆಗೆದು ಅತ್ತುಬಿಟ್ಟ ರಾಮನಾಥ. ಸಣ್ಣ ಮಗುವನ್ನು ರಮಿಸುವಂತೆಯೆ ರಮಿಸಿದಳು ಭಬಿ. "ಅಸ ಕರೂನಯೆ ಗಡೆ" (ಹಾಗೆ ಮಾಡಬಾರದು ) ಎಂದು ಬುದ್ಧಿ ಹೇಳುವ ಅಧಿಕಾರವಾಣಿಯಿಂದಲೆ ಮಾತನಾಡಿದಳು. ಭಬಿ ಇಪ್ಪತ್ತೆರಡು ವಯಸ್ಸಿನ ತರುಣಿಯಾಗಿರಲಿಲ್ಲ ಈಗ; ಎಪ್ಪತ್ತು ವಯಸ್ಸಿನ ತಾಯಿಯಾಗಿದ್ದಳು. ರಾಮನಾಥ ಮೂವತ್ತು ವಯಸ್ಸಿನ ನಡುವರಯದ ಗಂಡುಸಾಗಿರಲಿಲ್ಲ; ಮೂರು ವರುಷದ ಮುಗ್ಧ ಬಾಲಕನಾಗಿದ್ದನು. ತನ್ನ ತಾಯಿಯ ತೋಳತೊಟ್ಟಿಲಲ್ಲಿ ಲೋಲಾಡುತ್ತಿರುವಾಗ ಇಷ್ಟು ಸುಖ ಪಡೆದಿರಲಿಕ್ಕಿಲ್ಲ ರಾಮನಾಥ. ಏಕೆಂದರೆ ಆಗ ಸುಖದ ಕಲ್ಪನೆಯಾಗುತ್ತಿದ್ದಿಲ್ಲ, ಸುಖದ ಅರ್ಥ ತಿಳಯುತ್ತಿದ್ದಿಲ್ಲ. ಈಗ ಸುಖದ ಅರ್ಥವನ್ನು ಬಲ್ಲ ಮಗುವಾಗಿ ಆ ದಿವ್ಯಶಾಂತಿಯನ್ನು ಅನುಭವಿಸಿದನು. ಕೆಲಹೊತ್ತು ಇಬ್ಬರೂ ಮೌನ. ಎಷ್ಟೊ ಹೊತ್ತಿನ ಮೇಲೆ ನಿದ್ರೆಯಿಂದೆಚ್ಚತ್ತವರಂತೆ ಸುತ್ತಲೂ ನೋಡಿ—' ಭಬಿ, ಜಾನಕೀಚಾ ಮಾಂಡೀವರ ದೇಖಿಲ ಮೀ ಹೇ ಸುಖ ಅನುಭವಿಲೇ ನಾಹಿ' ಭಬಿ, (ಜಾನಕಿಯ ತೊಡೆಯ ಮೇಲೆ ಕೂಡ ನಾನು ಈ ಸುಖ ಅನುಭವಿಸಿರಲಿಲ್ಲ !) ಎಂದು ಉದ್ಗಾರವೆತ್ತಿದ. ಭಬಿಗೂ ಏನೋ ಹೊಳೆದಂತಾಯಿತು.

' ಅಂ ? ಕಾಯ ಮ್ಹಣಾಲಾ?' ( ಅಂ, ಏನಂದೆ ? ) ಎಂದು ಕೇಳಿದಳು.

' ಭಬಿ, ಮೀ ಪುನಃ ಚುಕಲೊ....ಚುಕಲೊ. ಭಬಿ, How can I plead of purity of my mind when I have betrayed my faithfulness to ಜಾನಕಿ, having married an educated second wife... No, I cannot plead innocence. Why ಭಬಿ, even when I was the beloved husband of ಜಾನಕಿ, today I admit before you my mind was at this craving for an educated partner in my life. I was thinking, perhaps foolishly that I would have been happier if Janaki were educated or if I had married an

educated wife...ತರ ಛಬೆ ಮಾಝೀ ಮನ ಶುದ್ಧ ಆಹೆ ಅಸ ಕಸ ಮಣಾಯಚ?....ಛಬೆ, I am a hopless creature. And why for heaven's sake did I marry a second wife ? And this one ? It was that physical hunger in me that made me corrupt....ಛಬೆ, even like a hungry dog clutching at a broken piece of bone, so did I clutch at this flesh and blood out of hunger, out out passionate hunger.' (ಛಬೆ, ಮತ್ತೆ ತಪ್ಪಿದೆ. ಜಾನಕಿಯಂತಹಳನ್ನು ಮರೆತು ಎರಡನೆಯ ಲಗ್ನವಾದ ನನ್ನ ಮನಸ್ಸಿನ ಶುದ್ಧತೆಯನ್ನು ಏನೆಂದು ಹೇಳಿಕೊಳ್ಳಲಿ? ಛಬೆ ನಾನು ಜಾನಕಿಯ ಪ್ರಿಯವಲ್ಲಭನಾಗಿದ್ದಾಗಲೂ ಕೂಡ ನನ್ನ ಮನಸ್ಸು ಕಲಿತವಳೊಬ್ಬಳನ್ನು ಮಾಡಿಕೊಳ್ಳಬೇಕೆಂದು ಒಳಗೊಳಗೇ ಹಾತೊರೆಯುತ್ತಿತ್ತು. ಜಾನಕಿ ಕಲಿತವಳಾದರೆ.... ಅಥವಾ ಕಲಿತವಳನ್ನೆ ಬೇರೆಯವಳನ್ನು ನಾನು ಮದುವೆಯಾಗಿದ್ದರೆ..ಇದಕ್ಕೂ ಸುಖಿಯಾಗುತ್ತಿದ್ದೆ ಎಂದು ನನ್ನ ಮನಸ್ಸು—ತಪ್ಪೇ ಇರಬಹುದು—ಲೆಕ್ಕ ಹಾಕುತ್ತಿತ್ತು. ಹಿಗಿದ್ದೂ ನನ್ನ ಮನಸ್ಸು ಶುದ್ಧ ಇದೆ ಎಂದು ಹೇಗೆ ಹೇಳಲಿ ? ನಾನು ದುರ್ದೈವಿ ಛಬೆ!.... ಎರಡನೆಯ ಮದುವೆ ಯಾಕೆ ಮಾಡಿಕೊಂಡೆನೋ ಅನಿಸುತ್ತದೆ. ಅದರಲ್ಲಿಯೂ ಈಕೆ!.... ಆ ದೈಹಿಕ ಪಿಪಾಸೆ ಹೀಗೆ ನನ್ನನ್ನು ತಗ್ಗಿಗೆ ತಳ್ಳಿತು. ನಾಯಿ ಎಲಬು ಕಚ್ಚುವಂತೆ ನಾನೀ ಮಾಂಸದ ಮುದ್ದೆಯನ್ನು ಕಚ್ಚಿದೆ, ಕಾಮದ ಹಸಿವೆಗಾಗಿ.) ರಾಮನಾಥನಿಗೆ ಹೆಚ್ಚಿಗೆ ಮಾತು ಬಾರದಾದುವು. ಸುಮ್ಮನೆ ಕಣ್ಣೀರು ಒರಸಿಕೊಳ್ಳುತ್ತ ಅದೂ ಸಾಧ್ಯವಾಗದೆ ಕಣ್ಣೀರ ಧಾರೆ ಹರಿಯಿಸುತ್ತ ಹಾಗೇ ಕುಳಿತುಬಿಟ್ಟ. ಛಬೆ ಸುತ್ತಲೂ ನೋಡಿದಳು. ಬಂದ ಜನ ಸಂತೆ ಮುಗಿಸಿಕೊಂಡು ಹೋದಂತೆ ಹೋಗಿಬಿಟ್ಟಿದ್ದರು. ಒಮ್ಮೆಲೆ ಎಚ್ಚರದಿಂದ ಗಾಬರಿಗೊಂಡು 'ಅಹೋ ಸದಾ ಕರ್ಫ್ಯೂ ಆಹೆ ನಾ?' (ಕರ್ಫ್ಯೂ ಇದೆಯಲ್ಲವೇ?) ರಾಮನಾಥನಿಗೂ ಗಾಬರಿಯಾಯಿತು. 'ಆಂ!' ಎಂದ.

ಇಬ್ಬರೂ ಕಳ್ಳತನದಿಂದ ಶಿವಾಜಿಪಾರ್ಕಿನ ಕೂಟಿಗೆ ಬರುತ್ತಿದ್ದರು. ದಾರಿಯಲ್ಲಿ ಪೋಲೀಸ ತರುಬಿದ.

"ಕೋಣ ಆಹೆ ?" ( ಯಾರವರು ? ) ಎಂದು ಪ್ರಶ್ನೆ ಮಾಡಿದ.

'ಆಮ್ಹೀ ಘರೀ ಜಾತ ಆಹೊ' (ನಾವು ಮನೆಗೆ ಹೋಗುತ್ತಿದ್ದೇವೆ.) ಛಬೆ ನುಡಿದಳು.

'ಹೋ. ಪಣ ಕರ್ಫ್ಯೂ ಆಹೆ.' (ಹೌದು; ಆದರೆ ಕರ್ಫ್ಯೂ ಅದೆ.)

'ತರ ಕಾಯ ಕರಾಯಚ? ಕರ್ಫ್ಯೂ ಅತ್ತ ಸುರು ಝಾಲನಾ? ಜವಳಚ ಆಹೆ ಅಮುಚೆ ಘರ." (ಇದ್ದರೆ ಏನು ಮಾಡಬೇಕು! ಇದೀಗ ಸುರುವಾಗಿರಬೇಕು. ನಮ್ಮ ಮನೆ ಇಲ್ಲೆ ಸಮೀಪದಲ್ಲಿದೆ.) ಛಬೆಯ ಮಿದುಮಾತಿನಿಂದ ಪೋಲೀಸ ಸ್ವಲ್ಪ ಅನುಮಾನಕ್ಕೊಳಗಾದ. ಆಚೆಗೆ ಗೋಖಲೆ ರೋಡಿನಿಂದ ಮಿಲಿಟರಿ ಸಾರ್ಜಂಟರ ಜೀಪ ಕಾರು ಬಂತು. ಎಲ್ಲಿಯೊ ಕಲ್ಲು ಬಿದ್ದವೆಂದು ಬಬ್ಬಾಟವಾಗಿ ಸ್ವಲ್ಪ ಗದ್ದಲವೆದ್ದುದರಿಂದ ಸಾರ್ಜಂಟರ ಓಡಾಟ ಜೋರಾಗಿತ್ತು. ಈ ಗಲಾಟೆ ಕೇಳಿ ಛಬೆ ಸ್ವಲ್ಪ ಗಾಬರಿಗೊಂಡಳು. ರಾಮನಾಥನಿಗೂ ಒಂದಿಷ್ಟು ಗಾಬರಿಯೆನಿಸಿತು. ಇವರನ್ನು ನೋಡುತ್ತಲೆ ಸಾರ್ಜಂಟನ ಕಾರು ನಿಂತಿತು.

'ಯೇ ಕೌನ ಹೈ?' (ಇವರಾರು?) ಅಧಿಕಾರಿಗಳಾರೊ ಪೋಲೀಸರನ್ನು ಪ್ರಶ್ನೆ ಮಾಡಿದರು.

'We could not notice the time; we were sitting at the beach' (ನಮಗೆ ಹೊತ್ತಾದದ್ದು ಗೊತ್ತಾಗಲಿಲ್ಲ. ನಾವು ಇಲ್ಲೆ ಬೀಚದ ಹತ್ತಿರ ಕುಳಿತ್ತಿದ್ದೆವು.) ರಾಮನಾಥ ಪ್ರಾಮಾಣಿಕತನದಿಂದ ಮಾತನಾಡಿದ.

'Be careful; one stabbing case is reported from Gokhale road south.' (ಇಲ್ಲೇ ಗೋಖಲೆ ರೋಡಿನಲ್ಲಿ ಇರಿತವಾಗಿದೆಯೆಂದು ವರದಿಯಾಗಿದೆ. ಎಚ್ಚರ!) ಪೋಲೀಸ, ರಾಮನಾಥ ಛಬೆಯರನ್ನು ಅಷ್ಟಕ್ಕೇ ಬಿಡಲಿಲ್ಲ. ಅಧಿಕಾರಿಗಳ ಕಾರು ಮುಂದೆ ಓಡಿತು. ಸ್ವಲ್ಪ ಹೊತ್ತಿನಲ್ಲಿ ಇನ್ನೊಂದು ಮಿಲಿಟರಿ 'ಲಾರಿ' ಬಂತು. ಅಂತೂ ರಾಮನಾಥ ಛಬೆ ಅವರು ಆ ಲಾರಿಯಲ್ಲಿ ದಾದರ ಪೋಲೀಸ ಕಚೇರಿ ಕಾಣಬೇಕಾಯಿತು. ಅಲ್ಲೆಲ್ಲಾ ಪುರಾವೆ ನಡೆಯಿತು. ರಾಮನಾಥ ತಾನೂ ಸರಕಾರಿ ನೌಕರ ಎಂದು ಹೇಳಿ ತನ್ನ ಬಗ್ಗೆ ಎಲ್ಲಾ ವಿವರಗಳನ್ನು ಕೊಟ್ಟನು.

"And why were you sitting at sea-beach?" (ಬೀಚದ ಹತ್ತಿರ ನೀವು ಕುಳಿತದ್ದೇಕೆ?) ಪೋಲೀಸ ಇನ್‌ಸ್ಪೆಕ್ಟರ ಕೇಳಿದರು.

'We were very much worried!" (ಏನೋ, ಮನಸ್ಸಿಗೆ ಬೇಸರ ಬಂದಿತ್ತು.)

" Is she your wife ? " (ಆಕೆ ನಿಮ್ಮ ಹೆಂಡತಿಯೇ ?)

" Yes. " ( ಹೌದು. )

ರಾಮನಾಥನಿಗೆ ಬಿಡುಗಡೆಯಾಯಿತು. ಅವನ ವಿವೇಕಕ್ಕೆ ಬಿಡುಗಡೆಯಾಗಲಿಲ್ಲ. ಅವರಿಬ್ಬರನ್ನೂ ಅದೇ ಲಾರಿಯಲ್ಲಿ ಶಿವಾಜಿಪಾರ್ಕಿನ ವರೆಗೆ, ಅವರ ಮನೆಯ ವರೆಗೂ ತಂದಿಳಿಸಲಾಯಿತು. ಮನೆಯ ಮಜಲು ಏರುವಾಗ ರಾಮನಾಥನಿಗೆ ಮತ್ತೆ ದುಃಖ.

' ಛಬಿ, ಮಲಾ ಮಾಫ ಕರ್. ' ( ಛಬಿ, ನನ್ನನ್ನು ಕ್ಷಮಿಸು. )

' ಕಾ ? ' ( ಯಾಕ ? )

" You know why......The situation was such." (ಯಾಕೆ, ನಿನಗೇ ಗೊತ್ತು. ಪರಿಸ್ಥಿತಿಯೇ ಹಾಗಿತ್ತು. )

'Oh, don't mind.' ( ಓ, ಮರೆತುಬಿಡಿ ಅದನ್ನ ) ಎಂದು ಛಬಿ ರಾಮನಾಥನು ಪೋಲೀಸರಿಗೆ ಕೊಟ್ಟ ಹೇಳಿಕೆಯನ್ನು ಬಹಳ ಹಗುರಾಗಿ ತೆಗೆದುಕೊಂಡಳು.

ಕೊನೆಯ ಮಜಲಿಗೆ ಬಂದರು.

' ಬಾಃಯ್, ಬಾಃಯ್ ' ಎಂದಳು ಛಬಿ.

' ಆತ ಪರ್ಯಂತ ಪೋಚವೂ ಕಾಯ? ' ( ಒಳತನಕ ಕಳಿಸಲು ಬರಲೋ ?) ರಾಮನಾಥ ಕೇಳಿದ.

'Not necessary ' ( ಅಗತ್ಯವಿಲ್ಲ. ) ಎಂದಳು ಛಬಿ.

* * *

' ಕೋಣ ಆಹೆ ? ' ( ಯಾರವರು ? ) ಎಂದು ಒಳಗಿನಿಂದಲೆ ಒದರಿದಳು ವಿದ್ಯಾ, ಬಾಗಿಲದ ಬೆಲ್ ಸಪ್ಪಳ ಕೇಳಿ ರಾಮನಾಥ ಓ ಕೊಡದೆ ಮತ್ತೊಮ್ಮೆ ಬೆಲ್‌ನ್ನೆ ಬಾರಿಸಿದ.

' ಕೋಣ ಆಹೆ? ' (ಯಾರಿದ್ದೀರಿ? )

ಮತ್ತೆ ಬೆಲ್ ಸಪ್ಪಳ.

ವಿದ್ಯಾ ಸ್ವಲ್ಪಹೊತ್ತು ಸುಮ್ಮನಿದ್ದಳು.

ರಾಮನಾಥ ಬೇಸರಗೊಂಡು ಬಾಗಿಲು ಗುದ್ದಿ 'ಬಾಗಿಲು ತೆರೆಯ ಬಾರದೆ ವಿದ್ಯಾ?' ಎಂದು ಕೂಗಿದ. ವಿದ್ಯಾ ಬಾಗಿಲು ತೆರೆದಳು.

'ಬೆಲ್ ಕೇಳಿಸಲಿಲ್ಲವೆ ವಿದ್ಯಾ ?'

'ಕೇಳಿಸಿತು.'

'ಬಾಗಿಲು ತೆರೆಯಬಾರದೇನು ?'

'ಬೆಲ್ ಬೇಕಾದವರು ಬಾರಿಸಬಹುದು.'

"ಬೇಕಾದವರು ಯಾರು ಬರುತ್ತಾರೆ ಈ ಸಮಯದಲ್ಲಿ ?"

"ಊರೊಳಗೆ ಗದ್ದಲ ನಡೆದಿದೆ, ಕೇಳಿಲ್ಲವೇನು ?"

ರಾಮನಾಥ ಮಾತು ಬೆಳಸಲಿಲ್ಲ. ತಾನು ಬಾಗಿಲ ಬೆಲ್ ಬಾರಿಸುವ ಶೈಲಿಯ ಮೇಲೆಯೆ ಗುರುತಿಸಿದ ಛಬೆಯ ರಸಿಕತೆ ಅವನ ಕಣ್ಣಮುಂದೆ ನಿಂತಿತು.

'ನಿನ್ನ ಊಟ ಆಯಿತೆ ವಿದ್ಯಾ ?'

'ನಿಮ್ಮ ಹೊಟ್ಟೆಯೊಂದು ತುಂಬಿದೆಯಿಲ್ಲೊ ? ಸಾಕು.'

'ನನಗೆ ಕರ್ಫ್ಯೂ ಲಕ್ಷ್ಯಕ್ಕೇ ಬರಲಿಲ್ಲ ವಿದ್ಯಾ.'

'ಸರಿ. ಹೇಗೆ ಲಕ್ಷ್ಯಕ್ಕೆ ಬರಬೇಕು ಪಾಪ !'

'ವಿದ್ಯಾ ನನಗೂ ಹಸಿವೆ.'

'ಬಾಜೂ ಮನೆ ಇದೆಯಲ್ಲ ?'

ರಾಮನಾಥ ಸುಮ್ಮನೆ ಇದ್ದ. ಒಳಗೆ ಹೋಗಿ ವಾಶ್ ಮಾಡಿಕೊಂಡು ಹೊಟ್ಟೆತುಂಬ ನೀರು ಕುಡಿದ. ಹೊರಗೆ ಗ್ಯಾಲರಿಯಲ್ಲಿ ಆರಾಮ ಕುರ್ಚಿ ಹಾಕಿಕೊಂಡು ಸುಮ್ಮನೆ ಕುಳಿತುಕೊಂಡ.........

. . . .

ಅಂದು ಛಟ್ಟಿಯ ಅಮಾವಾಸ್ಯೆ. ಜಾನಕಿ ತೌರುಮನೆಯಲ್ಲಿದ್ದಳು. [redacted] ಹುಟ್ಟಿರಲಿಲ್ಲ. ರಾಮನಾಥ ಜಾನಕಿಯನ್ನು ಕರೆಯುವುದಕ್ಕೆಂದು ಬಂದಿದ್ದವನು ಅತ್ತೆ-ಮಾವಂದಿರ ಒತ್ತಾಯಕ್ಕಾಗಿ ಒಂದೆರಡು ದಿನ ಇರಬೇಕಾಗಿ ಬಂದಿತ್ತು. ಛಟ್ಟಿಯ ಅಮಾವಾಸ್ಯೆಯ ದಿನ ಅವರ ಓಣಿಯಲ್ಲಿಯ

ಹನುಮಂತದೇವರ ಗುಡಿಯಲ್ಲಿ ಕೀರ್ತನವಾಗುತ್ತಿತ್ತು. ಬಹುದಿನಗಳಿಂದ ನಡೆದುಬಂದ ಸಂಪ್ರದಾಯವಿದು.

' ರಾತ್ರಿ ನಿಮಗೆ ಬೇಗ ಊಟ ಮುಗಿಸಿ ನಾನು ಅವ್ವನೊಂದಿಗೆ ಕೀರ್ತನಕ್ಕೆ ಹೋಗಿ ಬರುತ್ತೇನೆ. ' ಜಾನಕಿ ನುಡಿದಳು.

" ಈಗಾಗಲೆ ಋಷಿಪಂಚಮಿ ಹಿಡಿದುಬಿಟ್ಟೆಯೇನು ? "

' ಪ್ರತಿ ವರುಷ ನಮ್ಮಲ್ಲಿ ಇದು ಇದ್ದದ್ದೇ. ಛಟ್ಟಿಗೊಮ್ಮೆ, ಮುಂದೆ ಕಾರ್ತೀಕ ಹಚ್ಚಿದಾಗೊಮ್ಮೆ. '

' ಪ್ರತಿ ವರುಷ ಇರಲಿ. ಈ ವರುಷ ಬೇಡ. '

' ಬೇಡ ಅಂದರೆ ಹೇಗೆ? ಮನೆಯೊಳಗೆಲ್ಲಾ ಏನಾದರೂ ಚೇಷ್ಟೆ ಮಾಡುತ್ತಾರೆ. ಬಿಟ್ಟು ಕೂಡಲಿಕ್ಕೆ ನೆಟ್ಟಗೆನಿಸುವುದಿಲ್ಲ. ಸಾಧ್ಯವಾದಷ್ಟು ಲಗೂ ಬಂದುಬಿಡುತ್ತೇನೆ. '

ರಾಮನಾಥನ ಮನಸಿನ ಅರ್ಥ ಜಾನಕಿಗಾದರೂ ಜಾನಕಿಯ ಪರಿಸ್ಥಿತಿಯ ಅರ್ಥ ರಾಮನಾಥನಿಗಾಗಲಿಲ್ಲ. ಅಂದು ಬೇಕೆಂದೇ ರಾಮನಾಥ ಸ್ವಲ್ಪ ತಡಮಾಡಿ ಮನೆಗೆ ಬಂದ. ಬಾಗಿಲು ತಟ್ಟಿದ ಜಾನಕಿಯ ಚಿಕ್ಕ ತಮ್ಮ ಬಾಗಿಲು ತೆರೆದ. ಜಾನಕಿಯ ಸೋದರತ್ತೆ ಊಟಕ್ಕೆ ಬಡಿಸಿದರು. ರಾಮನಾಥ ನಿರ್ವಾಹವಿಲ್ಲದೆ ಎಲೆಯ ಮೇಲೆ ಕೂತು ಮುರುಕ ಮಾಡಿ ಎದ್ದುಬಿಟ್ಟ. ಕಣ್ಣು ಕಡಿದರೂ ನಿದ್ರೆ ಬರಲಿಲ್ಲ. ಹಾಗೇ ಅಷ್ಟಕ್ಕಾಗಿ ಹಾಸಿಗೆಯ ಮೇಲೆ ಬಿದ್ದುಕೊಂಡಿದ್ದ. ಮನೆಯವರೆಲ್ಲರೂ ಬರಬೇಕಾದರೆ ಸರಿರಾತ್ರಿ ಆಗಿ ಹೋಗಿತ್ತು. ಜಾನಕಿ ಮೆಲ್ಲನೆ ತಮ್ಮ ಸೋದರತ್ತೆಯ ಬಳಿ ಹೋಗಿ " ಅತ್ಯಾ, ಊಟಾ ಮಾಡಿದರೇನು ? ಬಹಳ ತಡಾಮಾಡಿ ಬಂದರೇನು ? ಏನಾದರೂ ಅಂದರೇನು ? " ಒಂದೇ ಉಸುರಿನಲ್ಲಿ ನಾಲ್ಕೆಂಟು ಪ್ರಶ್ನೆ ಕೇಳಿದಳು. ಅತ್ಯಾ ಸಮಾಧಾನದಿಂದ ಉತ್ತರ ಹೇಳಿ "ಪ್ರಾಣಿ ಏನೂ ಊಟ ಮಾಡಲಿಲ್ಲ. ಬಡಿಸಿದ ಎಲೆ ಹಾಂಗೇ ಅದ, ನಿನ್ನ ಸಲುವಾಗಿ ಬಡಿಸಿ ಇಟ್ಟಾಂಗ." ಜಾನಕಿ ತಾನೂ ಊಟದ ಶಾಸ್ತ್ರ ಮುಗಿಸಿದಳು. ಒಳ್ಳೇ ಕೆನೆಮೊಸರು ಅವಲಕ್ಕಿ ಕಲಿಸಿಕೊಂಡು ಕುಡಿಯುವ ನೀರಿನ ತಂಬಿಗೆ ತೆಗೆದುಕೊಂಡು ಅಟ್ಟದ ಮೇಲೆ ನಡೆದಳು. ಜಾನಕಿಯ ಕಾಲು-ಸಪ್ಪಳ ಕೇಳಿ ರಾಮನಾಥ ನಿದ್ರೆ ಹತ್ತಿರ ಇದ್ದರೂ ಗೊರಕೆ ಹೊಡೆಯತೊಡಗಿದ. ಜಾನಕಿ ಟೀಪಾಯ ಮೇಲೆ

ಅವ ಲಕ್ಕಿಯ ಪಾತೇಲಿ ಇಟ್ಟು ಮೇಲೆ ಬಸಿ ಮುಚ್ಚಿ ನೀರಿನ ತಂಬಿಗೆಯಿಟ್ಟು ರಾಯರ ಬಳಿಗೆ ಬಂದಳು. ಅವಳ ಮುಡಿಯ ಕಾಮುಕಸ್ತೂರಿಯ ವಾಸನೆ ರಾಮನಾಥನನ್ನು ಭಗ್ಗನೆ ಎಬ್ಬಿಸಿತು. ಕಣ್ಣು ತೆರೆದ. ಜಾನಕಿ ಮುಗುಳು ನಗೆಯಲ್ಲೇ ಪಶ್ಚಾತ್ತಾಪದ ಕಳೆ ಬೆರೆಸಿ ದೀನಮುದ್ರೆಯಿಂದ ಗಂಡನನ್ನು ನೋಡಿ "ನನ್ನದು ತಪ್ಪಾಯಿತು" ಎಂದಳು. ಅವನ ಮನಸ್ಸನ್ನು ಸಂಪೂರ್ಣವಾಗಿ ಬಲ್ಲ ಜಾನಕಿ ಮಗ್ಗುಲಿಗೆ ಕುಳಿತುಕೊಂಡು ಮಿದುವಾದ ಮಾತಿನಿಂದ, "ನಿಮ್ಮ ಪ್ರೀತಿಯ ಜೀನಸು ತಂದಿದ್ದೇನೆ, ಒಲ್ಲೆಂದರೆ ನನಾ ಣೆಯಾಗಿದೆ.' ಎಂದುಸಿರಿದಳು.

'ನನ್ನ ಪ್ರೀತಿಯ ಜೀನಸು ಎಂದರೇನು ?'

ಾನಕಿ ಟೀಪಾಯ ಕಡೆಗೆ ಬೊಟ್ಟು ಮಾಡಿ ತೋರಿಸಿದಳು.

'ಅದಲ್ಲ.' ಎಂದ ರಾಮನಾಥ.

ಅವನ ಮನಸ್ಸನ್ನು ಸಂಪೂರ್ಣವಾಗಿ ಬಲ್ಲ ಜಾನಕಿ ರಾಮನಾಥನಿಗೆ ಬೇಕಾದ ಮೊದಲನೆಯ ಪ್ರೀತಿಯ ಜೀನಸನ್ನು ಕೊಟ್ಟು, ಆ ಮೇಲೆ ಅವ ಲಕ್ಕಿಯ ಪಾತೇಲಿ ಕೆಳಗಿಟ್ಟಳು. ರಾಮನಾಥನಿಗೆ ಹಾಸಿಗೆಯ ಮೇಲೇ ಕುಳಿತು ತಿನ್ನಲಿಕ್ಕೆ ಹೇಳಿದಳು.

'ನಾನೊಲ್ಲೆ.' ಎಂದ ರಾಮನಾಥ.

ಜಾನಕಿಗೆ ಗೊತ್ತು. ತಾನೂ ಅದೇ ಪಾತೇಲಿಯಲ್ಲಿ ಪಾಲುಗೂಡಿದಳು. ರಾಮನಾಥನ ಹೊಟ್ಟೆ ತಣ್ಣಗಾಯಿತು. ನೀರು ಕುಡಿದು 'ಅಃಬ್' ಎಂದು ತೇಗಿದ.

'ಇಷ್ಟು ಹಸಿವೆ ಇಟ್ಟುಕೊಂಡು ಹಾಗೇ ಮಲಗುತ್ತಿದ್ದಿರಲ್ಲ ?"

'ಇಷ್ಟು ಪ್ರೀತಿ ಇಟ್ಟುಕೊಂಡು ನೀನು ಹಾಗೇ ಹೋಗಿಬಿಟ್ಟೆಯಲ್ಲ ?'

ಸರಿ, ಇಬ್ಬರೂ ನಕ್ಕರು. ಕೋಪವು ಪ್ರಣಯದಲ್ಲಿ ಪರ್ಯವಸಾನ ಗೊಂಡಿತು...............

• • •

ಸರಿರಾತ್ರಿಯಾಗುತ್ತ ಬಂದರೂ ರಾಮನಾಥನು ಆರಾಮ ಕುರ್ಚಿ ಬಿಟ್ಟು ಕದಲಲಿಲ್ಲ. ವಿದ್ಯಾ ದೀಪ ಆರಿಸಿ ಮಲಗಿಕೊಂಡುಬಿಟ್ಟಿದ್ದಳು. ರಾಮ

ನಾಥನ ಹೊಟ್ಟೆಯೊಳಗಿನ ಕಸಿವಿಸಿ ಹೇಳತೀರದು. ಜಾನಕಿ ಯಾವಾಗಲೂ ಹೇಳುತ್ತಿದ್ದಳು : ''ಗಂಡ-ಹೆಂಡಿರ ಜಗಳ ಉಂಡು ಮಲಗುವ ತನಕ" ಎಂದು. ಆದರೆ ಆ ಮಾತು ಆ ಸಂಸ್ಕೃತಿಯುಳ್ಳ ಆ ಹೃದಯವುಳ್ಳ ಜಾನಕಿಯಂಥ ವರಿಗೆ. ಜಾನಕಿಯೂ ಎಷ್ಟೋ ಸಲ ಕೋಪಿಸಿಕೊಳ್ಳುತ್ತಿದ್ದಳು. ಆ ಕೋಪ ಅವರ ಪ್ರೇಮಸಂವರ್ಧನಕ್ಕೆ ಪುಟ ಕೊಡುತ್ತಿತ್ತು. ಈ ಕೋಪದ ಜಾತಿಯೆ ಹೊಸದೆನಿಸಿತು ರಾಮನಾಥನಿಗೆ. ಮನಸ್ಸಿನ ಬೇಸರ ಹೆಚ್ಚಿಸಿದಷ್ಟು ರಾಮ ನಾಥನಿಗೆ ಕುರ್ಚಿಯ ಮೇಲೆ ಬಿದ್ದುಕೊಂಡಿರುವುದು ಅಸಾಧ್ಯವೆನಿಸತೊಡ ಗಿತು. ದಡದಡ ಎದ್ದವನೆ ಒಳಗೆ ಬಂದ. ದೀಪ ಹಚ್ಚಿದ. ವಿದ್ಯಾ ಹೊದ್ದು ಕೊಂಡ ಚಾದರವನ್ನು ಓಸರಿಸಿದ.

' ವಿದ್ಯಾ ! ' ಎಂದು ಹಣ್ಣಾದ ದನಿಯಿಂದ ಕೂಗಿದ. ವಿದ್ಯಾ ಕಣ್ಣು ಪಿಳುಕಿಸಿದಳು ಮಾತ್ರ. ' ವಿದ್ಯಾ, ನನ್ನನ್ನೆ ಅಪರಾಧಿಯನ್ನಾಗಿ ಎಣಿಸುತ್ತಿದ್ದಿ ಯಲ್ಲ ? '

ವಿದ್ಯಾ ಮತ್ತೆ ಮೋರೆಯ ಮೇಲೆ ಮುಸುಕೆಳೆದುಕೊಂಡಳು. ರಾಮ ನಾಥ ಮತ್ತೆ ಮುಸುಕು ಓಸರಿಸಿದ.

' ವಿದ್ಯಾ ನನ್ನಲ್ಲೇನು ಅಪರಾಧ ಕಂಡಿದ್ದೀ ? ' ಮತ್ತಷ್ಟು ಹಣ್ಣಾದ ದನಿಯಿಂದ ಕೇಳಿದ ರಾಮನಾಥ.

' ಎಷ್ಟು ಧೈರ್ಯದಿಂದ ಕೇಳುತ್ತಿದ್ದೀರಲ್ಲಾ ? ಯಾವ ನೀತಿಯ ನೆಲದ ಮೇಲೆ ನಿಂತು ಈ ಮಾತನಾಡುತ್ತಿದ್ದೀರಿ ? '

' ವಿದ್ಯಾ ನನ್ನ ವಿವೇಕದ ಕಣ್ಣು ತೆರೆದಿಟ್ಟು ಮಾತನಾಡುತ್ತಿದ್ದೇನೆ. ಛಬಿಯೊಡನೆ ನಾನು ಓಡಾಡುತ್ತಿದ್ದೆನೆಂದ ಮಾತ್ರಕ್ಕೇ ನೀನು ಅಪನಂಬಿಗೆ ಯನ್ನು ವ್ಯಕ್ತಮಾಡುವುದು ನಿನ್ನ ವಿಶಾಲ ಮನಸ್ಸಿಗೆ ಶೋಭಿಸುವುದಿಲ್ಲ. '

' ರಾಮನಾಥ, ನೀವು ಅತ್ಯಾಚಾರದಿಂದ ನಡೆಯುತ್ತಿದ್ದೀರೆಂದು ನನ್ನ ಆರೋಪವಿಲ್ಲ. ನನಗೆ ಅನ್ಯಾಯ ಮಾಡುತ್ತಿದ್ದೀರೆಂದು ನನ್ನ ಅಂತಃಕರ ಣಕ್ಕೆ ಆದ ನೋವನ್ನು ವ್ಯಕ್ತ ಮಾಡಿದೆ............ಪುರುಷರಿಗೆ ಪಾತಿವ್ರತ್ಯವನ್ನು ಅಥವಾ ಸಾತೀವ್ರತ್ಯವೆನ್ನಲೊ— ಕಲಿಸಬೇಕೆಂದು ನನ್ನ ಅಪೇಕ್ಷೆಯಿಲ್ಲ. ಪುರುಷರ ಚಂಚಲವೃತ್ತಿ, ಕೃತಘ್ನತೆ ಅವಿಶ್ವಾಸಗಳು ಯಾವ ಮಟ್ಟದವಿರುತ್ತ ವೆಂಬುದು ನನಗೆ ಗೊತ್ತು. '

' ಇದೇನು ವಿದ್ಯಾ? ಪುರುಷರ ಅನುಭವ ಬಹಳ ಬಂದವರ ಹಾಗೆ ಮಾತನಾಡುತ್ತಿದ್ದೀಯಲ್ಲ? '

' ನಿನ್ನ ಕೊಂಕುತನದ ಅರ್ಥವಾಗದಷ್ಟು ಧಡ್ಡಿ ನಾನಿಲ್ಲ ರಾಮ್. '

' ವಿದ್ಯಾ, ನಿನ್ನ ಬಗ್ಗೆ ನಾನು ಒಮ್ಮೆಯಾದರೂ ಅಪನಂಬಿಕೆಯ ಮಾತನ್ನಾಡಿದ್ದೇನೆಯೆ ? '

' ಅಂತೆಯೆ ನಾನೂ ಆಡಬಾರದೆಂದು ನಿಮ್ಮ ಅಭಿಪ್ರಾಯವೆ ? '

' ವಿದ್ಯಾ, ನಿನ್ನ ಮನೋವೃತ್ತಿಯಲ್ಲಿ ಬದಲಾವಣೆ ಬಹಳಾಗಿದೆ ! '

' ನನ್ನನ್ನು ನೋಡುವ ನಿನ್ನ ದೃಷ್ಟಿಯಲ್ಲಿ ಬದಲಾವಣೆ ಬಹಳಾಗಿದೆ. '

' ವಿದ್ಯಾ, ಒಂದು ವಾರಕ್ಕೆ ತಿರುಗಿ ಬರುವೆನೆಂದು ಹೇಳಿ ಪುಣೆಗೆ ಹೋದೆ. ನಿಮ್ಮಣ್ಣನ ಮನೆಯೆಂದೆ. ನಿಮ್ಮಕ್ಕ ಬರುವವಳೆಂದೆ....ನಿಮ್ಮಣ್ಣನ ಪರಿಚಯು ಕೂಡ ನನಗಿಲ್ಲವಲ್ಲ. '

'ನಿಮ್ಮಣ್ಣನ ಪರಿಚಯುವಾದರೂ ನನಗೆಲ್ಲಿದೆ ರಾಮ್? ನಿಮ್ಮ ಮನೆತನ ವೇನೊ ನಿನ್ನ ಪೂರ್ವೇತಿಹಾಸವೇನೊ—ನಾನಾದರೂ ನೋಡಿದ್ದೇನೆಯೆ ? '

'ವಿದ್ಯಾ, ನಿಮ್ಮೂರು ಮಂಗಳೂರು ಎಂದು ಹೇಳಿದೆ, ಈಗ ನಿಮ್ಮೂರು ಪುಣೆಯಾಗಿದೆ. ನಾಳೆ....'

" ರಾಮ್ ಬಹಳ ದಾರಿ ತಪ್ಪಿ ಮಾತನಾಡುತ್ತಿರುವಿ. ನನ್ನ ವಂಶಾವಳಿ, ನನ್ನ ಕುಲಗೋತ್ರ, ನನ್ನ ಜನ್ಮಕುಂಡಲಿಗಳನ್ನು ನೋಡಿ ಮಾಡಿ ಕೊಳ್ಳುವುದಿದ್ದರೆ ನನ್ನೊಡನೆ ರಜಿಸ್ಟರ ವಿವಾಹವೇಕೆ ಬೇಕಾಗಿತ್ತು ? '

" ವಿದ್ಯಾ, ನಿನ್ನೊಡನೆ Courting (ಬೇಟ) ಮಾಡಿದ್ದು ಸಹ ಅಲ್ಪವೆ. ರಜಿಸ್ಟರ ವಿವಾಹಕ್ಕೆ Courting ಆದರೂ ಇರುತ್ತದೆ. ವಿದ್ಯಾ,ನನ್ನ ಪ್ರಮಾದ ವನ್ನು ಒಮ್ಮೆ ಒಪ್ಪಿಕೊಂಡುಬಿಡುತ್ತೇನೆ. ನನಗೆ ದೇಹದ ಹಸಿವೂ, Flesh appitite ಎನ್ನುವರಲ್ಲ ಅದು ನಿನ್ನ ಕೈ ಹಿಡಿಯ ಹಚ್ಚಿತು. ಮುಂಬಯಿ ಯಂತಹ ಮಹಾ ಸಮುದ್ರದಲ್ಲಿ ನೀರು ಕಾಣದ ಮೀನಿನಂತೆ ಕಂಗಾಲಾಗಿ ತಿರುಗುತ್ತಲಿದ್ದೆ. ದೇಹಸೌಖ್ಯದ ಹಪಹಪಿ ನನ್ನನ್ನು ದುರ್ಬಲನನ್ನಾಗಿ ಮಾಡಿತು. ಜಾನಕಿಯ ವಿರಹವೇದನೆಯನ್ನು ಮರೆಯುವುದಕ್ಕೆ ಅನುಕೂಲ ವಾದರೂ ಆಗಲೆಂದು...."

‘ ರಾಮ್, ರಾಮ್ ಏನೆಂದೆ ? ಜಾನಕಿಯ ವಿರಹ ? ಜಾನಕಿ ಯಾರು ರಾವುಲ್ ?.... ಅಯ್ಯೋ ನಾನು ಕೆಟ್ಟೆ, ಕೆಟ್ಟೆ. ನಾನು ಕೆಟ್ಟೆ. ದೇವರೆ ಈ ಪುರುಷರ ಆಳ ಕೊನೆಗೂ ನನಗೆ ನಿಲುಕದೆ ಹೋಯಿತೆ ? ” ಎಂದು ಹುಚ್ಚಿಯಂತೆ ಹುಚ್ಚೆದ್ದು ಹರಿದಾಡಿದಳು. ಹೊದ್ದುಕೊಂಡ ಚಾದರವನ್ನು ಕಿತ್ತು ಚೆಲ್ಲಿದಳು. ತಲೆಗಿಂಬಿಗೆ ಕೈ ಅಪ್ಪಳಿಸಿ ಬಿಕ್ಕಿ ಬಿಕ್ಕಿ ಅಳಹತ್ತಿದಳು.

‘ ಇದೇನು ವಿದ್ಯಾ, ಹೀಗೇಕೆ ಹುಚ್ಚಿಯಂತೆ ಮಾಡುವೆ ? ’

‘ ಹುಚ್ಚುಹಿಡಿಸಿ ಮತ್ತೆ ನನಗೇ ಪ್ರಶ್ನೆ ಮಾಡುತ್ತೀಯಲ್ಲ ಬಹು ಸಂಪನ್ನನಂತೆ ? ’

‘ ವಿದ್ಯಾ, ನಿನ್ನ ಮಾತಿನ ಅರ್ಥವಾಗುತ್ತಿರುವುದಿಲ್ಲ ನನಗೆ. ’

‘ ನಿನ್ನ ಮನಸ್ಸಿನ ಅರ್ಥವಾಗುತ್ತಿರುವುದಿಲ್ಲ ನನಗೆ. ’

‘ ನನ್ನ ಮನಸ್ಸು ಕನ್ನಡಿಯಂತಿದೆಯೆಂದು ಹೇಳಿದರೆ ನೀನೇಕೆ ನಂಬುವುದಿಲ್ಲ ವಿದ್ಯಾ? ನಿನಗಿಂತಲೂ ನಾನು ನನ್ನ ವಿವೇಕಕ್ಕೆ ಹೆಚ್ಚು ಅಂಜುತ್ತೇನೆ.’

‘ ವಿವೇಕವಂತರೂ ಏನೋ ‘ಜಾನಕಿಯ ವಿರಹ’ ಎಂದು ನುಡಿದಿರಲ್ಲ?’

‘ ವಿದ್ಯಾ, ಜಾನಕಿಯೆಂದರೆ ನನ್ನ ಪಾಲಿನ ದೇವತೆ. ನನ್ನನ್ನಗಲಿ ನಡು ನೀರಿನಲ್ಲಿ ಕೈಬಿಟ್ಟು ಕಣ್ಮರೆಯಾದ ನನ್ನ ಅರ್ಧಾಂಗಿ, ಧರ್ಮಪತ್ನಿ!...... ಜಾನಕಿಯೆಂದರೆ ವ್ಯಭಿಚಾರಕ್ಕಾಗಿ ಟ್ರಾಮು ಬಸ್ಸುಗಳಲ್ಲಿ ಪ್ರಣಯದಾಟ ಹೂಡಿದ ಯಾವುದೇ ಬೆಲೆವೆಣ್ಣಲ್ಲ.’ ಎಂದು ಎಷ್ಟು ಕೋಪದಿಂದ ಮಾತಾಡಿದನೋ ಅಷ್ಟೇ ದುಃಖದಿಂದ ಬಿಕ್ಕಿಬಿಕ್ಕಿ ಕಂಬನಿಗರೆದನು ರಾಮನಾಥ.

ವಿದ್ಯಾ ಬಹಳ ಶಾಂತಳಾಗಿ ರಾಮನಾಥನನ್ನು ಮಾತನಾಡಿಸಿದಳು— ‘ ರಾಮ್, ಒಮ್ಮೆಯಾದರೂ ನನ್ನ ಮುಂದೆ ನೀನು ಒಪ್ಪಿಕೊಂಡಿದ್ದೀಯಾ.... ನಾನು ಹಿಡಿದ ಈ ನಿನ್ನ ಕೈ ಎಂಜಲದ್ದೆಂದು ?......... I have accepted a hand that is a Second-hand !............’

“ ಹೌದು ವಿದ್ಯಾ. Second-hand ಗಂಡನನ್ನು ನೀನು ಕೈಹಿಡಿದೆ. ಇನ್ನೂ ಹೇಳುವೆ ನಿನ್ನ ಸವತಿಗೆ ಮಗನೂ ಒಬ್ಬನಿದ್ದಾನೆ. ಇನ್ನು ಮೇಲೆ ನಿನಗೆ ಯಾವುದೇ ಅವಿಶ್ವಾಸ ಬೇಡ. ಟ್ರಾಮಿನಲ್ಲಿ ವೈಕೈಗಳ ತಿಕ್ಕಾಟದಿಂದ ಛಕಮಕಿಸಿ ಹುಟ್ಟಿದ ಪ್ರೇಮ ನಮ್ಮದು. ಅಂತೆಯೆ ಇದಕ್ಕೆ ನೈತಿಕ ಹಿನ್ನೆಲೆ

ಯಿಲ್ಲ; ಸಂಸ್ಕೃತಿಯ ಬೆಂಬಲವಿಲ್ಲ; ಹಿಂದುಮುಂದಿನ ಗೊತ್ತುಗುರಿಯಿಲ್ಲ. ಮುಂಬಯಿ ಪೇಟೆಯಲ್ಲಿ ಕೊಂಡುಕೊಂಡ ಪ್ರೀತಿಯ ಸರಕು ಇದು........'

" ನನಗೆ ನೀನು ಹೀಗೆ ಮೋಸ ಮಾಡಬಾರದಾಗಿತ್ತು. "

' ಪುರುಷರ ಸಾಮಾನ್ಯ ಚಿತ್ತಚಾಂಚಲ್ಯದ ಮೇಲೆ ವ್ಯಾಖ್ಯಾನ ಹೇಳಿದೆಯಲ್ಲ ವಿದ್ಯಾ, ಯಾವ ಅನುಭವದ ಮೇಲಿಂದ ಹೇಳಿದೆ ? '

' ಹೇಳುತ್ತೇನೆ ರಾಮನಾಥ, ಹೇಳುತ್ತೇನೆ. ನಿನ್ನ ಹಾಗೇ ರೇಶನ್ ಖಾತೆಯೊಳಗೆ ಒಬ್ಬ ಯುವಕ ನನ್ನ ಕೈ ಹಿಡಿಯಲು ಬಂದಿದ್ದ; ತಾನಿನ್ನೂ ಅವಿವಾಹಿತನೆಂದೇ ಹೇಳಿ ಕೈ ಹಿಡಿಯಬೇಕೆಂದ. ಕೈ ಸುಟ್ಟುಕೊಳ್ಳುವ ಮೊದಲೇ ಗೊತ್ತಾಯಿತು, ಆತ ಮೂರು ಮಕ್ಕಳ ತಂದೆಯಾಗಿದ್ದ ಲಫಂಗ ಎಂದು............ನಿನ್ನ ಕೈಹಿಡಿಯುವ ಮೊದಲೆ ನಿನ್ನನ್ನೂ ಕಂಡು ದು ಟ್ರಾಮಿನಲ್ಲಿ. ಹೌದು ಮುಂಬಯಿ ಪೇಟೆಯಲ್ಲಿ ಶೇರಬಜಾರಿನಲ್ಲಿ ಕೊಂಡುಕೊಂಡ ಸರಕು ಎಂಬುದನ್ನು ನಾನೂ ಬಲ್ಲೆ. ಆದರೆ ಅಲ್ಪವೇಳೆಯಲ್ಲೇ ನಿನ್ನ ಹೃದಯ ಒಳ್ಳೆಯದೆಂದು ಕಂಡುಕೊಂಡೆ. ನಿನ್ನಲ್ಲಿ ನೀಚತನವಿಲ್ಲೆಂಬುದನ್ನು ಅರಿತುಕೊಂಡೆ. ಸಾಲದುದಕ್ಕೆ ನೀನು ಕನ್ನಡ ಮಾತನಾಡಿದೆ. ನಿನ್ನ ನಯ-ವಿನಯಗಳಿಗೆ ಮುಗ್ಧಳಾದೆ. ಆದರೆ ಹೀಗೆ ಮೋಸ ಹೋಗುವೆನೆಂದು ನಾನರಿತಿರಲಿಲ್ಲ. '

' ಎಂಥ ಮೋಸ ಮಾಡಿ ನಿನ್ನ ಪಾಪವನ್ನು ಕಟ್ಟಿಕೊಂಡೆ ಹೇಳು ವಿದ್ಯಾ? ಇದ್ದ ಹೆಂಡತಿಯ ಮೇಲೆ ಇನ್ನೊಬ್ಬಳ ಕೈಹಿಡಿದು ಕಡಲಲ್ಲಿ ಮುಳುಗಿಸಿಲ್ಲವಷ್ಟೆ ?...........'

' ಇದ್ದ ಹೆಂಡತಿಯ ಮೇಲೆ ಇನ್ನೊಬ್ಬಳ ಕೈಹಿಡಿಯುವ ಕಾಯಿದೆ ಇಲ್ಲವೆಂದು ನಿರುಪಾಯರಾಗಿರಬಹುದು ಗಂಡಸರು. ಹೆಂಗಸರ ಕೈವಾರಿಯಾಗಿ ಲೀಲಾವತಿ ಮುನ್ಶಿ ಅಷ್ಟಾದರೂ ಪುಣ್ಯ ಕಟ್ಟಿಕೊಂಡಿದ್ದಾಳೆ. '

' ಹೌದು. ವಿಧುರನು ಮದುವೆಯಾಗಬಾರದೆಂದು ಕಾಯಿದೆ ಮಾಡಿಲ್ಲವಷ್ಟೆ ಸರಕಾರ ? '

' ಅದಕ್ಕೆ ಸರಕಾರದ ಕಾಯಿದೆ ಬೇಡ. ನಿನ್ನ ಜಾನಕಿಯೆಂದು ಹೇಳಿದೆಯಲ್ಲ ಅವಳ ಮೇಲಿನ ನಿನ್ನ ಪ್ರೇಮನಿಷ್ಠೆಯಿದ್ದರೆ ಅಷ್ಟೇ ಸಾಕು ! '

ಅಂತಃಕರಣದೊಳಗೆ ಎಲ್ಲಿಯೋ ಒಂದು ಮೂಲೆಯಲ್ಲಿ ಮುಳ್ಳು ಚುಚ್ಚಿದಂತಾಯಿತು ರಾಮನಾಥನಿಗೆ. ಗದ್ಗದಿಸುತ್ತ ಹೇಳಿದ :

' ಹೌದು. ನೀನು ಹೇಳಿದ ಮಾತು ನಿಜ. ನಾನು ಪಾಪಿ ! ನಾನು ಜಾನಕಿಗೆ ನಿಷ್ಠೆ ತೋರಲಿಲ್ಲ....ನಾನು ಪಾಪಿ! ನಾನು ಛಬಿಯ ಮುಂದೆ ನನ್ನ ವಿವೇಕವನ್ನನುಸರಿಸಲಿಲ್ಲ. ಛಬಿಯ ಬಗ್ಗೆ ನನ್ನಲ್ಲಿ ಪಾಪದ ವಿಚಾರ ಸುಳಿದು ಹೋಗಿತ್ತು....ನನಲ್ಲಿ ನೀತಿಮತ್ತೆ ಔಷದಕ್ಕೂ ಇಲ್ಲ. ನನ್ನಲ್ಲಿ ಸಾತ್ವಿಕತೆಯೆಂಬುದಿಲ್ಲ, ಸಂಸ್ಕೃತಿಯೆಂಬುದಿಲ್ಲ........'' ರಾಮನಾಥ ತಲೆ ಹಿಡಿದುಕೊಂಡು ಸ್ವಸ್ಥ ಕುಳಿತುಬಿಟ್ಟ........ಛಬಿಯೆಂದ ಮಾತು ನೆನಪಾಯಿತು—'ರಾಮ್ ತುಮಚಾ ಮನ ಶುದ್ಧ ಆಹೆ! Mahatma became a Mahatma by admitting his own follies'......ಅಲ್ಪ ಪಾಪಕ್ಕೂ ಅನುಭವಿಸುತ್ತಿರುವ ಪಶ್ಚಾತ್ತಾಪವೇ ಸಾಕು, ರಾಮನಾಥನು ಪಶುಮಾನವನಲ್ಲ, ಮಾನವನೆಂದು ಸಾರಿ ಹೇಳುವುದಕ್ಕೆ. ಇದು ವಿದ್ಯಾವತಿಗೆ ಹೊಳೆಯಿತೋ ಇಲ್ಲವೊ. ಉಕ್ಕಿ ಬರುತ್ತಿರುವ ದ್ವೇಷವನ್ನು ಸ್ವಲ್ಪ ಬಿಗಿ ಹಿಡಿದು ವಿದ್ಯಾ ರಾಮನಾಥನ ಬಳಿಗೆ ಬಂದು ಕೇಳಿದಳು : ' ನಿನ್ನ ಮನಸ್ಸು ಕನ್ನಡಿಯಂತಲ್ಲವೆ ? ಕನ್ನಡಿಯಲ್ಲೇ ಕಂಡುಬಂದಿತಲ್ಲ ನಿನ್ನ ಪಾಪದ ಮಸಿ....ನಿಮ್ಮ ವಿವೇಕಕ್ಕೆ ಅಂಜಿದಿರೊ ಇಲ್ಲವೊ, ನನಗಾದರೂ ಅಂಜಿದಿರಿ ಸಾಕು. '

' ವಿದ್ಯಾ, ನನ್ನ ಹೊಟ್ಟೆಯನ್ನು ಹರಿದು ಒಳಗಿನ ಗುಟ್ಟನ್ನು ಬಯಲಿಗಿಟ್ಟಿದ್ದೇನೆ. ಛಬಿಯೊಂದಿಗೆ ನಾನು ಪಾಪದ ವ್ಯಾಪಾರವನ್ನೇನೂ ಮಾಡಿಲ್ಲ. ಮಾನವಸ್ವಭಾವಕ್ಕೆ ಸಹಜವಾಗಿ ಉದ್ಭವಿಸಿದ ಭಾವನೆಗಳನ್ನು ಅವಳ ಮುಂದೆ ಯಾವ ಪಶ್ಚಾತಾಪ ಮನಸ್ಸಿನಿಂದ ಹೇಳಿದೆನೊ ಅಷ್ಟೇ ಪಶ್ಚಾತಾಪ ಮನಸ್ಸಿನಿಂದ ನಿನ್ನ ಮುಂದೆ ಹೇಳಿದೆ. ನೀನು ಅದನ್ನೆ ನಿನ್ನ ಬಂಡವಾಳ ಮಾಡಿಕೊಂಡು ನನ್ನ ಮೇಲೆ ಎರಗಿಬೀಳುತ್ತಿದ್ದೀ....ಪುಣೆಯಲ್ಲಿ ಇಷ್ಟು ದಿನ ನೀನೇನು ಮಾಡಿದೆಯೆಂಬುದಕ್ಕೆ ಮಾತ್ರ ಮೌನಮುದ್ರೆ. '

' ಓಹೊ! ಈಗ ನನ್ನ ಮೇಲೆ 'table turn'...ಮಾಡುತ್ತಿದ್ದೀರಾ?....'

' Table turn ಮಾಡುತ್ತಿರುವುದಿಲ್ಲ. ಮಹಾತ್ಮಾಜಿಯವರ ಫೋಟೊ ನಿನ್ನ ಕೈಯಲ್ಲಿ ಕೊಡುತ್ತಿದ್ದೇನೆ....' ಎಂದು ಗೋಡೆಗೆ ತಗುಲಿಸಿದ ಫೋಟೊ ವಿದ್ಯಾವತಿಯ ಕೈಗೆ ಕೊಟ್ಟು ' ವಿದ್ಯಾ, ಈ ಹೊತ್ತು ಇಬ್ಬರದೂ ಪ್ರಾಮಾಣಿಕ

ಒಪ್ಪಿಗೆಯಾಗಿ ಹೋಗಲಿ. ಯಾರ ಮನಸ್ಸು ಎಷ್ಟು ಪವಿತ್ರವಾಗಿದೆ, ಎಷ್ಟು ಪಾಪಪೂರಿತವಾಗಿದೆಯೆಂಬುವರ ನಿರ್ಣಯವಾಗಿಬಿಡಲಿ. ಹೇಳು ವಿದ್ಯಾ, ನಿನ್ನ ಆತ್ಮಸಾಕ್ಷಿಯಾಗಿ ಹೇಳು. ನಿನ್ನ ವಿವೇಕವನ್ನು ವಿಚಾರಿಸಿ ಹೇಳು....'

' ಹುಂ! ಎರಡನೆಯ ಸಂಬಂಧವೆಂದು ನುಡಿಯುತ್ತಿರುವ ನಾಲಗೆ ಪವಿತ್ರವೆಂದು ಮಹಾತ್ಮರ ಸಾಕ್ಷಿಯಾಗಿ ಸಾರುವುದೇ? ಛಬಿಯೊಂದಿಗೆ ಪಾಪದ ಭಾವನೆಗಳನ್ನು ತಾಳಿದ್ದೇನೆಂದು ಸಾರುವ ನಾಲಗೆ ಪವಿತ್ರವೆಂದು ಮಹಾತ್ಮರ ಸಾಕ್ಷಿಯಾಗಿ....'

' ವಿದ್ಯಾ, ಎರಡನೆಯ ಸಂಬಂಧವೆಂದು ಒಪ್ಪಿಕೊಂಡಿರುವೆ. ಛಬಿಯೊಂದಿಗೆ ಹುಟ್ಟಿದ ಹುಚ್ಚುಭಾವನೆಗಳನ್ನೂ ಒಪ್ಪಿಕೊಂಡಿರುವೆ. ಮಹಾತ್ಮರ ಸಾಕ್ಷಿಯಾಗಿ ಈಗ ಒಪ್ಪಿಕೊಳ್ಳುತ್ತಿದ್ದೇನೆ, ಇನ್ನುಮುಂದೆ ಇಂತಹ ಪಾಪದ ಹಾದಿ ತುಳಿಯಬಾರದು ಎಂದು. ಹೇಳು, ಹಾಗೆ ಒಪ್ಪಿಕೊಂಡು ಒಳ್ಳೇ ಮಾರ್ಗ ಹಿಡಿಯುವ ನಿರ್ಮಲ ಅಂತಃಕರಣ ನಿಃಸ್ವಾರ್ಥ ಪ್ರೇಮ ನಿನ್ನಲ್ಲಿದೆಯೆ?....'

' ರಾಮ್! ನಾನು ಹೇಳಿಲ್ಲವೆ, ಪುರುಷರಲ್ಲಿ ನನಗೆ ನಂಬಿಗೆಯಿಲ್ಲ ಎಂದು? ಗಂಡಸು ಮಾಡಿದ ಪಾಪ ಅವನು ಒಡೆದು ಹೇಳದ ಹೊರತು ಗೊತ್ತಾಗುವುದಿಲ್ಲ. ಹೆಂಗಸು ಮಾಡಿದ ಪಾಪದ ಕೃತಿ ಅವಳ ದೇಹದೊಂದಿಗೆ ಅಂಟಿಕೊಂಡು ಬೆಳೆಯುತ್ತದೆ. ಅದನ್ನು ಮತ್ತೆ ಬಿಚ್ಚಿ ಹೇಳಬೇಕಾದ ಅಗತ್ಯವಿರುವುದಿಲ್ಲ.'

' ವಿದ್ಯಾ, ಬಹಿರಂಗವಾಗಿ ತೋರ್ಗೊಡದೆ ಅನೀತಿಗೆಳಸುವುದೂ ಸಾಧ್ಯವಿದೆ.'

ವಿದ್ಯಾ ಮಹಾತ್ಮಾಜಿಯವರ ಫೋಟೊ ಧೊಪ್ಪನೆ ಕೆಳಗೊಗೆದಳು. ರಾಮನಾಥ ಒಮ್ಮೆಲೆ ಅದನ್ನು ಹಿಡಿದೆತ್ತಿದ. ಫೋಟೊಕ್ಕೆ ಘಾಯವೇನೂ ಆಗಿರಲಿಲ್ಲ. ರಾಮನಾಥನಿಗೆ ಬಹಳ ಸಂತಾಪವಾಯಿತು, ದುಃಖವೂ ಆಯಿತು.

' ಯಾರ ಸಿಟ್ಟು ಯಾರ ಮೇಲೆ ವಿದ್ಯಾ? ಕೈಯೊಳಗಿರುವುದು ಬರಿ ಕಾಗದದ ಚಿತ್ರ, ಕಾಜಿನ ಚೌಕಟ್ಟು ಅಲ್ಲವದು; ವಿಶ್ವಮಾನ್ಯಪುರುಷನದು....'

' ವಿಶ್ವಮಾನ್ಯನಿಗೆ ನಾನು ಅವಮಾನ ಬಗೆಯಲಿಲ್ಲ.'

' ನನಗೆ ಬಗೆದೆ ಅಲ್ಲವೆ?'

ವಿದ್ಯಾ ಸುಮ್ಮನಾದಳು. ರಾಮನಾಥನೂ ಸುಮ್ಮನಾದ. ಸಂತತವೂ

ಯಂತ್ರಗಳ ತಿರುಗಣಿಯಿಂದ ಒರಲುವ ಮುಂಬಯಿ ಮಹಾನಗರವು ಶಾಂತ ವಾಗಿ ನಿದ್ರಿಸಿತ್ತು. ದೂರಿಂದ ಸಮುದ್ರದ ತೆರೆಗಳ ಮೊರೆತ ಕೇಳಬರುತ್ತಿತ್ತು. ಆಕಾಶವು ನಿರಭ್ರವಾಗಿತ್ತು. ನಕ್ಷತ್ರಗಳು ಸೂರ್ಯ-ಚಂದ್ರರ ಕಣ್ಣು ತಪ್ಪಿಸಿ ಹೇಗೆ ಬಂದಿದ್ದೇವೆ— ಎಂದು ಕಣ್ಣು ಹೊಡೆಯುತ್ತಿದ್ದುವು. ಅಷ್ಟರೊಳಗೆ ಬಸ್ಸಿನ ಸಪ್ಪಳವಾಯಿತು. ' ಸಿಟಿ.ಲಾಯಿಟ್ ' ಸಿನೇಮದ ಕೊನೆಯ ಶೋ ಮುಗಿಯಿತೆಂದು ಗೊತ್ತಾಯಿತು. ರಾಮನಾಥ ದೀಪ ಆರಿಸಿ ಹಾಸಿಗೆಯ ಮೇಲೆ ಬಿದ್ದುಕೊಂಡ.

*   *   *   *

ರಾಮನಾಥ ಹಾಸಿಗೆಯಿಂದೆದ್ದಾಗ ಸೂರ್ಯನ ಬಲಿತ ಬಿಸಿಲು ಗ್ಯಾಲರಿಯಿಂದ ಹಾಯ್ದುಬಂದು ಮಗ್ಗುಲಾಗಿ ಬಿದ್ದುಕೊಂಡಿತ್ತು. ಕಚೇರಿಗೆ ಹೊತ್ತಾಯಿತೆಂದು ರಾಮನಾಥ ಗಡಿಬಿಡಿಯಿಂದ ಮುಖಕ್ಷೌರಕ್ಕೆ ತೊಡ ಗಿದ. ಹೊರಗೆ ಬೆಲ್ ಬಾರಿಸಿತು. ಬಾಗಿಲು ತೆರೆಯ ಹೋದರೆ ಬಾಗಿಲು ಮುಂದೆ ಆಗಿತ್ತು. ಹಿಂದೆ ಹೊರಳಿ ನೋಡಿದ. ವಿದ್ಯಾ ಹಾಸಿಗೆಯ ಮೇಲಿರ ಲಿಲ್ಲ. ಬಾಗಿಲು ತೆರೆಯುತ್ತಲೆ ಅಂಚೆಯವ ಒಂದು ದಪ್ಪನ್ನ 'Express delivery' ಟಪಾಲು ಕೊಟ್ಟು ಹೋದ. ವಿಳಾಸ ವಿದ್ಯಾವತಿಯದಾಗಿತ್ತು. ಹೀಗೆ ಬೆಳಕಿನಲ್ಲಿ ಹಿಡಿದು ನೋಡಿದ. ಒಳಗಿನ ಅಕ್ಷರಗಳು ಕಾಣಲಿಲ್ಲ. ಒಡೆದು ನೋಡಬೇಕೆಂಬ ಕುತೂಹಲವಾದರೂ ಕೈ ಏಳಲಿಲ್ಲ. ಅದನ್ನು ತನ್ನ ಪರ್ಸಿನ ಮಡಿಕೆಯಲ್ಲಿಟ್ಟು ಕಿಸೆಗೆ ಹಾಕಿದ. ಡ್ರೆಸ್ ಮಾಡಿಕೊಂಡು ಟಾಯಿಮ್ ನೋಡಿದ. ೧೦-೧೮ರ ಫಾಸ್ಟಗಾಡಿಗೆ ಇನ್ನೂ ೨೫ ನಿಮಿಷಗಳಿದ್ದುವು. ಐದು ನಿಮಿಷ ಛಬಿಗಾಗಿ 'spare' ಮಾಡಬಹುದೆಂದರಿತು ತನ್ನ ಮನೆಯ ಬಾಗಿಲು ಕೀಲಿ ಹಾಕಿ ಕೀಲಿಕೈ ಕೊಡುವ ನೆವ ಮಾಡಿಕೊಂಡು ಛಬಿಯ ಮನೆಯ ಬೆಲ್ ಬಾರಿಸಿದ. ಬಾಗಿಲು ಬರಿ ಮುಂದೆ ಮಾಡಿತ್ತು. ಒಳಗೆ ಹೋದ. ಛಬಿಯ ತಮ್ಮ ಐದು ವರುಷದ ಬಾಳನೊಬ್ಬನೆ ಬಣ್ಣದ ಕಟ್ಟಿಗೆಯ ತುಂಡು ಗಳಿಂದ ಮನೆ ಕಟ್ಟುವ ತನ್ನ ಆಟದಲ್ಲಿ ಮಗ್ನನಾಗಿದ್ದ.

' ಛಬಿ ಆಹೆ ಕಾಯ ಬಾಳ್ ? ' ( ಛಬಿ ಇದ್ದಾಳೆಯೇ ? ) ಎಂದು

ರಾಮನಾಥ ಬಾಳನ ಬೆನ್ನಮೇಲೆ ಕೈಯಾಡಿಸುತ್ತ ಕೇಳಿದ. ಬಾಳ ತನ್ನಾಟದೊಳಗೇ ಮಗ್ನನಾಗಿದ್ದ.

'ಬಾಳ ಹೇ ಬಘ' (ಇದು ನೋಡು ಬಾಳ.) ಎಂದು ಕಿಸೆಯೊಳಗಿನ 'ಗಾ:ಗಲ್ಸ' ತೋರಿಸಿದ. 'ಮಲಾ ಪಾಯಿಜೆ, ಮಲಾ ಪಾಯಿಜೆ' (ನನಗೆ ಬೇಕು) ಎಂದು ಬಾಳ ರಾಮನಾಥನ ಮೇಲೆ ಮುಗಿಬಿದ್ದ.

'ತರ ಅಕ್ಕಾಲಾ ಬೋಲೂನ ಆಣ' (ಹಂಗಾದರ ಅಕ್ಕನ್ನ ಕರಕೊಂಡು ಬಾ.) ಎಂದು ಗಾ:ಗಲ್ಸ ಬೆನ್ನಹಿಂದೆ ಹಿಡಿದುಕೊಂಡ ರಾಮನಾಥ.

'ಆಕ್ಕಾ' ಎಂದು ಒಳಗೆ ಹೋಗಿ ಕೂಗಿದನೊ ಇಲ್ಲವೊ, ಅಕ್ಕನಿಂದ ಉತ್ತರದ ಗೋಜಿಗೆ ಸಹ ಹೋಗದೆ ಮತ್ತೆ ಓಡಿ ಬಂದು–'ಮಲಾ ಪಾಯಿಜೆ' ಎಂದು ಮತ್ತೆ ರಾಮನಾಥನ ಕೋಟು ಹಿಡಿದು ಜಗ್ಗತೊಡಗಿದ. ಛಬೆ ಮೈ ತೊಳೆದುಕೊಂಡು ಬಾಯಿಂದ ಸೆರಗಿನ ತುದಿ ಹಿಡಿದುಕೊಂಡು ಬ್ಲೋಜಿನ ಬಿರಡೆ ಹಾಕಿಕೊಳ್ಳುತ್ತ ಹೊರಗೆ ಕಾಲಿಡುವ ಪುರಸೊತ್ತಿಲ್ಲದೆ, ಬಾಳ ಕಣ್ಣಿಗೆ ಗಾ:ಗಲ್ಸ ಹಾಕಿಕೊಂಡು ಕೈಯೊಳಗೊಂದು ಸಣ್ಣ ಕೋಲು ಹಿಡಿದುಕೊಂಡು ಸ್ಟಂಟ ಚಿತ್ರಪಟದ ಸನ್ನಿವೇಶವನ್ನನುಸರಿಸುತ್ತ 'ಠೇರ್!' ಎಂದು ಕುರ್ಚಿಯಿಂದ ಜಿಗಿದು 'ಪಾಯಿಂಟಾಪ್ ರಾಲರ ಹ್ಯಾಂಚಪ್' (ಪಾಯಿಂಟ ಆಫ್ ರಿವ್ಹಾಲವ್ಹರ ಹ್ಯಾಂಡ್ಸ ಅಪ್) ಎಂದು ಛಬೆಗೆ ಗಂಟುಬಿದ್ದ. ಬ್ಲೋಜಿನ ಬಿರಡೆ ಹಾಕಿಕೊಳ್ಳುವ ಅವಸಾನವನ್ನೂ ಸಹ ಕೊಡದೆ ಛಬೆಗೆ 'ಹ್ಯಾಂಚಪ್' ಎಂದು ಗಂಟುಬಿದ್ದ. ಅಂತೂ ಛಬೆ ಕೈ ಮೇಲಕ್ಕೆತ್ತಬೇಕಾಯಿತು. ರಾಮನಾಥನಿಗೆ ನಗೆ ಬಂತು. ಛಬೆ ಛಟ್ಟನೆ ಕೈ ಕೆಳಗೆ ಬಿಟ್ಟಳು.

'ಬಗಾ ಕಿತಿ ಚಾವಟ ಆಹೆ' (ನೋಡ್ರಿ ಎಂಥಾ ಲುಚ್ಚಾ ಇದ್ದಾನ!) ಎಂದು ಮೆಲ್ಲನೆ ಬಾಳನ ತಲೆಗೊಂದು ಏಟು ಕೊಟ್ಟು 'ಬಸ್, ಆತ್ತಾ ಚಲ' (ಸಾಕು ನಡಿ ಇನ್ನ.) ಎಂದು ಗಾ:ಗಲ್ಸ ಕಸಿದುಕೊಂಡಳು. ಅವನ ಕಾಟ ತಪ್ಪಿಸಿಕೊಳ್ಳಲು ಅವನ ಕೈಗೊಂದು ಬಿಸ್ಕೀಟು ಹಚ್ಚಿದಳು. ಗಾ:ಗಲ್ಸ ರಾಮನಾಥನ ಕೈಗೆ ಹಚ್ಚಿ 'ತುಮಚ ಹೋಯ? ದಾಖವೂ ನಕಾ ತ್ಯಾಲಾ' (ನಿಮ್ಮವಽ? ಅವಗೆ ತೋರಿಸಬ್ಯಾಡ್ರಿ.) ಎಂದಳು.

'ರಾಹುದೆ ಇಥಚ, ತ್ಯಾಲಾ ಕಾಯ್.' (ಇಲ್ಲೆ ಇರವಲ್ಲವ್ಯಾಕ, ಅವಕ್ಕೇನು.)

'ಮ್ಹಣಜೆ ಪುನಃ ಹಾ ಚಾವಟ ದುಸರ್‍ಯಾಂಚಾ ಸಮೋರ 'hands up' ಮ್ಹಣೂನ ಏತೊ. stunt pictureಚ ವೇಢ ಲಾಗಲ ಆಹೆ ತ್ಯಾಲಾ.' (ಅಂದ್ರ, ಮತ್ತ ಈ ಲುಚ್ಚಾ, ಮಂದೀ ಎದುರಿಗೆಲ್ಲಾ 'ಹ್ಯಾಂಜ್ ಅಪ್' ಅನಕೋತ ಬರತಾನ. ಸ್ಟಂಟ ಚಿತ್ರದ ಹುಚ್ಚು ಹಿಡಿದದ ಅವಗ.)

'ಛಬೆ, ಮೀ ತರಿ ದುಸರಾ ನಾಹಿ ನಾ?' (ಛಬೆ, ನಾನಾರೆ ಏನು, ಹೊರಗಿನವನೇನು?)

'ತುಮ್ಹಾಲಾ ಕಸ ವಾಟತ?' (ನಿಮಗ ಹ್ಯಾಂಗ ಅನಸತದ?)

'ನಾಹಿ ಮ್ಹಣೂನ.' (ಅಲ್ಲ ಅಂತ.)

'ತರ ನಾಹಿ.' (ಹಂಗಾದರ ಅಲ್ಲ.)

'ಛಬೆ, ಏಕ ಗೋಷ್ಟ ಸಾಂಗಾಯಚ ಆಹೆ. ಅತ್ತಾ ಮಲಾ ವೇಳ ನಾಹಿ. ದುಪಾರಿ 'half day leave' ಸಾಂಗೂನ ಏತೊ.' (ಛಬೆ, ಒಂದು ಮಾತು ಕೇಳಬೇಕಾಗೇದ. ಈಗ ಹೊತ್ತಿಲ್ಲ. ಮಧ್ಯಾನ್ಹ ಅರ್ಧದಿವಸದ ರಜ ತಗೊಂಡು ಬರತೇನಿ, ಆಂ.)

'ವಿಶೇಷ ಕಾಯ?' (ಏನಾದರೂ ವಿಶೇಷ.......)

'ಪುಷ್ಕಳ ಆಹೆ.' (ಹುಂ. ಬಹಳ ಅದ.)

'ಬರ.' (ಆಗಲಿ.)

ರಾಮನಾಥ ಹೋಗುವ ಹೊತ್ತಿಗೆ ಬಾಳ ಬಿಸ್ಕೀಟ ಮುಗಿಸಿ ಮತ್ತೆ ಬಂದು—'ಮಲಾ ತೇ ಪಾಹಿಜೆ.' ಎಂದ.

'ಅರೇS!' ಎಂದು ಛಬೆ ಕಣ್ಣು ತೆರೆದಳು.

ರಾಮನಾಥ ಗಾಗಲ್ಸ ಬಾಳನ ಕೈಗೆ ಕೊಟ್ಟುಬಿಟ್ಟ.

'ಕಾಯ ಪುನಃ ಕಾಬೂಲಿವಾಲಾಚ ಆಠವಣ ಝಾಲ ವಾಟತ?' (ಯಾಕ, ಮತ್ತ ಕಾಬೂಲಿವಾಲಾನ ನೆನಪು ಆತು ಕಾಣಸತದ)

'ಹೋ. ತೇಚ ಸಾಂಗಾಯಚ ಆಹೆ.' (ಹೌದು, ಅದನ್ನೇ ಹೇಳಬೇಕಾಗಿದೆ.)

'ಬರ ಕಿತಿ ವಾಜತಾ ಯೇಣಾರ?' (ಆಗಲಿ. ಎಷ್ಟೊತ್ತಿಗೆ ಬರುವವರು?)

‘ ತುಮ್ಹಾಲಾ ಅಣಖಿ ಕಾಮ ಆಹೆ ? ’ ( ಇನ್ನೂ ಏನಾದರೂ ಕೆಲಸ ಇದೆಯೇನು ? )

‘ ಉದ್ಯಾ ಕಾಕಾ ಘರಿ ಏಣಾರ. ಥೋಡಾ ತಯಾರಿ. ಆಜ ಪುನಃ ದವಾಖಾನಾಲಾ ಜಾವಲಾಗೇಲ. ’ ( ನಾಳೆ ಕಾಕಾ ಮನಿಗೆ ಬರುವವರಿದ್ದಾರೆ. ಸ್ವಲ್ಪ ತಯಾರಿ ಮಾಡಬೇಕಾಗಿತ್ತು. ಇವತ್ತ ಮತ್ತ ದವಾಖಾನೆಗೆ ಹೋಗಬೇಕು. )

‘ ಬಽರ ಆಸ್ಪಿಟಲ್‌ಹೂನ ಕಿಂಗ್ಸ ಸರ್ಕಲ್ ಕಡೆ ಜಾವೂ. ’ ( ಹುಂ. ದವಾಖಾನೆಯಿಂದ ಹಾಂಗಽ ಕಿಂಗ್ಸ ಸರ್ಕಲ್ ಕಡೆಗೆ ಹೋಗೋಣ. )

ರಾಮನಾಥ ಎಷ್ಟು ಧಾವಿಸಿದರೂ ಟಿಳಕಬ್ರಿಜ್ಜಿಗೆ ಬರುವುದಕ್ಕೇ ೧೦-೧೮ರ ಫಾಸ್ಟಗಾಡಿ ಮೆಲ್ಲನೆ ಮುಂದುವರಿದು ವೇಗಗೊಂಡು ಓಡಿತು. ಮತ್ತೆ ಪ್ಲ್ಯಾಟಫಾರ್ಮ ಬದಲಿಸಿ ೧೦-೨೦ರ ಸ್ಲೋ ಗಾಡಿ ಹಿಡಿಯಬೇಕೆಂದು ಆಚೆಗೆ ಗಡಬಡಿಸಿದ. ಸ್ಲೋ ಗಾಡಿ ಆದುದರಿಂದ ಕೂಡುವುದಕ್ಕೂ ಸ್ವಲ್ಪ ಸ್ಥಳ ಸಿಕ್ಕಿತು. ಕಚೇರಿಗೆ ಸ್ವಲ್ಪ ತಡವಾಗಬಹುದೆಂದೆನಿಸಿದರೂ ಗಾಡಿಯಲ್ಲಿ ಇಪ್ಪತ್ತು ನಿಮಿಷ ‘ Privacy......Privacy ಎಂದರೇನು ತನ್ನಷ್ಟಕ್ಕೆ ತಾನು ಕೂಡಲಿಕ್ಕೆ, ಓದಲಿಕ್ಕೆ ಸಮಯ, ದೊರಕುವುದಲ್ಲಾ ಎಂದು ಸಮಾಧಾನವೂ ಆಯಿತು. ಗಾಡಿ ದಾದರ ಬಿಡುತ್ತಲೆ ಒಳಕಿಸೆಯೊಳಗಿನ ಪತ್ರವನ್ನು ಒಡೆದು ಬಿಟ್ಟ. ಎಡಬಲಕ್ಕೆ ಅರಿಯದವರಿದ್ದರೂ ಒಮ್ಮೆ ಅವರ ಮುಖ ನೋಡಿದ. ಅವರೂ ಇವನಂತೇ ಅಂದಿನ ಪೇಪರ ಓದುವುದರಲ್ಲಿ ಮಗ್ನರಾಗಿದ್ದುದರಿಂದ ಇವನಿಗೆ ಕಾಗದ ಓದಿಕೊಳ್ಳಲಿಕ್ಕೆ ಅನುಕೂಲವಾಯಿತು.

ಡೆಕ್ಕನ್ ಜಿಮಖಾನಾ
ಪುಣೆ ೪
...............

Beloved Vidya,

ಪ್ರೇಮಿಯಂತೆ ಮಾತ್ರ ನಿನಗೂ ‘beloved’ ( ಪ್ರಿಯ )....ಎಂದು ಬರೆಯುವ ಅಧಿಕಾರವಿದೆ ವಿದ್ಯಾ. ಅಂತೆಯೇ ನೀನು ತಪ್ಪು ತಿಳಿಯಲಾರಿ ಎಂದುಕೊಂಡು ಹಾಗೆ ಬರೆದಿದ್ದೇನೆ. ‘Orthodoxy’, ಸಂಕುಚಿತ ಬುದ್ಧಿ

ಮಹಿಳೆಯರ ಪ್ರಗತಿಯಲ್ಲಿ ಅಡ್ಡ ಬರುತ್ತವೆ. 'Education and orthodoxy do not go together.'

ಅದಿರಲಿ ವಿದ್ಯಾ, ಈ ಪತ್ರ ನಿನ್ನ ಕಚೇರಿಯ ವಿಳಾಸಕ್ಕೇ ಬರೆಯ ಬೇಕೆಂದು ಮಾಡಿದ್ದೆ. ಆದರೆ 'ರೇಶನ್' ಕಚೇರಿಯೆಂದರೆ ಒಂದು 'fish market' (ಮೀನದ ಪೇಟೆ) ಇದ್ದ ಹಾಗೆ. ನಿನ್ನ 'Personal' (ವೈಯ ಕ್ತಿಕ) ಪತ್ರಗಳನ್ನು ನಿಮ್ಮ ಯಜಮಾನರು ಒಡೆಯುವುದಿಲ್ಲ ಎಂದು ನೀನು ಹೇಳಿದ್ದರಿಂದ ಇನ್ನು ಮೇಲೆ ಮನೆಯ ವಿಳಾಸಕ್ಕೇ ಬರೆಯಬೇಕೆಂದು ಮಾಡಿ ದ್ದೇನೆ. 'ಮದುವೆಯಾದರೇನಾಯಿತು, ನಮ್ಮ ಸ್ನೇಹಸಂಬಂಧಕ್ಕೆ, ಸ್ವಾತಂ ತ್ರ್ಯಕ್ಕೆ ಏನೂ ಆತಂಕ ಬರಲಾರದು' ಎಂದು ನೀನು ಹೇಳಿದುದು ನೆನಪಿದೆ ಯಷ್ಟೆ?

ನಿನ್ನ 'Hobbies' ಬೆಳೆಯಿಸಿಕೊಳ್ಳುವುದನ್ನೂ ನೀನು ಬಿಡಬೇಡ ವಿದ್ಯಾ 'As a friend' (ಗೆಳತಿಯೆಂದು) ನಿನಗೆ ಇದರಲ್ಲಿ ಎಷ್ಟು ಬಗೆಯ ಸಹಾಯ ಬೇಕೊ ಅಷ್ಟು ಮಾಡಲು ನಾನು ಸಿದ್ಧ. ಅದು ನನ್ನ ಕರ್ತವ್ಯ ವೆಂದು ತಿಳಿಯುತ್ತೇನೆ. ಫೋಟೊ 'ಸ್ನ್ಯಾಪ್' ತೆಗೆಯಲು ಅವಶ್ಯ ಕಲಿಸು ತ್ತೇನೆ.

ಹಾ! ನಿನ್ನ ಸಂಗೀತಸಾಧನೆ ಎಲ್ಲಿಗೆ ಬಂತು? 'ಗಂಧರ್ವವಿದ್ಯಾಲಯ' ಕ್ಕಾಗಿ ಗಿರಗಾವಿನ ವರೆಗೂ ಹೋಗಿಬರುವುದು ದೂರವೆನಿಸುತ್ತಿದ್ದರೆ, 'ಭಾರ ತೀಯ ಸಂಗೀತ ವಿದ್ಯಾಲಯ'ಕ್ಕಾದರೂ ಹೆಸರು ಹಚ್ಚಿಸು. ಅದು ದಾದರ ದಲ್ಲೇ ಇದೆ. ಸಾಕಷ್ಟು ಪ್ರ್ಯಾಕ್ಟೀಸ್ ಆದ ನಂತರ ನಿನ್ನ ರೇಡಿಯೊ ಕಾರ್ಯ ಕ್ರಮಗಳನ್ನು ಏರ್ಪಡಿಸುವಂತೆ ಪ್ರಯತ್ನಿಸುತ್ತೇನೆ. 'ಲಿಸ್ನರ' ದಲ್ಲಿ ನಿನ್ನ ಫೋಟೊ ಸಹ ಬರಬಹುದು! ಗ್ರಾಮೊಫೋನ್ ಕಂಪನಿಯವರು ನಿನ್ನ 'ರೆಕಾರ್ಡ' ಮಾಡಿಕೊಳ್ಳಲು ಹಾತೊರೆದು ಬರಬಹುದು!

ಹೌದು. 'ಲಕ್ಸ' ಮತ್ತು 'ರೆಕ್ಸೋನಾ' ಸಾಬಾಣ ಕಂಪನಿಗಳಿಗೆ ನಿನ್ನ ಫೋಟೊ ಕಳಿಸಿದ್ದೇನೆ. ಮುಂಬಯಿಯಲ್ಲಿದ್ದುಕೊಂಡು ನೀನೇ ಇದನ್ನು ಮಾಡಬಹುದಾಗಿತ್ತು. ನೀನೇನೊ ಆಕರ್ಷಕವಾಗಿ 'ಬಸ್ಟ' ಫೋಟೊ ತೆಗೆ ಯೆಂದು 'ಪೋಜ್' ಕೊಟ್ಟೆ. ಆದರೆ ಜಾಹೀರಾತಿನಲ್ಲಿ ಅವರು ಅಚ್ಚು ಹಾಕುವುದು ಕೇವಲ ಮುಖವನ್ನು ಮಾತ್ರ. 'ಪ್ರೊಫಾಯಿಲ್'ನಲ್ಲಿ ನಿನ್ನ

ನೀಳವಾದ ಮೂಗು ಸುಂದರವಾಗಿ ಕಾಣುತ್ತದೆ. ಕೇವಲ ನಿನ್ನ ಮೂಗು, ಮುದ್ದು ಬಾಯಿಗಾಗಿಯೆ ಕಂಪನಿಯವರು ನಿನಗೆ ಕನಿಷ್ಟ ಮೂರುನೂರರ ವರೆಗೆ ಕೊಡಬಹುದು. 'ಲಕ್ಸ' ಸಾಬಾಣವನ್ನುಪಯೋಗಿಸುವ ವಿದ್ಯಾ ಏನೆನ್ನುತ್ತಾರೆ?........ "Let this white and pure soap with the lovely perfume keep your skin lovely!" (ಈ ಪರಿಶುದ್ಧವಾದ ಸುವಾಸಮಯ ಸುಂದರ ಬಿಳಿ ಸಬಕಾರವು ನಿಮ್ಮ ಅಂಗಕಾಂತಿಯನ್ನು ಹೆಚ್ಚಿಸಲಿ.) ಎಂದು ಎಲ್ಲಾ ಪೇಪರುಗಳಲ್ಲಿ ನಿನ್ನ ಜಾಹೀರಾತು ಬಂದಾಗ ನಮ್ಮೆಲ್ಲರ ಕೈಗೆ ನಿಲುಕದಂತೆ ಮುಗಿಲ ಮೇಲೇರಬಹುದಲ್ಲವೆ ನೀನು? ಆದರೆ ಒಂದೇ ಸಂಶಯ. ಸಿನೇಮಾ ನಟಿಗಳ ಹೊರತು ಉಳಿದವರ ಹೆಸರು ಪ್ರಸಿದ್ಧಿಸುವರೊ ಇಲ್ಲವೊ?

ಹೌದು. ಸಿನೇಮಾ 'ಶೂಟಿಂಗ' ತೋರಿಸಬೇಕಲ್ಲವೆ ನಿನಗೆ? ದಾದರ 'ಶ್ರೀ ಸೌಂಡ' ದಲ್ಲೇ ಶೌಕತ್ ಹುಸೇನರ 'ಜುಗುನು' ಚಿತ್ರ ನಡೆದಿದೆ. ಶೌಕತ್ ಹುಸೇನ ಎಂದರೆ ಯಾರು ಗೊತ್ತೆ? ನೂರ್‌ಜಹಾನಳ ಗಂಡ. 'ಶ್ರೀ ಸೌಂಡ'ರ 'ಸೌಂಡ ರೆಕಾರ್ಡಿಸ್ಟ' ನನ್ನ ಕೇವಲ ಮಿತ್ರರು. ನಿನ್ನನ್ನು ಅವಶ್ಯ ಕರೆದುಕೊಂಡು ಹೋಗುತ್ತೇನೆ. ಬೆಳತನಕವೂ ನೋಡಬಹುದು. ಆದರೆ ಒಮ್ಮಿಂದೊಮ್ಮೆಲೆ 'ಸ್ಕ್ರೀನ್' ಮಾಡಬೇಕೆಂದು ನಿನಗೂ ಸ್ಫೂರ್ತಿ ಬಂದರೇನು ಗತಿ? 'ಆದದ್ದೆಲ್ಲಾ ಒಳಿತೆ ಆಯಿತು' ಎನ್ನಬೇಕು.

ವಿದ್ಯಾ, ನಿನಗೆ ರೇಡಿಯೊ ಸೆಟ್ ಒಂದು ಬೇಕಾಗಿತ್ತಲ್ಲವೆ? ರೇಡಿಯೊ 'ಸ್ಟಾರ್' ನೀನಾದ ಮೇಲೆ ಗ್ರಾಮೋಫೋನ್ ಕಂಪನಿಯವರೇ ನಿನಗೆ ಒಂದು ರೇಡಿಯೊ ಕಾಣಿಕೆಯಾಗಿ ಕೊಡಬಹುದು. ಸದ್ಯಕ್ಕೇ ಬೇಕೆಂದರೆ ಹಾಗೂ ವ್ಯವಸ್ಥೆ ಮಾಡುವೆ.

ವಿದ್ಯಾ, ಕರ್ಜತ್‌ನ ವರೆಗೂ 'Coupe'ದಲ್ಲಿ ಪ್ರವಾಸ ಮಾಡಿ ಕರ್ಜತ್ ಚೂಡಾ ತಿಂದು ನಿನ್ನನ್ನು ಬೀಳ್ಕೊಟ್ಟು ಪುಣೆಗೆ ಮರಳುವ ವರೆಗೂ ನಿನ್ನ 'Coupe' ವಿನೋದವನ್ನು ನೆನೆನೆನೆದು ನನ್ನೊಳಗೇ ನಕ್ಕೆ. ಇದೇ ಪ್ರಥಮ ಬಾರಿ ನಿನ್ನಂತಹ ಸುಶಿಕ್ಷಿತಳು ನನ್ನೊಡನೆ 'Coupe'ದಲ್ಲಿ ಪ್ರವಾಸ ಮಾಡಿದೆ ಎಂಬ ಸವಿನೋದ ಆಶ್ಚರ್ಯದೊಂದಿಗೆ 'Couple' ಎಂದು ಬರೆದಿದೆಯಲ್ಲ ಇದರಲ್ಲಿ! ಪ್ರವಾಸ ಮಾಡುವವರು 'Couple'ಎ ಇರಬೇಕೇನು?' ಎಂದು

ನನ್ನನ್ನು ಮುಗ್ಧ ಆಶ್ಚರ್ಯದಿಂದ ಕೇಳಿದ ಹಾಸ್ಯ, ಅದರೊಂದಿಗೆ 'Coupe' ಇದ್ದುದನ್ನು 'Couple' ಎಂದು ಓದುವ ನಿನ್ನ ರಸಿಕ ಬಿನ್ನಾಣಗಳನ್ನೆಲ್ಲಾ ನೆನೆದು ಈಗ ಬರೆಯುವುದನ್ನು ಬಿಟ್ಟು ನಗಬೇಕು ಎಂದೆನಿಸುತ್ತದೆ.

ಇರಲಿ ಮತ್ತೊಮ್ಮೆ 'Coupe'ದಲ್ಲಿ—'Couple' ಆಗಿ ಅಲ್ಲ ಮತ್ತೆ—ಸಹಪ್ರವಾಸ ಮಾಡುತ್ತಿರುವಾಗ ವಿಶೇಷ ವಿಷಯಗಳನ್ನು ಮೀಸಲಿರಿಸಿ ಇಲ್ಲಿಗೆ ಮುಗಿಸುತ್ತೇನೆ.

ನಿನ್ನನ್ನು ಪ್ರೀತಿಸುವ
'ಮನು, ಜ.'
(ಮನುಜನು ಅಲ್ಲ ಮತ್ತೆ)

ಗಾಡಿಯೆಲ್ಲಾ ತೆರವಾದಾಗ ಇದು 'ಚರ್ಚ ಗೇಟ' ಎಂಬುದು ಗೊತ್ತಾಯಿತು ರಾಮನಾಥನಿಗೆ........ಈ 'ಮನು, ಜ' ಯಾರಿದ್ದಿರಬೇಕು? ಎಂದು ಸಂಕಟದ ಕುತೂಹಲ ಅವನಿಗೆ. ತನ್ನೊಳಗೆ ಏನಿಲ್ಲದ ತರ್ಕವಿತರ್ಕ ನಡ ಸುತ್ತ ನಡೆದ. 'ಮನು' ಎಂದು ಯಾರ ಹೆಸರಿರಲಿಕ್ಕೆ ಸಾಧ್ಯ? ಕೊನೆಗೆ 'ಜ' ಎಂದರೇನು? 'ಜಹಗೀರದಾರ' ಎಂದಿರಬಹುದೆ? '.ಮ. ಸು.' ಎಂಬಿವು ಹೆಸರಿನ ಮೊದಲಕ್ಷರಗಳಿರಬಹುದೆ? ಆದರೆ ಮನುವಿನ ಮುಂದೆ ಇದ್ದ ಅಲ್ಪವಿರಾಮ ನೋಡಿ 'ಮನು' ಎಂಬ ಹೆಸರಿನ ಮನುಜನಾಗಿದ್ದಿರ ಬಹುದೆ ಎಂಬ ಗೂಢ ಶಂಕೆ ಅವನನ್ನು ತಿಕ್ಕಿಮುಕ್ಕಿ ಕಾಡಹತ್ತಿತು. ಹೇಗೊ ಕಚೇರಿ ಮುಟ್ಟಿದ. ಸುದೈವಕ್ಕೆ ಅಂದೇ ಒಂದು 'out-door duty' ಬಿತ್ತು. ಸೆಂಟ್ರಲ್ ಪ್ರೆಸ್ಸಿನಲ್ಲಿ ಅಚ್ಚಾಗಲಿರುವ ಒಂದು ಸರಕಾರಿ ಕೈಪಿಡಿಯ ಕನ್ನಡ ಪ್ರತಿಯ 'ಪ್ರೂಫ್' ನೋಡಲು ಹೋಗಬೇಕಾಗಿತ್ತು. ಒಳ್ಳೇ ಕಾರಣ ಸಿಕ್ಕಿತೆಂದುಕೊಂಡು ಅಲ್ಲಿಂದಲೆ ತಿರುಗಿ ಬರಲಾಗುವುದಿಲ್ಲವೆಂದು 'ಫೋನ್' ಮಾಡಿದರಾಯಿತು ಎಂದು ನೆನೆದ. ತಲೆಯೊಳಗೆ ವಿಚಾರದ ತಿರುಗಣಿ ನಡೆದೇ ಇತ್ತು. ಪತ್ರವನ್ನು ವಿದ್ಯಾವತಿಗೆ ಕೊಡಬೇಕೊ ಬೇಡವೊ? ಈ ವಿಷಯವನ್ನು ಅವಳ ಮುಂದೆ ಹೇಗೆ, ಏನೆಂದು ಎತ್ತುವುದು? ಇದರಲ್ಲಿ ಛಬೆಯ ಸಲಹೆ ಏನೆಂದು ಪಡೆಯುವುದು? ಇನೆಲ್ಲಕ್ಕೂ ಮಿಗಿಲಾಗಿ ಈ 'ಮನುಜ' ನೆಂಬ ಮಹಾನುಭಾವ ಯಾರು ಎಂಬುದನ್ನು ಹೇಗೆ ಸಂಶೋಧಿಸ ಬೇಕೆಂಬ ಕಾತರ. ಇದೇ ವಿಚಾರಭರದಲ್ಲಿ ಗಾಡಿ 'ಮರೀನ್ ಲಾಯಿನ್ಸಿ'ಗೆ

ಬರುತ್ತಲೆ ಅಲ್ಲಿ ಗೋಡೆಗೆ ತಗುಲಿಸಿದ 'Bovril' ಎಂಬ ಔಷಧದ ಜಾಹೀರಾತಿನ ಪಾಟಿ ನೋಡಿ ಅದು 'ಬೋರಿವಲಿ' ಎಂದರಿತು ಛಟ್ಟನೆ ಇಳಿದುಬಿಟ್ಟ. 'ಟ್ರಿಣ್' ಎಂದು ವಿದ್ಯುತ್ತಿನ ಬೆಲ್ ಆಗಿ ಇನ್ನೇನು ಗಾಡಿ ಹೊರಡುವುದರಲ್ಲಿದ್ದಿತು; ಅಷ್ಟರಲ್ಲಿ ಹಳ್ಳಿಯ ಹುಂಬನಂತೆ 'ಯಾವ ಸ್ಟೇಶನ್ನು ಇದು?' ಎಂದು ಒಬ್ಬರನ್ನು ಕೇಳಿ ಅವರು ನಕ್ಕು 'ಬಾಬಾ, ಯೆ ಮರೀನ ಲೈನ್ಸ ಹೈ' ಎಂದು ಚೇಷ್ಟೆ ಮಾಡುತ್ತ ಹೇಳಲು ಚಲಿಸುತ್ತಿರುವ ಗಾಡಿಯನ್ನೆ ಓಡಿ ಹತ್ತಿದನು. ಪುಣ್ಯಕ್ಕೆ ಸುರಕ್ಷಿತವಾಗಿ ಪ್ರವೇಶಿಸಿದ. ಮುಂದಿನ ನಿಲ್ದಾಣಕ್ಕೂ 'Bovril' ಬಂತು. ತನ್ನ ಹುಚ್ಚುತನಕ್ಕೆ ತಾನೇ ನಾಚಿ, 'ಚರ್ನಿರೋಡ' ಎಂದರಿತು ಇಳಿದ.

ಪ್ರೂಫ್ ಕೆಲಸ ಮುಗಿಸಿ ಹಾಗೇ ಗಾಡಿ ಹತ್ತಿ 'ಎಲ್‌ಫಿನ್‌ಸ್ಟನ್ ರೋಡಿ'ಗೆ ಇಳಿದ. ಅಲ್ಲಿಂದ ಪರೇಳ ಕೂಟನ ಟ್ರಾಮ್ ಹಿಡಿದು ಕೆ.ಇ.ಎಂ. ಹಾಸ್ಪಿಟಲ್‌ನತ್ತ ನಡೆದುಬಿಟ್ಟ, ಛಬಿ ಅಲ್ಲಿಯೆ ಬಂದಿರಬಹುದೆಂದು ಮನಸ್ಸಿನಲ್ಲಿ ನಿಶ್ಚಯಿಸಿ.

'ಹಲ್ಲೊ ರಾಮನಾಥ!'

ಕೂಗಿದವರು ರಾಮನಾಥನ ಹಳೆಯ ಗೆಳೆಯರೊಬ್ಬರು. ಆ ವ್ಯಕ್ತಿಯನ್ನು ನೋಡುತ್ತಲೆ ರಾಮನಾಥನಿಗೂ ಸಂತೋಷವಾಯಿತು. ಅತ್ಯಂತ ಸಂಭ್ರಮದಿಂದ 'ಎಲಾ ನಿನ? ಇದೇನೊ ಶ್ರೀಪಿ!' ಎಂದು ಸ್ನೇಹಪೂರ್ಣವಾಗಿ ಕೈ ಕುಲುಕಿಸಿದನು.

'ಎಲಾ ನಿನ!'

'ಇಲ್ಲೆಲ್ಲೆ ಇರತಿ? ಮುಂಬಯಿಯಂಥಾ ಸಮುದ್ರದೊಳಗಿಂದ ಮುತ್ತು ಸಿಕ್ಕಾಂಗ ಆತು ನೋಡು ಶ್ರೀಪಿ!' ಎಂದು ಆನಂದವುಕ್ಕಿ ಮಾತಾಡಿದನು ರಾಮನಾಥ. ಬೇಗುದಿಗೊಂಡ ಮನಸ್ಸಿಗೆ ಒಂದಿಷ್ಟು ಆರಾಮವೆನಿಸಿಸಿತು.

"ಇಲ್ಲೇ 'ಗ್ರ್ಯಾಂಟ ಮೆಡಿಕಲ್ ಕಾಲೇಜ'ದೊಳಗ M.D. ಗೆ ಅಭ್ಯಾಸ ನಡಿಸೀನಿ. ನೀನಪಾ?'

'ನಾಯಿಲ್ಲೆ 'ಓ.ಟಿ.' ಆಫೀಸಿನೊಳಗ ಕನ್ನಡ ಭಾಷಾಂತರಕಾರ ಅಂತ ಕೆಲಸ ಮಾಡತೀನಿ.'

'ಬಹಾಳ ಛಲೋ ಆತು ಬಿಡಪಾ. ಯಾವಾಗಾರ ನಮ್ಮ ಹಾಸ್ಟೆಲ್

ಕಡೆ ಬರತ ಇರು. 'Sand-hurst Road' ಗೆ ಇಳದಿ ಅಂದರ ಹತ್ತುಹೆಜ್ಜೆಯೊಳಗ ನಮ್ಮ ಹಾಸ್ಪೆಲ್ಲು.'

'ಮತ್ತ ಈಗೇನು ಭೆಂಡಿಬಜಾರ ಸಮೀಪ ಅದಲ್ಲ!'

'ಅದಕ್ಕs ಹೊರಟೇನೀಗ.'

'ಎಲ್ಲಿಗೆ?'

'ಕೆ. ಇ. ಎಂ. ಗೆ.'

'ಅಲ್ಲೆ ಒಂದೆರಡು 'Stabbing Cases' ನೋಡಿಕೊಂಡು ಬರಬೇಕಾಗೇದ. ನಡೀ ಬೇಕಾದರ 'ಆಪರೇಶನ್ ಥಿಯೇಟರ' ಗೆ ಕರಕೊಂಡ ಹೋಗತೀನಿ.'

'ನಾನೂ ಅಲ್ಲಿಗೇ ಹೊರಟಿದ್ದೆ, ನಡಿ.'

'ಅಲ್ಲಿಗ್ಯಾಕ?'

'ನಮ್ಮ ಬಾಜೂದ ಮನಿಯ ಒಂದು 'ಪೇಶಂಟ್' ಆದ. ಬೆಟ್ಟಿಗೆ ಅಂತ.'

ರಾಮನಾಥ ಛಬೆ ಬಂದಿಲ್ಲವೆಂದರಿತು ಶ್ರೀಪಿಯೊಡನೆ 'ಆಪರೇಶನ್ ಥಿಯೇಟರ'ನಲ್ಲಿ ಪ್ರವೇಶ ಮಾಡಿದ, ತಾನೂ ಅವನೊಡನೆ ವಿದ್ಯಾರ್ಥಿಯೆಂಬ ನೆವದಿಂದ. ದೂರದಿಂದ ಅಲ್ಲಿಯ ಗೃಶ್ಯ ನೋಡಿದಾಗ ರಾಮನಾಥನಿಗೆ ಬುದ್ಧನ ಜೀವನದ ನೆನಪಾಯಿತು.

ಮೋರೆಗೆ ಬಿಳಿಯ ಮುಸುಕು ಹಾಕಿ ಒಂದು ವ್ಯಕ್ತಿಯನ್ನು ಟೇಬಲ್ ಮೇಲೆ ಮಲಗಿಸಿದ್ದರು. ವ್ಯಕ್ತಿಗೆ ಎಚ್ಚರವಿರಲಿಲ್ಲ. ನಡುವರಯದವ. ಮುಖ್ಯ ಸರ್ಜನ್ ಗಂಜಿಯ ಗುಳ್ಳಿಯಂತಹ ಶುಭ್ರವೇಷದಲ್ಲಿ ಕೈತುಂಬ ಚೀಲ ಹಾಕಿಕೊಂಡು ಶಸ್ತ್ರ ಧರಿಸಿ ನಿಂತಿದ್ದ. ಇಬ್ಬರು ಮೂವರು ನರ್ಸುಗಳು ಅಷ್ಟೇ ಶುಭ್ರವಸ್ತ್ರಧಾರಿಗಳಾಗಿ ಮೇಲ್ಗೆಲಸಕ್ಕೆ ನಿಂತಿದ್ದರು. ಟೇಬಲ್ ತುಂಬೆಲ್ಲಾ ಆಪರೇಶನ್ ಉಪಕರಣಗಳು, ಆಕ್ಸಿಜನ್ ಬಾಟ್ಲಿ, ಔಷಧದ ಸಣ್ಣದೊಡ್ಡ ಬಾಟ್ಲಿಗಳು. ಆಪರೇಶನ್ ಮಾಡುವ ಮೊದಲು ರಕ್ತಹೊರ ಸೂಸದಂತೆ ನರಗಳನ್ನು ಹಿಡಿದು ಇಂಜಕ್ಶನ್ ಕೊಟ್ಟಿದ್ದರು. ಎಚ್ಚರವನ್ನಂತೂ ಮೊದಲೇ ಕಳೆದುಬಿಟ್ಟಿದ್ದರು.

ಸರ್ಜನ್ ಗಾಯದಲ್ಲಿ ಏನೇನೋ ಔಷಧ ಹಾಕಿದ. ಚೂರಿ ಒಳಗೆ ಎಷ್ಟುದ್ದ ನಟ್ಟಿತ್ತೆಂಬುದನ್ನು ನೋಡಬೇಕಿತ್ತು. ತನ್ನ ಚಾಕೂದಿಂದ ಕರ-ಕ್ಕನೆ ಇನ್ನಷ್ಟು ಕೊಯ್ದು ಕೈಹಾಕಿ ಪೆಟ್ಟಿಗೆಯೊಳಗಿನ ಸಾಮಾನು ತೆಗೆಯುವಂತೆ ಹೊಟ್ಟೆಯೊಳಗೆ ಕೈಹಾಕಿ ಒಳಗಿನ ಕರುಳನ್ನೆ ಹೊರಗೆಳೆದನು. ಗಾಯ ಕೆಳಹೊಟ್ಟೆಯ ಮೇಲಾಗಿತ್ತು. ಅಂತೂ ಘಾಯವನ್ನು ಅದರುದ್ದಕ್ಕೂ ಔಷಧಿಯಿಂದ ತೊಳೆದುದಾಯಿತು. ಆಮೇಲೆ ಗಾಯವನ್ನು ಚುಟುಕೆ ಹಾಕಿ ಹೊಲೆದುಬಿಟ್ಟರು, ಹರಿದ ಅರಿವೆಯನ್ನು ಹೊಲೆಯುವಂತೆ. ಇದನ್ನೆಲ್ಲಾ ನೋಡುತ್ತ ನಿಂತಿದ್ದ ರಾಮನಾಥನಿಗೆ ದಿಕ್ಕು ತಪ್ಪಿ, ಎಚ್ಚರವೂ ತಪ್ಪುವಂತೆ ಆಗಿತ್ತು. ಮತ್ತೆ ತಾನೇ ನಿಗ್ರಹಿಸಿಕೊಂಡ.........ಮನುಷ್ಯದೇಹವೆಂದರೇನು? ಮಾಂಸದ ಹೊರತಾಗಿ ಇನ್ನೇನೂ ಇಲ್ಲ. '<u>Everything in man and woman is flesh, flesh and nothing but flesh</u>!' (ಹೆಣ್ಣು-ಗಂಡಿನ ದೇಹದಲ್ಲೆಲ್ಲ ಇದ್ದದ್ದೇನು? ಬರಿ ರಕ್ತ-ಮಾಂಸದ ಮುದ್ದೆ; ಅದನ್ನು ಬಿಟ್ಟರೆ ಇನ್ನೇನೂ ಇಲ್ಲ.) ದೇಹದೊಳಗೆ ಇರುವುದು ಹೃದಯವಂತೆ! ಅದರಲ್ಲಿರು-ವುದು ಭಾವನೆಯಂತೆ! ಪ್ರೇಮವಂತೆ! ಅದಕ್ಕೊಂದು ಅತಃಕರಣವಿದೆಯಂತೆ! ಆತ್ಮವಿದೆಯಂತೆ! ಎಲ್ಲಿಯ ಆತ್ಮ? ಎಲ್ಲಿಯ ಹೃದಯ? ಎಲ್ಲಿಯ ಅಂತಃಕರಣ? ಹೃದಯವೆಂಬುದೊಂದು ಮಾಂಸ! ಮನಸ್ಸು ಕರುಳು ಎಂಬುದೊಂದು ಮಾಂಸ! ಪ್ರೇಮವೆಂಬುದೊಂದು ಮಾಂಸ! ಮಾಂಸದ ಮುದ್ದೆಯೇ ಪ್ರೇಮದ ಆಗರ. ಆ ಮಾಂಸದ ಮುದ್ದೆಯೊಳಗೆ ಹೃದಯವೆಂಬುದು ಸಿಗ-ಬೇಕೆಲ್ಲಿ? ಆತ್ಮವೆಂಬುದು ಸಿಗಬೇಕೆಲ್ಲಿ? ಆತ್ಮವೆಂಬುದಿದ್ದರೆ ಬಸಿರು ಬಗೆಯುವ ಡಾಕ್ಟರರ ಚೂರಿಗೆ ಅದೇಕೆ ಸಿಗಬಾರದು?.........ಹಾಗಾದರೆ ನಗೆ, ಕಂಬನಿಗಳೆಂದ-ರೇನು? ಸುಖ-ದುಃಖಗಳೆಂದರೇನು? ಮಾಂಸದ ಎಳೆಎಳೆಗಳ ಚಲನವಲನ! ಮಾಂಸಕ್ಕೆ ಆನಂದವೆನಿಸಿದರೂ ಅಷ್ಟೇ, ದುಃಖವೆನಿಸಿದರೂ ಅಷ್ಟೆ—ಕಣ್ಣಗುಡ್ಡೆಯ ಹಿಂದಿರುವ ನರಗಳ ಎಳೆದಾಟದಿಂದ ಹೊರವುಕ್ಕುವ ಹನಿಗಳೇ—ಅಶ್ರುಗಳು. ದುಃಖಕ್ಕೂ ಅವೇ ಅಶ್ರು ಬರುತ್ತವೆ, ಸುಖಕ್ಕೂ ಅವೇ ಅಶ್ರು!....ಎಂತಲೇ ಭಗವಂತನು ಸಾರಿಲ್ಲವೆ 'ಸುಖದುಃಖೇ ಸಮೇ ಕೃತ್ವಾ' ಎಂದು!....'ವಾಸಾಂಸಿ ಜೀರ್ಣಾನಿ ಯಥಾ ವಿಹಾಯ' ಎಂದೂ ಅದೇ ಭಗವಂತನೇ ಸಾರಿಲ್ಲವೆ? ಇದೀಗ ನಡೆದುದೇನು? ದೇಹದ ರಿಪೇರಿ!

ಹರಿದ ಅರಿವೆಯನ್ನು ಹೊಲಿಯುವಂತೆ ಸರ್ಜನ್ ಮಾಂಸಕ್ಕೆ ದೇಹದ ತೊಗಲು ಹೊದಿಸಿ ಹೊಲೆದ. ಗಡಿಯಾರದ ಯಂತ್ರಗಳನ್ನು ಹೊರತೆಗೆದು ಮತ್ತೆ ರಿಪೇರಿ ಮಾಡಿ ಮುಚ್ಚುವಂತೆ ದೇಹದ ಗಡಿಯಾರವನ್ನು ನೆಟ್ಟಗೆ ಮಾಡಿದ ಸರ್ಜನ್ ! ಗಡಿಯಾರಕ್ಕೂ ದೇಹಕ್ಕೂ ಯಾವ ಅಂತರವಿದೆ ? ಯಂತ್ರ ಸರಿಯಿರುವ ವರೆಗೆ ಎರಡೂ ನಡೆಯುತ್ತವೆ. ಆಮೇಲೆ ಎರಡೂ ಬಂದುಬೀಳುತ್ತವೆ, ನಿಷ್ಪ್ರಯೋಜಕವಾಗುತ್ತವೆ........

' ನಡಿ ಹೋಗೋಣು ' ಎಂದು ಶ್ರೀಪಿ ರಾಮನಾಥನ ಡುಬ್ಬ ಚಪ್ಪರಿಸಿದಾಗ ಮಲಗಿದವನಂತೆ ಎಚ್ಚತ್ತ ರಾಮನಾಥ.

' ಇದೇನೊ ರೋಗಿಗಿಂತ ನಿನಗೇ ಕ್ಲೋರೋಫಾರ್ಮ ಕೊಟ್ಟವರ ಹಾಂಗ ಮಾಡೀದೆಲ್ಲಾ ? '

ರಾಮನಾಥ ಏನೂ ಮಾತಾಡಲಿಲ್ಲ.

' ನಡೀ, ಒಂದೊಂದು ಕಪ್ಪು ಚಹಾ ಹಾಕಿ ಬರೂಣು. '

' ಶ್ರೀಪಿ, ಇನ್ನೊಮ್ಮೆ ಬರತೀನಿ. ಈಗ ನನ್ನ ಬಿಟ್ಟುಬಿಡು. '

' ಚಹಾ ತಗೊಂಡು ಬರೀ ಅಂತ ಬಾ. '

ಶ್ರೀಪಿಯ ಬಲವಂತಕ್ಕೆ ರಾಮನಾಥ ಚಹ ಮುಗಿಸಿ ಮತ್ತೊಮ್ಮೆ ಬರುವುದಾಗಿ ಮಾತು ಕೊಟ್ಟು ಅವನನ್ನು ಬೀಳ್ಕೊಟ್ಟು ಬಂದ. ಛಬೆ ಇನ್ನೂ ಬಂದಿರಲಿಲ್ಲ. ಟ್ರಾಮಿನ ದಾರಿ ಕಾಯುತ್ತ ರಾಮನಾಥ ಸೂರ್ಯ ಸಿನೇಮಾದ ಬಳಿ ಸುಮ್ಮನೆ ಅಲೆದಾಡುತ್ತಿದ್ದ. ತಿಕೀಟಿಗಾಗಿ ಹತ್ತಿದ ಕ್ಯೂ ಒಂದು ಫರ್ಲಾಂಗಿನ ವರೆಗೆ ವ್ಯೂಹಗಟ್ಟಿ ನಿಂತಿತ್ತು. ಪಾಳಿ ಹತ್ತುವವರೆಗೂ ಹೊತ್ತು ಗಳೆಯುವುದಕ್ಕಾಗಿ ಕೆಲವರು ' ಸೇಂಗಾದಾಣಿ ' ಮೆಲಕು ಹಾಕುತ್ತಿದ್ದರು; ಕೆಲವರು ಅದೇ 'ಅನಮೋಲಘಡಿ' ಚಿತ್ರಪಟದ ಗೀತಾವಳಿಯನ್ನು ಮೆಲಕು ಹಾಕುತ್ತಿದ್ದರು; ' ಲೋಕಶಕ್ತಿ ' ' ಸಕಾಳ ' ಗಳನ್ನು ಮೆಲುಕು ಹಾಕುವವರೂ ಇದ್ದರು. ಬಿಸಿಲಿನ ಚುರುಕು ಕಡಿಮೆಯಾಗಿರಲಿಲ್ಲ. ತಲೆಗೆ ಮೆತ್ತಿಕೊಂಡ ಎಣ್ಣೆ-ಬೆವರು ಒಂದುಗೂಡಿ ಕುತ್ತಿಗೆಯಿಂದ ಬೆನ್ನ ವರೆಗೆ ಧಾರೆಗಟ್ಟಿ ಹರಿಯುತ್ತಿದ್ದರೂ ಮತ್ತೆ ಶರ್ಟಿಗೆ ಫೌಂಟನ್‌ಪೆನ್ನಿನಂತೆ ಸಿಲುಕಿಸಿದ ಸಣ್ಣ ಹಣಿಗೆ ತೆಗೆದು ಕ್ರಾಪ್ ತೀಡಿಕೊಂಡು ಕಾಡಿಗೆಗಣ್ಣು ಒರಸಿಕೊಂಡು ಉರಿ ಬಿಸಿಲ ತಾಪವನ್ನು ಲೆಕ್ಕಿಸದೆ ಪಾಳಿ ಹಚ್ಚಿ ಕಾಯುತ್ತಿದ್ದರು ಒಂದು ಗಳಿಗೆಯ

ಕಣ್ಣ ಸುಖಕ್ಕಾಗಿ ಈ ಜನರು ಎಷ್ಟು ಕಷ್ಟ ಸಹಿಸುವರಲ್ಲ!—ಎನಿಸಿತು ರಾಮನಾಥನಿಗೆ. ಎರಡು ತಾಸುಗಟ್ಟಲೆ ಕ್ಯೂ ಹಚ್ಚಿ ಕಾಯುತ್ತ ನಿಲ್ಲುವುದೆಂದರೆ ! ಆದರೆ ಮರುಕ್ಷಣಕ್ಕೇ ಅವರಿಗಾಗಿ ಸಹಾನುಭೂತಿ, ಕರುಣೆ ಅಂಕುರಿಸಿದುವು. ದಿನ ಬೆಳಗೂ, ದಿನರಾತ್ರಿಯೂ ಗಿರಣಿಗಳಲ್ಲಿ ಡ್ಯೂಟಿ ಮಾಡಿ ಗಿರಣಿಯ ಗಾಲಿಯಂತೆ ಗಿರ್ರ್ ಎಂದು ಜೀವನಚಕ್ರ ತಿರುಗುತ್ತಿರುವಾಗ, ಕ್ಷಣ ಹೊತ್ತು ಮನುಷ್ಯನಿಗೆ ಮನರಂಜನೆಯೆಂಬುದು ಬೇಕೆನಿಸುತ್ತದೆ. ಇಲ್ಲದಿದ್ದರೆ ಅವರಿಗೆ ಇನ್ನೊಂದು ಸುಖವೇನಿದೆ ? ಎಲ್ಲರಿಗೂ ಸುಖ ಬೇಕೇ ಬೇಕಲ್ಲವೇ ?

ಹಾಗೇ ಅಡ್ಡಾಡುತ್ತ ರಾಮನಾಥ 'ದಾಮೋದರ ಹಾಲಿ'ನತ್ತ ನಡೆದ. ಅಲ್ಲಿಯೂ ಯಾವುದೋ ಒಂದು ನಾಟಕ ನಡೆದಿತ್ತು. ಮುಗ್ಗುಲಿಗೇ ತಗುಲಿಸಿದ ಬೋರ್ಡ ನೋಡಿದ. 'ದೇವಮಾಣೂಸ' ಎಂದು ಬರೆದಿತ್ತು. ನಾಟ್ಯಗೃಹದ ಹೊರಮುಗ್ಗುಲಿಗೆ ಒಬ್ಬ ಭಿಕ್ಷುಕಿ—ಅಬಲೆಯೆಂದರೆ ಅಕ್ಷರಶಃ ಅಬಲೆ—ಓಡಾಡುವುದಕ್ಕೂ ಪರಸ್ವಾಧೀನಳಾಗಿ ಬಿದ್ದುಕೊಂಡಿದ್ದಾಳೆ. ಉಬ್ಬಿದ ಹೊಟ್ಟೆ, ಕಡ್ಡಿಯಾದ ಕೈಕಾಲು, ಸಿಗಿದು ಹೋದ ಕಣ್ಣು, ಅಷ್ಟಾವಕ್ರಮುಖ, ಮಗ್ಗುಲಲ್ಲಿ ಒಂದ ಮಗು ಅಳುತ್ತ ಬಿದ್ದಿದೆ....'ದೇವರೆ! ಇಂತಹ ಪ್ರಾಣಿಗೂ ಮಕ್ಕಳನ್ನು ಹಡೆಯುವ ಬುದ್ಧಿಯೆ ? ನಿನ್ನ ಲೀಲೆ ಅಗಾಧವಲ್ಲ, ಅಸಹ್ಯ !........ಅಥವಾ ಅಂತಹ ಮಾಂಸದ ಮುದ್ದೆಗಾಗಿ ಪ್ರೇಮದಾಮಿಷವೆಂದು ಹಾತೊರೆದ ಮನುಷ್ಯನಾರಿರಬಹುದು ?............ ಎಂತಹ ದೇವಮನುಷ್ಯನವನು ! ಎಷ್ಟು ಜೀವಗಳ ಪಾಪ ಕಟ್ಟಿಕೊಂಡಿದ್ದಾನೊ ........!'

ಅದೇ ವೈರಾಗ್ಯವಿಚಾರದಲ್ಲಿ ಮುನ್ನಡೆಯುತ್ತಲೆ ಮೂರು ನಾಲ್ಕು ವರುಷದ ಹುಡುಗೆಯೊಂದು 'ಅಖಿಯ ಮಿಲಾಖೆ........' ಎಂದು ಹಾಡುತ್ತ ಕೈಯೊಡ್ಡಿತು ! ಅಭಿನಯದ ಪಾತ್ರದಂತೆ ದೈನ್ಯ ಹುಟ್ಟುವಂತೆ ಖಿನ್ನ ಮುದ್ರೆಯಿಂದ ಕನಿಕರದುಂಬಿ ಬೇಡಿಕೊಂಡಿತು. ರಾಮನಾಥ ಹುಡುಗೆಯ ಕೈಗೆ ಅರ್ಧ ಆಣೆಯ ಚೂರೊಂದನ್ನು ಹಚ್ಚಿದ. ಮಗುವಿನ ದೈನ್ಯವೆತ್ತೋ ಹಾರಿ ನಗುತ್ತ ಕೇಕೆ ಹಾಕುತ್ತ ಓಡಿ ಹೋಗಿ ಆ ಚೂರನ್ನು ತನ್ನ ಅಕ್ಕನ ಕೈಯಲ್ಲಿ ಕೊಟ್ಟಿತು. ಹುಬ್ಬುಹಾರಿಸುತ್ತ ರಾಮನಾಥನ ಕಡೆಗೆ ಬೊಟ್ಟು

ಮಾಡಿ ತೋರಿಸಿತು. ರಾಮನಾಥನ ಲಕ್ಷ್ಯ ಆಚೆಗೆ ಹೋಯಿತು. ಹದಿನಾರು ಹದಿನೇಳು ವರುಷದ ಆ ಹುಡುಗೆ ರಾಮನಾಥನ ಬಳಿ ಮುಗುಳ್ನಗೆ ಬೀರುತ್ತ, ' ಏಕ ಆನಾ ದೇ ಬಾಬಾ ! ' ಎಂಬ ಪಲ್ಲವಿಯನ್ನು ಪ್ರಾರಂಭಿಸಿ ' ಜಿಂದಗೀಕ ಕಾರವಾನ । ಜಿಂದಗೀಕ ಕಾರವಾನ । ....ಆಜಯ ಹಾ ಕಲ್ ವಹಾ ' ಎಂದು ಸುಸ್ವರಕಂಠದಿಂದ ಹಾಡತೊಡಗಿದಳು. ಮುಂಬಯಿಯೊಳಗಿನ ಗಳಿಕೆಯ ಮಾರ್ಗಗಳನ್ನೂ ರೀತಿನೀತಿಗಳನ್ನೂ ಕಂಡು ರಾಮನಾಥನಿಗೆ ಜಿಗುಪ್ಸೆಗಿಂತ ಕರುಣೆಯೆ ಹುಟ್ಟಿತು. ಅವಳಿಗೆ ದುಡ್ಡು ಕೊಡುವುದಕ್ಕಿಂತ ಬಿಡುವುದೆ ಲೇಸೆಂದು ತೋರಿತು. ಆದರೂ ಅವಳ ಕೈಗೆ ಎರಡಾಣೆಯ ಚೂರು ಹಚ್ಚಿದ. ' ಭಗವಾನ್ ಆಪಕಾ ಭಲಾ ಕರೇಗಾ ' ಎಂದಳಾಕೆ. ಅವಳ ಬದುಕಿನ ರೀತಿಯನ್ನು, ಉದ್ದೇಶವನ್ನು ತಿಳಿದುಕೊಳ್ಳಬೇಕೆಂಬ ಕುತೂಹಲ ರಾಮನಾಥನಿಗೆ:

' ತುಮಾರಾ ಗಾಂವ ಕೋನ್ಸಾ ಹೈ ? '

' ಬಹುತ ದೂರಸೆ ಆಯಾ ಹಂ. '

' ಕಿಧರಸೆ ? '

' ರಾಯಚೂರಸೆ........'

ರಾಮನಾಥ ಥಕ್ಕಾದ. ' ರಾಯಚೂರಸೆ! ಕಾನಡೀ ಜಾನತಾ ಹೈ? ಕನ್ನಡ ಬರತದೇನು? '

' ಬೇಕಾದೋಟು ಬರತೈತ್ರಿ. '

ರಾಮನಾಥನ ಕುತೂಹಲ ಇನ್ನಷ್ಟು ಹೆಚ್ಚಿತು.

'ನಿಮ್ಮ ತಂದಿ-ತಾಯಿ ಎಲ್ಲಿದ್ದಾರವಾ? '

' ಯಪ್ಪಾ ಎಲ್ಲೀ ತಂದಿರಿ! ಹೊಟ್ಟಿಗೆ ಕೂಳಿಲ್ಲದ ಬರಗಾಲಕ ಈಡಾಗದ ಸತ್ತು ಹ್ವಾದನ್ರಿ. ನಮ್ಮವ್ವಗ ನಾಕ ಮಂದಿ ಹೆಣ್ಣುಮಕ್ಕಳ್ರಿ ನಾವು. ನಿನ್ನೆ ಅಲ್ಲೆ, ಇಂದಿಲ್ಲೆ ಅಂತ ಸಿಕ್ಕ ಗಾಡಿ ಹತ್ತೂದರಿ, ಬಿಕ್ಕಿ ಬೇಡೂದರಿ. ತಿಗೀಟ ಇಲ್ಲಾಂತ ರೈಲಿನಾವರು ಇಳಿಸಿದಲ್ಲೆ ಇಳಿಯೋದರಿ. ಹಾಂಗ ಹೀಂಗ ದೂಡಿಕೊಂತ ಇಲ್ಲಿಗೆ ಬಂದು ಮುಟ್ಟೇದಿವ್ರಿ. ಅಂತೂ ಇಲ್ಲೋಟು ಪಾಡೈತಿರಿ. '

' ನಿಮ್ಮ ಅಕ್ಕಾವ್ರು, ಅವ್ವಾ ಎಲ್ಲದಾರ ? '

' ಒಬ್ಬೊಬ್ಬರು ಒಂದೊಂದು ತಾವಲ್ಲೆ ತಿರಗತಿವ್ರಿ. '

'ನಿಮ್ಮ ಅಕ್ಕಾವ್ರ ಮದಿವಿ ಆಗೇತೇನು ?'

ಹುಡುಗಿ ಕಿಡಿಗೇಡಿತನದ ನಗೆ ನಕ್ಕಳು. ಪ್ರಶ್ನೆ ಕೇಳಿದ್ದೇ ಹುಚ್ಚುತನ ಎನಿಸಿತು ರಾಮನಾಥನಿಗೆ. ಹುಡುಗಿಯೆ ಹೇಳಿದಳು:

'ಯಪ್ಪಾ, ಮನಿ-ಮಾರು-ಬದುಕು ಅಂತಿದ್ದರ ಮದಿವೀನೂ ಆಕ್ಕೈತ್ರಿ ಎಲ್ಲಾನೂ ಆಕ್ಕೈತಿ. ಹೊಟ್ಟೆಗೇ ಇಲ್ಲಾತಂದರ ಮರ್ವಾದೀನೂ ಮಾರಿಕೊಳ್ಳ ಬೇಕಾಕ್ಕೈತಿ ನೋಡ್ರಿ.'

ಹುಡುಗಿಯ ಮಾತುಕತೆ ಅವಳ ಕಟು ಅನುಭವವನ್ನು ಮಾರ್ಮಿಕ ವಾಗಿ ಪ್ರತಿಬಿಂಬಿಸಿದುವು. ರಾಮನಾಥ ಮತ್ತೊಂದು ನಾಲ್ಕಾಣೆಯ ಚೂರು ಹುಡುಗಿಯ ಕೈಗೆ ಹಚ್ಚಿದ. 'ಮತ್ತೊಮ್ಮೆ ಬೆಟ್ಟಿ ಆದಾಗ ಮತ್ತ ಕೊಡ ತೀನಿ ಆಂ?'

'ದೇವರು ನಿಮಗ ಕಲ್ಯಾಣ ಮಾಡ್ಲಿರಿ.' ಓರೆಗಣ್ಣಿನಿಂದ ಮುಗುಳ್ನಗೆ ನಕ್ಕು ಹೋದಳು ಭಿಕಾರಿಣಿ.

ಅತ್ಯಂತ ಜಡವಾದ ಹೃದಯದಿಂದ ರಾಮನಾಥ ದವಾಖಾನೆಗೆ ಬಂದ. ಸಹಸ್ರಬುದ್ಧೆಯವರ ಕೋಣೆ ಖಾಲಿಯಾಗಿತ್ತು. ಛಬೆ ಏನೆಂದು ತಿಳಿದು ಕೊಂಡಳೊ ಎಂದು ಮತ್ತೆ ದಾದರಿನತ್ತ ಧಾವಿಸಿದ. 'ಪ್ಲಾಝಾ' ಸಿನೇಮಾದ ಬಳಿ ಛಬೆಯನ್ನೆ ಎದುರಿಗೆ ಸಂಧಿಸಿದ.

'ಕುಠ ಚಾಲ್ಲಾ?........I am sorry ಛಬೆ. I came to see you much earlier and much later, naver in time. I was simply loafing round about.......ಬsರ, ಕುಠ ಚಾಲ್ಲಾ?' (ಎಲ್ಲಿಗೆ?........ ಬಹಳ ಬೇಗನೆ, ಇಲ್ಲವೆ ಬಹಳ ತಡವಾಗಿ,—ಅಂತೂ ಹೊತ್ತಿಗೆ ಸರಿಯಾಗಿ ಬರೋದು ಆಗಲಿಲ್ಲ. ಕ್ಷಮಿಸಿ. ಇಲ್ಲೇ ಸುಮ್ಮನೆ ತಿರುಗಾಡುತ್ತಿದ್ದೆ.)

'ಆಪಲ್ಯಾ ಕಡೇಚ,' (ನಿಮ್ಮ ಕಡೆಗೇ.) ಛಬೆಯ ಧ್ವನಿಯಲ್ಲಿ ನಡುಕ ವಿತ್ತು, ಕಾತರವಿತ್ತು.

'ಮ್ಹಣಜೆ?' (ಅಂದರೆ?)

'ಮೀ ಫೋನ್ ಕರಾಯಲಾ ಜಾತಹೊತೆ.' (ಫೋನ್ ಮಾಡಲಿಕ್ಕೆ ಹೊರಟಿದ್ದೆ.)

'ಆಪಲ್ಯಾ ವಡೀಲ ಘರಿ ಆಲ್ಯಾತ ನಾ?' (ನಿಮ್ಮ ತಂದೆ ಮನೆಗೆ ಬಂದರೇನು?)

'ಹೋ ಹೋ ಆಲೆ........He is o. k but......'

'ಆಂ?' ರಾಮನಾಥ ಬಹಳ ಗಾಬರಿಗೊಂಡು ಕೇಳಿದ.

'ತಾರ್ ಆಲೀ ತುಮ್ಹಾಲಾ ?' (ತಾರು ಬಂದಿದೆ ನಿಮಗೆ)

ಸಮಾಚಾರವೇನು ಎಂಬುದನ್ನು ಹುಬ್ಬಿನಿಂದಲೇ ಕೇಳಿದನು ರಾಮನಾಥ. ಛಬಿ ಮಾತನಾಡದೆ ತಂತಿಯನ್ನು ರಾಮನಾಥನ ಕೈಯಲ್ಲಿ ಕೊಟ್ಟಳು.

'Mohan ill start immediately no anxiety '(ಮೋಹನನಿಗೆ ಅಜಾರಿ. ಕೂಡಲೆ ಹೊರಟು ಬರಬೇಕು. ಗಾಬರಿಯಾಗಬೇಡಿ).

ರಾಮನಾಥನ ಮುಖ ಬಹಳ ಖಿನ್ನವಾಯಿತು. ಏನೂ ಮಾತನಾಡದೆ ಬಹಳ ಚಿಂತಾಮಗ್ನನಾಗಿ ಛಬಿಯನ್ನನುಸರಿಸಿ ಮನೆಗೆ ನಡೆದ.

'ಮೀ ಧಾರವಾಡಲಾ ಜಾವೂನ ಏತೊ ಛಬಿ......... leave application ಏಕ ಪಾಠವಾಹಿಲಾ ಪಾಹಿಜೆ' (ಹಾಂಗಾದರ ನಾನು ಧಾರವಾಡಕ್ಕೆ ಹೋಗಿ ಬರತೇನಿ. ರಜಾ ಅರ್ಜಿ ಒಂದು ಕಳಿಸಬೇಕಲ್ಲ....') ಛಬಿಗೇ ನೇರವಾಗಿ ಹೇಳಲು ರಾಮನಾಥನಿಗೆ ಸಂಕೋಚವಾಯಿತು

'ತುಮ್ಹಿ ಕಾಳಜಿ ಕರೂ ನಕಾ. ಮೀ ತುಮಚಾ ಅರ್ಜ ದೇವೂನ ಏತೆ.' (ಕಾಳಜಿ ಮಾಡಬೇಡಿ. ನಾನು ಹೋಗಿ ಮುಟ್ಟಿಸಿ ಬರುತ್ತೇನೆ).

ರಾಮನಾಥ ಕೃತಜ್ಞತೆಯಿಂದ ಛಬಿಯನ್ನು ನೋಡಿದ.

'So I think tomorrow morning I start by 8-30 express... ದಾದರಹೂನಚ ಚಢತೊ.' '(ನಾಳೆ ಮುಂಜಾನೆ ೮-೩೦ರ ಎಕ್ಸಪ್ರೆಸ್ಸಿಗೇ ಹೊರಡುತ್ತೇನೆ, ದಾದರದಿಂದ.')

ಛಬಿ ಸಮ್ಮತಿ ಸೂಚಿಸಿ, ರಾಮನಾಥ ಬಹಳ ಖಿನ್ನನಾದುದನ್ನು ಕಂಡು ನುಡಿದಳು:

'No anxiety ಮ್ಹಣೂನ ಲಿಹಿಲ ಆಹೆ ಕಾಳಜೀಚ ಕಾಹಿ ಕಾರಣ ನಾಹಿ (ಗಾಬರಿ ಬೇಡ ಎಂದು ಬರೆದಿದೆಯಲ್ಲ ?)

'Yes, perhaps just to console me.' (ಹೌದು. ಆದರೂ ಸುಮ್ಮನೆ ಸಮಾಧಾನಕ್ಕೆ ಬರೆದಿದ್ದರೆ....)

'ಆಜ ಆಪಲೀ ಮಿಸೆಸ್ ಘರಿ ದಿಸತ ನಾಹಿ ?' (ಇವತ್ತ ನಿಮ್ಮ ಮನೆಯವರು ಕಾಣಿಸಲಿಲ್ಲ ಮನೆಯಲ್ಲಿ ?)

'She might have gone with some of her friends. (ತನ್ನ ಯಾರಾದರೂ ಗೆಳೆಯರ ಕೂಡ ಹೋಗಿರಬೇಕು.)

ಛಬೆಗೆ ಸ್ವಲ್ಪ-ಗೊಂದಲವಾದಂತೆ ಕಂಡಿತು. 'ಆಂ ?' ಎಂದಳು.

'ಹೇ ಪಹಾ ತ್ಯಾಂಚೆ ವಿ‍ತ್ರಾಚ ಪತ್ರ' (ಇಕಾ ಅವಳ ಗೆಳೆಯರ ಪತ್ರ) ಎಂದು ಪಾಕೀಟನ್ನು ಛಬೆಯ ಕೈಗಿತ್ತ. ಛಬೆ ರಾಮನಾಥನ ಮುಖ ವನ್ನೆ ನೋಡುತ್ತ ಪಾಕೀಟಿನೊಳಗಿನ ಪತ್ರ ಬಿಚ್ಚಿದಳು. ಅವಳಿಗೇನೂ ಅರ್ಥವಾಗಲಿಲ್ಲ. ಸುಮ್ಮನೆ ಮುಗುಳ್ನಗೆ ನಕ್ಕು 'ಹೇ ಅಮ್ಹಾಲಾ ಗ್ರೀಕ ಎಂಡ್ ಲ್ಯಾಟಿನ್ !' (ಇದೇನು ನಮಗೆ ಗೋಡೆ !) ಎಂದು ತಿರುಗಿ ಕೊಟ್ಟಳು. ರಾಮನಾಥನೂ ನಗುತ್ತ ಅದನ್ನು ಮಡಿಚಿ ತಿರುಗಿ ಪಾಕೀಟಿಗೆ ಸೇರಿಸಿ ಮತ್ತೆ ಅದನ್ನು ಕಿಸೆಯಲ್ಲಿರಿಸಿದ.

'ಛಬೆ, ವಿದ್ಯಾ Seems to be......what shall I say ಛಬೆ?' ರಾಮನಾಥನ ಕಣ್ಣಲ್ಲಿ ದುಃಖ ಹನಿಯಾಗಿತ್ತು.

'Don't worry ರಾಮನಾಥ, please......'

'ವಿದ್ಯಾ thinks I am very conservative. She thinks I do not allow her freedom to develop her hobbies. She thinks......she thinks so many things ಛಬೆ. She must learn photography, she must learn music, she must be an all-round Star......' (ವಿದ್ಯಾ ನನ್ನನ್ನು ಅಪ್ರಗತಿಶೀಲ ಎಂದು ತಿಳಿದಿದ್ದಾಳೆ. ಅವಳ ಸ್ವಾತಂತ್ರ್ಯಕ್ಕೆ ನಾನು ಅಡ್ಡಾಗಿದ್ದೇನೆ ಎಂದು ಅವಳ ಭಾವನೆಯಾಗಿದೆ. ಇಷ್ಟೆ ಅಲ್ಲ, ಇನ್ನೂ ಏನನ್ನೊ ತಿಳಿದುಕೊಂಡಿದ್ದಾಳೆ.... ಫೋಟೋ ತೆಗೆಯು ವದು ಕಲಿಯುತ್ತಾಳಂತೆ....ಸಂಗೀತ ಕಲಿಯುತ್ತಾಳಂತೆ....ಒಟ್ಟಿನಲ್ಲಿ ಸರ್ವ ವಿದ್ಯಾಪಾರಂಗತಳಾಗಿ ತಾರಾಮಣಿಯಾಗಬೇಕೆನ್ನುತ್ತಾಳೆ !) ರಾಮನಾಥ ಒಂದೇಸವನೆ ಬಡಬಡಿಸುವುದನ್ನು ನೋಡಿ ಛಬೆ ಗಾಬರಿಗೊಂಡಳು. ಥಟ್ಟನೆ ಏನೋ ವಿಚಾರ ಹೊಳೆಯಿತು ರಾಮನಾಥನಿಗೆ— 'ತರ ಮೀ ಆಸ ಕರತೊ, ಹೆ ಪತ್ರ ದುಸರ್ಯಾ envelope ಮಧೆ ಠೇವೂನ ~~ಛಬೆ~~-ಲಾಚ ಪಾಠವತೊ............... 'Why should I come in the way of her hobbies? In the way of her progressive pursuits

of life?' ಆಗಿಂದಾಗಲೆ ಕಿಸೆಯೊಳಗಿನ ಒಂದು ಪಾಕೀಟು ತೆಗೆದು ಪ್ರಿಂಟ ಅಕ್ಷರದಲ್ಲಿ ವಿದ್ಯಾವತಿಯ ಮನೆಯ ವಿಳಾಸ ಬರೆದು, ಅಲ್ಲಿಯೆ ಪೋಸ್ಟ ಮಾಡಲಿಕ್ಕೆ ಹೋದವನು ಹಿಂತಿರುಗಿ—'ಹಾ! Let me post it from Poona,' ಎಂದು ಮತ್ತೆ ಕಿಸೆಯೊಳಗಿಟ್ಟುಕೊಂಡ.

ಛಬಿ-ರಾಮನಾಥ ಇಬ್ಬರೂ ಮೆಟ್ಟಿಲೇರುತ್ತ ಬಂದರು. ವಿದ್ಯಾ ಗ್ಯಾಲರಿಯಲ್ಲಿ ನಿಂತಿದ್ದಳು. ಛಬಿ ಸ್ವಲ್ಪ ಅನುಮಾನಿಸಿದಳು. ಅಂಜಿದಳೆಂದೆ ಹೇಳಬಹುದು. ಮೆಲ್ಲನೆ ರಾಮನಾಥನ ಕಿವಿಯಲ್ಲಿ—'ಆಲ್ಯಾತ' ಎಂದವಳೆ ತಮ್ಮ ಮನೆಯೊಳಗೆ ತಾನು ಹೊಕ್ಕಳು.

ವಿದ್ಯಾ ಬಾಗಿಲು ತೆರೆಯದೆ ಹಾಗೇ ನಿಂತಿದ್ದಳು. ರಾಮನಾಥ ಛಬಿಯ ಮನೆಯೊಳಗೆ ಹೋಗಿ ಕೀಲಿಕ್ಕೈ ತೆಗೆದುಕೊಂಡು, ಸಹಸ್ರಬುದ್ಧೆಯವರನ್ನು ಮಾತಾಡಿಸಿ ಬಂದ. ಛಬಿ ರಾಮನಾಥನ ಕೈಯಲ್ಲಿ ಕೀಲಿಕ್ಕೈ ಕೊಟ್ಟು, ಮೆಲ್ಲನೆ—'ತೇ ಪತ್ರ?' ಎಂದಳು. ರಾಮನಾಥನು ಅದನ್ನು ಪಾಕೀಟಿನಲ್ಲಿಟ್ಟು ಮಡಚಿ ಒಳಕಿಸೆಗೆ ಸೇರಿಸಿದ್ದ. 'ಉದ್ಯಾ ಸಕಾಳೀ ಪೂನಾ ಏಕ್ಸ್‌ಪ್ರೆಸ್‌ಲಾ ಜಾಣಾರ ಹೋಯ್?' ಎಂದಳು ಛಬಿ.

'ಹಾ—' ಎಂದ ರಾಮನಾಥ.

'ಜೇವಣ?' (ಊಟ?) ಎಂದಳು ಛಬಿ.

'Don't worry. I will have something on the way!' (ತೊಂದರೆ ಬೇಡ. ಹಾದಿಯಲ್ಲಿ ಎಲ್ಲಿಯಾದರೂ ತೆಗೆದು ಕೊಳ್ಳುತ್ತೇನೆ.)

ರಾಮನಾಥ ಬಾಗಿಲು ತೆರೆದು ಒಳಗೆ ಹೋದ. ವಿದ್ಯಾ ಅವನ ಹಿಂದಿನಿಂದ ಒಳಗೆ ಹೋದಳು. ಒಬ್ಬರಿಗೊಬ್ಬರು ಮಾತಿಲ್ಲ, ಕತೆಯಿಲ್ಲ.

ರಾತ್ರಿ ಮಲಗುವ ಸಮಯ. ಒಬ್ಬರ ಬಾಯಿಂದಲೂ ಊಟದ ಮಾತೇ ಇಲ್ಲ. ವಿದ್ಯಾ ದೀಪವಾರಿಸಿ ಮಲಗುವ ಹೊತ್ತಿಗೆ ಅನಿವಾರ್ಯವಾಗಿ ರಾಮನಾಥ ಹೇಳಿದ: 'ವಿದ್ಯಾ, ನಾಳೆ ನಾನು ಒಂದು ವಾರ ರಜೆಯ ಮೇಲೆ ಹೋಗುತ್ತೇನೆ.'

ಎಲ್ಲಿಗೆ ಎಂದು ಕೇಳುವ ಕುತೂಹಲವಿದ್ದರೂ ಅದನ್ನು ತೋರಗೊಡಲಿಲ್ಲ ವಿದ್ಯಾ. ಅವಳ ಮೌನವನ್ನೆ ಅರ್ಥಮಾಡಿಕೊಂಡು ಸುಮ್ಮನೆ ವಿಪರೀತಕ್ಕೆ

ಇಡಬಾರದೆಂದು ರಾಮುನಾಥನೇ ಹೇಳಿದ: ' ಮಗು ಮೋಹನನಿಗೆ ಅಜಾರಿ ಎಂದು ಧಾರವಾಡದಿಂದ ತಾರು ಬಂದಿದೆ. '

' ಯಾರ ಮಗೂ ? ' ವಿದ್ಯಾ ಅಂತೂ ತುಟಿಯೆರಡು ಮಾಡಿದಳು.

' ನಿನ್ನ ಸವತಿಯ ಮಗ ಮೋಹನ. ' ರಾಮುನಾಥನೂ ಅಕ್ಕಸತನದಿಂದಲೆ ಉತ್ತರ ಕೊಟ್ಟ.

' ಅಷ್ಟೇಕೆ ಅಬ್ಬರ ? ಗೊತ್ತಿಲ್ಲದ ವಿಷಯವನ್ನು ಕೇಳಿ ತಿಳಿದುಕೊಳ್ಳಬಾರದೇನು ? '

' ನಿನ್ನ ಮಾತಿನ, ಮಾತಿನ ರೀತಿಯ ಎಲ್ಲಾ ಅರ್ಥ ನನಗಾಗುತ್ತದೆ ವಿದ್ಯಾ. '

' ಆಗುತ್ತಿದ್ದರೆ ಇಷ್ಟು ವಿರಸ ಹುಟ್ಟುತ್ತಲೆ ಇರಲಿಲ್ಲ. '

' ವಿದ್ಯಾ, ನಿನ್ನೊಡನೆ ವಾದಿಸುವುದು ನನಗಿಷ್ಟವಿಲ್ಲ. ನಿನಗೆ ಕೈಮುಗಿದು ಬೇಡಿಕೊಳ್ಳುತ್ತೇನೆ, ನನ್ನ ಮನಸ್ಸನ್ನು ಇನ್ನಷ್ಟು ಕದಡಿ ಹುಚ್ಚು ಹಿಡಿಸಬೇಡ. '

' ಶಟ್ ಅಪ್ ಯೂ....?ಎಂದು ರಾಮುನಾಥ ಆಕ್ರೋಶದಿಂದ ಚೀತ್ಕರಿಸಿದರೆ ವಿದ್ಯಾ ನಿಜವಾಗಿಯೂ ನಡುಗಿ ಬೆದರಿಹೋದಳು. ರಾಮುನಾಥ ಕಿಸೆಯೊಳಗಿನ ಪಾಕೀಟು ತೆಗೆದ. ಅವಳೆದುರಿಗೇ ಒಡೆದ. ಒಳಗಿನ ಕಾಗದಗಳನ್ನು ಅವಳ ಮುಂದೇ ಚೆಲ್ಲಿದ. ಹಿಡಿದು ಹೊಡೆಯುವನೇನೊ ಎಂಬಂತೆ ಆವೇಶಗೊಂಡು ' ಹೇಳು, ಅಡ್ಡಹಾದಿ ಹಿಡಿದವರು ಯಾರು?.... ಹೇಳು ಅಡ್ಡ ಹಾದಿ ಹಿಡಿದವರು ಯಾರು ?....ಹೇಳು....' ಎಲ್ಲಿಂದ ಅಂತಹ ಶಕ್ತಿ ಆವೇಶಗಳು ಮೈಯೊಳಗೆ ಬಂದುವೊ ಏನೊ, ಗಂಟಲು ಹರಿಯುವಂತೆ ಚೀರಿದ ರಾಮುನಾಥ.

' ಹೊಡೆಯಬೇಕೆನಿಸಿದರೆ ಹೊಡೆದುಬಿಡಿರಿ. ಮುಂದಿನದು ನಾನು ನೋಡಿಕೊಳ್ಳುತ್ತೇನೆ. ' ಎಂದು ಗಂಭೀರವಾಗಿ ಹೇಳಿದಳು ವಿದ್ಯಾ. ಝುರ್ರನೆ ಇಳಿಯಿತು ರಾಮುನಾಥನ ಆವೇಶ. ನಿಶ್ಶಕ್ತನಾಗಿ ಮಾತಾಡಿದ: ' ವಿದ್ಯಾ, ನಿನ್ನನ್ನು ಹೊಡೆಯಲು ನಾನೂ ಪಶುವಲ್ಲ, ನೀನೂ ಪಶುವಲ್ಲ. ಇದೋ ಈ ಪತ್ರ ಓದು. ಯಾರ ಹೃದಯ ತಿಳಿ, ಯಾರ ಹೃದಯ ಕಲುಷಿತ ನೀನೇ ಹೇಳು. '

ವಿದ್ಯಾ ಪತ್ರವನ್ನು ಸಮಗ್ರವಾಗಿ ಓದಿಕೊಂಡಳು.

‘ ಇದರಲ್ಲಿ ನಿಮಗೇನು ಅಂತಹ ಸರಕ-ವಿಚಾರ ಕಂಡುಬಂತು ? ’

‘ ವಿದ್ಯಾ, ಈ ಮನುಜ ಎಂದರೆ ಯಾರು ? ಮತ್ತು ಮಜನೂ ಅಲ್ಲ ಎಂದು ಬರೆಯುತ್ತಾನೆ. ’

‘ ಶಬ್ದದೊಳಗಿನ ವಿನೋದವೂ ಅರ್ಥವಾಗದೆ ಹೋಯಿತೆ ? ’

‘ ಶಬ್ದ, ಕಾವ್ಯ, ಕಾವ್ಯದೊಳಗಿನ ಅಲಂಕಾರ ಎಲ್ಲಾ ಅರ್ಥವಾಯಿತೆಂದೇ ಕೇಳುತ್ತೇನೆ. ತಾನು ಮಜನೂ ಅಲ್ಲ ಏಕೆಂದರೆ ನೀನು ಅವನ ಪಾಲಿನ ಲೈಲಾ ಆಗಲಿಲ್ಲ ಎಂದೂ ಹೇಳುತ್ತಾನೆ. ನಾನು ಬಲ್ಲೆ. ಆದರೆ ಆ ಮನುಜನೆಂಬ ಮಹಾನುಭಾವನಾರು ಎಂದು ನನ್ನ ಪ್ರಶ್ನೆ. ’

‘ ಮನೋಹರ. ನನ್ನ ಕ್ಲಾಸಮೇಟು. ‘ ಮನೂ ’ ಎಂದೇ ಎಲ್ಲರೂ ಅವನನ್ನು ಕರೆಯುವುದು. ’

‘ ಜ. ಏನದು ? ’

‘ ಜನಾರ್ದನ. ಅವರ ತಂದೆಯ ಹೆಸರು. ‘ ಮನುಜ ’ ಮನೋಹರನ ‘ ನಿಕ್‌ನೇಮ್ ’ಆಗಿದೆ.

‘ ಮನೂ ಕ್ಲಾಸಮೇಟ ! ಅಷ್ಟೇ ಇದ್ದಿರಲಿಲ್ಲನೆಂದು ತೋರುತ್ತದೆ.... play-mate......room-mate......’ಎಂದು ರಾಮನಾಥ ತನ್ನ ಸಂಶಯದ ಜಾಳಿಗೆ ಬೀಸಿದ.

‘ ಹೌದು. ಮನೂ ನನ್ನ ‘ ಲಾಯಿಫ್-ಮೇಟು ’ ಆಗಿದ್ದಾನೆಇನ್ನೂ. ರಾಮ್, ನಿನ್ನ ವಾಕ್‌ಸ್ವಾತಂತ್ರ್ಯಕ್ಕೆ ನಾನೇಕೆ ಅಡ್ಡಿ ಬರಲಿ ? ’

‘ ವಿದ್ಯಾ, ನಾನು ಛಬೆಯೊಂದಿಗೆ ಕೆಲಹೊತ್ತು ಕೂಡಿ ಕಳೆದರೆ ನೀನು ಎಷ್ಟೊಂದು ಸಿಡಿಸಿಡಿ ಹಾಯ್ದೆಯಲ್ಲ ? ’

‘ ರಾಮ್ ! ನಿನ್ನ ಮನಸ್ಸಿನಲ್ಲೇನಿದೆಯೊ ಅದನ್ನು ಮಾಡಿಬಿಡು. ಅಂಜಿಕೆಗಾಗಿ ಹೆಂಡತಿಯನ್ನು ಪ್ರೀತಿಸುವ ಪುರುಷ ನನಗೆ ಬೇಕಿಲ್ಲ. ’

‘ ಗಂಡನ ಅಂಜಿಕೆ ಹೋಗಲಿ, ವಿವೇಕದ ಅಂಜಿಕೆಯೂ ಬೇಡವೆನ್ನುವ ಸ್ತ್ರೀ ನನಗೆ ಬೇಕಿಲ್ಲ. ’

‘ ಬೇಕಿಲ್ಲದಿದ್ದರೆ ನಿನಗೆ ಬೇಕಾದುದನ್ನು ಮಾಡಬಹುದು. ನಾನು ಹೆಚ್ಚೇನು ಹೇಳಬಲ್ಲೆ ? ’

' ವಿದ್ಯಾ, ನಾನು ನಾಳೆ ಬೆಳಿಗ್ಗೆ ಊರಿಗೆ ಹೋಗಬೇಕಾಗಿದೆ. '

' ಸರಿ. '

' ವಿದ್ಯಾ, ಊರಿಗೆ ಹೋಗುವ ಮುನ್ನಾ ದಿನ ಇಷ್ಟು ರಸಕಸಿ ಬೇಡ. ಮೊದಲೇ ನನ್ನ ಹೃದಯ, ಮನಸ್ಸುಗಳೆರಡೂ ಅಸ್ವಸ್ಥವಾಗಿವೆ. '

' ನೀನು ಊರಿಗೆ ಹೋಗುವ ನಿಶ್ಚಯ ಮಾಡಿರುವಾಗ ನಾನೆಲ್ಲಿ ಅಡ್ಡ ಬಂದಿರುವೆ ? ನಿನ್ನ ಹೃದಯ ಮನಸ್ಸುಗಳ ಅಸ್ವಾಸ್ಥ್ಯಕ್ಕೆ ನಾನು ಹೇಗೆ ಕಾರಣಳೊ ನನಗೇ ಗೊತ್ತಿಲ್ಲ.........ನಾನು ಕೆಲಕಾಲ ಪುಣೆಗೆ ಹೋಗಬೇಕಾಗಿದೆಯೆಂದಾಗ ನೀನು ಮುಖ ಮುದುರಿದಂತೆ ನಾನೇನೂ ಮುದುರುವುದಿಲ್ಲ. ಬೇಕಾದ ಹಾಗೆ ಹೋಗಿ ಬಾ ರಾಮ್. '

' ವಿದ್ಯಾ, ಎಷ್ಟು ನಿಸ್ಕರುಣೆಯಿಂದ ಮಾತನಾಡುತ್ತಿದ್ದೀಯಲ್ಲ ನೀನು!' ಸಿಟ್ಟನಿಂದ ಕೆಣಕುವುದಕ್ಕಿಂತ ಅಂತಃಕರಣ ಕರಗುವಂತೆ ತಿಳಿಹೇಳಿ ನೋಡಬೇಕೆಂದು ರಾಮನಾಥನಿಗೆನಿಸಿತು.

' ರಾಮ್, ನಿಷ್ಕರುಣಳು ನಾನಲ್ಲ. '

' ನಾನೇ ? '

' ಅದನ್ನು ನಾನೇಕೆ ಹೇಳಬೇಕು. ಅಂತಃಕರಣವುಳ್ಳ ನಿನಗೇ ತಿಳಿಯಬೇಕು. '

' ನಾನೇನು ನಿಷ್ಕರುಣೆ ತೋರಿದ್ದೇನೆ ನಿನಗೆ ವಿದ್ಯಾ ?'

' ನಾನೇನು ತೋರಿದ್ದೇನೆ ರಾಮ್ ? '

' ವಿದ್ಯಾ, ಹೇಳಲಿ ? ನೀನು ಸಿಟ್ಟು ಮಾಡಿಕೊಳ್ಳಬೇಡ. ನೋಡು ಮಗುವಿಗೆ ಕಾಯಿಲೆಯೆಂದು ತಂತಿ ಬಂದಿದೆ. ಮಗುವಿಗೆ ಕಾಯಿಲೆಯೆಂದು ಕೇಳಿ ಎಂತಹ ಪರಕೀಯರಿಗೂ ಕನಿಕರ ಹುಟ್ಟುತ್ತದೆ ........'

' ಛೆಛೆ ಪರಕೀಯಳಲ್ಲವಲ್ಲ........'

' ವಿದ್ಯಾ, ನನ್ನನ್ನು ರೇಗಿಸಬೇಡ. ನಾನು ಹೇಳುವ ಮಾತು ಕೇಳು. ಮಗುವಿಗೆ ಕಾಯಿಲೆಯೆಂದಾಗ ಮಗುವಿನ ತಾಯಿಯ ಸ್ಥಾನದಲ್ಲಿರುವ ನಿನಗೆ........'

' ನನ್ನ ಸವತಿಯ ಮಗು ಎಂದು ಬೊಟ್ಟುಮಾಡಿ ತಿವಿದೆಯಲ್ಲಾ....'

'ವಿದ್ಯಾ, ಅಷ್ಟೊಂದು ರೊಚ್ಚಿಗೇಳಿಸಲಿಕ್ಕೆ ನಿನ್ನ ನಡೆ-ನುಡಿಗಳೇ ಕಾರಣ'

'ನನಗೊಬ್ಬ ಸವತಿಯಿದ್ದಳೆಂಬ ಮಾತನ್ನೆ ಮುಚ್ಚಿಟ್ಟ ನಿನ್ನ ನಡೆ-ನುಡಿಗಳಿಗೇನೆನ್ನಬೇಕು ರಾವ್? ಮದುವೆಯ ಮೊದಲೆ ನನಗೊಬ್ಬ ಮಗನಿರುವನೆಂಬ ಮಾತನ್ನು ಮುಚ್ಚಿಟ್ಟ ನಿನ್ನ ನಡೆ-ನುಡಿಗಳಿಗೇನೆನ್ನಬೇಕು ರಾವ್?'

'ವಿದ್ಯಾ, ನಾನು ಬೇಕೆಂದು ನಿನ್ನಿಂದ ಮುಚ್ಚಿಡಲಿಲ್ಲ. ನನ್ನ ನಿನ್ನ ಮದುವೆಗೆ ಯಾವ ಪೂರ್ವಾಪರ ವಿಚಾರಣೆಯೂ ಬೇಕಿರಲಿಲ್ಲ. ಕನ್ಯಾ ಪರೀಕ್ಷೆ, ಕುಲಗೋತ್ರ ವಿಚಾರ, ಗುಣಗಳ ಅನುಕೂಲಗಳನ್ನೆಲ್ಲಾ ಪರಿಶೀಲಿಸಿ ಅಗ್ನಿಸಾಕ್ಷಿಯಾಗಿ ಸಪ್ತಪದಿವಿಧಿಯಿಂದ ಆದ ಮದುವೆಯಲ್ಲ ನಮ್ಮದು. ಟ್ರಾಮಿನಲ್ಲಿ ಮೊಳೆತು, ಹೋಟೆಲಿನಲ್ಲಿ ಚಿಗಿತು, ಮಾರ್ಕೆಟ್ಟಿನಲ್ಲಿ ಮುಕ್ತಾಯಗೊಂಡ ವ್ಯಾಪಾರೀ ಮದುವೆ ನಮ್ಮದು. ನಿನ್ನ ಮನೆತನವೇನು, ನಿನ್ನ ಕುಲಗೋತ್ರವೇನು, ನಿನ್ನ ವಂಶಾವಳಿಯೇನು, ಏನೊಂದೂ ಕೇಳುವ ಗೋಜಿಗೆ ನಾನು ಹೋಗಲಿಲ್ಲ. ನೀನೂ ನನ್ನ ಬಗ್ಗೆ ಕೇಳುವ ಗೋಜಿಗೆ ಹೋಗಲಿಲ್ಲ........'

'ನೀನಾಗಿಯೆ ಹೇಳಿದ್ದರೆ ನಾನು ಒಲ್ಲೆನ್ನುತ್ತಿರಲಿಲ್ಲ. ನಿನ್ನ ಪ್ರಾಮಾಣಿಕತೆ ಸಜ್ಜನಿಕೆಗಳನ್ನು ಮೆಚ್ಚಿ, ಮುಗ್ಧಳಾಗುತ್ತಿದ್ದೆ ನಿನ್ನ ಪ್ರೇಮುವರ್ತನೆಗೆ.'

'ವಿದ್ಯಾ, ಜಾನಕಿಯ ಕೈಹಿಡಿದು, ಜಾನಕಿಯ ಪ್ರೇಮವಲ್ಲರಿಯ ವೃಕ್ಷವಾಗಿ ಎಡೆಯೆಡೆಯಲ್ಲಿ ಬೆಳೆದು ಬಂದು, ಅವಳ ಮುಗ್ಧವಾದ ಉಚ್ಚ ಸಂಸ್ಕೃತಿದ್ಯೋತಕವಾದ, ಸರಸವಾದ ನಯವಾದ ನಡೆ-ನುಡಿ, ಪ್ರೇಮ, ಭಕ್ತಿಗಳಿಗೆಲ್ಲಾ ಮನಸೋತ ನನಗೆ ನಿನ್ನ ಹೃದಯಶೂನ್ಯಪ್ರೇಮವು ನನಗೇಕೊ ವಿಚಿತ್ರವೆನಿಸಿತು.....'

'ಹೃದಯಶೂನ್ಯಪ್ರೇಮವನ್ನು........!'

'ಘಸಿಗೆ ಬಿದ್ದು ಕೊಂಡುಕೊಂಡೆನೆಂದು ಹೇಳಿದರೆ ಕೋಪಿಸಿಕೊಳ್ಳಬೇಡ ವಿದ್ಯಾ. ಇನ್ನು ಆ ಪ್ರೇಮವನ್ನು ಸರಸವಾಗಿ ಹೇಗೆ ಮಾಡುವುದು ಎಂಬುದನ್ನು ವಿಚಾರಿಸೋಣ....ವಿದ್ಯಾ, ನನ್ನ ಒಡಲೊಳಗಿನ ಗುಟ್ಟಿನ ಎನಸಿಕೆಯೊಂದನ್ನು ನಿನ್ನ ಮುಂದೆ ಹೇಳುತ್ತೇನೆ: ಜಾನಕಿಯಲ್ಲಿಲ್ಲದ ಒಳ್ಳೇ ಶಿಕ್ಷಣ, ಜಾನಕಿಯಲ್ಲಿದ್ದ ಒಳ್ಳೇ ಗುಣಗಳನ್ನು ನಿನ್ನಲ್ಲಿ ಕಾಣಬೇಕು; ನನ್ನ ಜೀವನವನ್ನು ಸರಸವಾಗಿಸಬೇಕು ಎಂದು ಹೊರಟೆ. ನಿನ್ನ ಕೈಹಿಡಿದೆ. ನಿನ್ನ

ಶಿಕ್ಷಣಕ್ಕೆ ಮೆಚ್ಚಿದೆ. ನಿನ್ನ ಪ್ರಥಮದರ್ಶನದ ಪ್ರಥಮೋಪಚಾರಕ್ಕೆ ಮನ ಸೋತೆ. ನಿನ್ನ ಸ್ತ್ರೀಸಾಧಾರಣ ಸೌಂದರ್ಯಕ್ಕೆ ಹಸಿದವನಾದುದರಿಂದ ನಿನ್ನನ್ನರಸಿದೆ. ಮುಂಬಯಿಯ ಜೀವನದಲ್ಲಿ ಅನಾಥನಾಗಿ, ವಿಧುರನಾಗಿ ಏಕಾಂಗಿಯಾಗಿ ಬಹುದಿನ ಇರುವುದು ಸಾಧ್ಯವಿಲ್ಲವೆಂದು ತೋರಿತು. ಮುಂಬಯಿಯಂತಹ ಮಾಯಾನಗರದಲ್ಲಿ ಹೆಜ್ಜೆಹೆಜ್ಜೆಗೆ ಮಾಟ, ಹೆಜ್ಜೆ ಹೆಜ್ಜೆಗೆ ಬೇಟ, ಹೆಜ್ಜೆಹೆಜ್ಜೆಗೆ ಜಾಲ, ಹೆಜ್ಜೆಹೆಜ್ಜೆಗೆ ಎಡವಿ ಬೀಳುವ ಹಾವಸೆ. ಎಂದ ಮೇಲೆ ಮರ್ಯಾದೆಯಿಂದ ಮದುವೆ ಮಾಡಿಕೊಂಡಿರಬೇಕು ಎನಿಸಿತು. ನನ್ನದು ಎರಡನೆಯ ಸಂಬಂಧವಲ್ಲದಿದ್ದರೆ ನಿನ್ನನ್ನು ನಿಂತ ಕಾಲ ಮೇಲೆ ಮದುವೆಯೆ ಆಗುತ್ತಿರಲಿಲ್ಲ. ಮದುವೆಯಾದೆ........'

'ಮದುವೆಯಾಗಿ ನನ್ನ ಜೀವನದ ಗುರಿಗೆ ನೀನು ಎರವಾದೆ. ಮದುವೆಯ ಮಂಗಲಸೂತ್ರ ಕಟ್ಟಿ, ನನ್ನ ಸ್ವಾತಂತ್ರ್ಯವನ್ನು ದಿಗ್ಬಂಧಗೊಳಿಸಿದೆ. ನನಗೆ ಎಷ್ಟೆಷ್ಟೋ ಆಶೆ-ಆಕಾಂಕ್ಷೆಗಳಿದ್ದುವು. ಸಂಗೀತ ಕಲಿಯಬೇಕೆಂದಿದ್ದೆ. ರೇಡಿಯೊ-ಸ್ಟಾರ್ ಆಗಬೇಕೆಂದಿದ್ದೆ. ಚಿತ್ರಕಲೆ ಕಲಿಯಬೇಕೆಂದಿದ್ದೆ. ಕ್ಯಾಮೆರಾ ಕಲಿಯಬೇಕೆಂದಿದ್ದೆ. ರಾಮ್, ನಿನ್ನಿಂದ ನನ್ನ 'ಹೊಬೀಜ್' ಎಲ್ಲಾ ಮುರುಟಿ ಸುರುಟಿ ಹೋದುವು..........'

'ವಿದ್ಯಾ, ನಮ್ಮ ಮದುವೆಯಾಗಿ ಐವತ್ತು ವರುಷಗಳೇನೂ ಆಗಿ ಹೋಗಿಲ್ಲ. ಅಲ್ಲವೆ? ಇನ್ನೂ ಬೇಕಾದಷ್ಟು ಅವಧಿಯಿದೆ. ನಿನ್ನ ಮರ್ಯಾದಿತ 'ಹೊಬೀಜ್'ಗೆ ನಾನೆಂದೂ ಅಡ್ಡ ಬಂದಿರುವುದಿಲ್ಲ. ನೀನು ಸಂಗೀತ ಕಲಿತರೆ ನನಗೆ ಅಭಿಮಾನವಿದೆ. ಆದರೆ ಕಲಿತ ಸಂಗೀತವನ್ನು ಮಾರಾಟಕ್ಕೆ ಹಚ್ಚಬೇಕೆಂಬ ಅಭಿಪ್ರಾಯ ನನ್ನದಲ್ಲ. ನೀನು ಚಿತ್ರಕಾರಳಾದರೆ ನನಗೆ ಆನಂದವಿದೆ. ಆದರೆ ಚಿತ್ರಕಾರರಿಗೆ ನಿನ್ನ ಸೌಂದರ್ಯವನ್ನು ಮಾರಿ ಕೊಂಡು.........'

'ಏನೆಂದೆ?'

'ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ'ನಲ್ಲಿ ಚಿತ್ರಕಾರನೊಬ್ಬ ನಿನ್ನನ್ನು 'pose' ಕೊಡಲಿಕ್ಕೆ ಕರೆದಿದ್ದಾನೆಂದೆಯಲ್ಲ?'

'ಅದು ನನ್ನ 'Hobby' ಮಾತ್ರ. ಅದರಿಂದ ಹಣ ಸಂಪಾದಿಸಬೇಕೆಂದು ನನ್ನ ಆಶೆಯಿಲ್ಲ.'

'ವಿದ್ಯಾ, ಅಂತೆಯೆ ಮರ್ಯಾದಿತ 'Hobbies' ಗೆ ನನ್ನ ಅನುಮತಿ ಯೆಂದು ಹೇಳಿದೆ. ನಿನ್ನ ಗಂಡ ನಾನು. ನನ್ನ ಕೈಹಿಡಿದ ಹೆಂಡತಿ ನೀನು. ಇನ್ನೊಬ್ಬ ಚಿತ್ರಕಾರನೆದುರಿಗೆ ಅವನಿಗೆ ಬೇಕಾದ ಹಾಗೆ ನಿನ್ನ ಅಂಗಾಂಗ ಗಳನ್ನು ತೋರ್ಲಿಸಿ 'pose' ಕೊಡಬೇಕೆಂದರೆ........'

'ರಾಮ್, ಮತ್ತೆ ಅಡ್ಡಹಾದಿ ಹಿಡಿದು ಮಾತಾಡುತ್ತಿರುವೆ. ಚಿತ್ರ ಕಾರನು ನನ್ನ ಅಂಗಾಂಗಗಳನ್ನು ನೋಡಬೇಕೆಂದು ಚಿತ್ರ ತೆಗೆಯುವುದಿಲ್ಲ. ತನ್ನ ಚಿತ್ರಕಲೆಯನ್ನು ಜನರು ನೋಡಿ ಆನಂದಪಡೆಯಬೇಕೆಂದು ಅವನು ಚಿತ್ರ ತೆಗೆಯುತ್ತಾನೆ; 'human study' ಎಂದು ನಮ್ಮ 'pose' ಕೇಳು ತ್ತಾನೆ.'

'ಹೌದು, 'human study' ಎಂದೇ ಅಂಗಾಂಗಗಳನ್ನು ಅವ ಲೋಕಿಸಬಹುದು. ಆದರೆ ಮಾಡಿಕೊಂಡ ಗಂಡನಿಗೆ ಆಗುವ ಹೃದಯ ಸಂಕಟ, ಮನಸ್ಸಿನ ಅವಹೇಳನೆಗಳನ್ನು ಆ ಚಿತ್ರಕಾರಕನೇನು ಬಲ್ಲ?'

'ಅಂತೇ ಹೇಳುವುದು ರಾಮ್, ನಿನ್ನ ಮನಸ್ಸಿನ್ನೂ ವಿಶಾಲವಾಗ ಬೇಕು, ಉದಾರವಾಗಬೇಕು ಎಂದು.'

'ವಿದ್ಯಾ, ಜೆ. ಜೆ. ಹಾಸ್ಪಿಟಲ್ಲಿನಲ್ಲಿಯೂ 'human study' ಗೆಂದೇ ಹೆಣಗಳನ್ನು ರೊಕ್ಕ ಕೊಟ್ಟು ಕೊಂಡುಕೊಳ್ಳುತ್ತಾರೆ. ಅಂತೆ ಮನೆತನಸ್ಥರು ಯಾರೂ ಹೆಣಗಳನ್ನು ಮಾರಿಕೊಳ್ಳುವುದಿಲ್ಲ........'

'ರಾಮ್! ಅಯ್ಯೋ ರಾಮನಾಥ! ಕಲೆಗೂ ಕಳೇಬರಕ್ಕೂ ಏನೂ ಅಂತರವೇ ಇಲ್ಲದಾಯಿತೆ ನಿನಗೆ?'

'ವಿದ್ಯಾ, ಜಾನಕಿಯೊಡನೆಯ ದಾಂಪತ್ಯಜೀವನದ ಒಂದು ಸಂಗತಿ ಹೇಳುತ್ತೇನೆ ಕೇಳು: ನಾನಿನ್ನೂ ಎಂ. ಎ.ದಲ್ಲಿ ಅಭ್ಯಾಸ ಮಾಡುತ್ತಿದ್ದೆ. ಜಾನಕಿಯ ತೌರುಮನೆಯವರೆಲ್ಲಾ ಒಮ್ಮೆ ಗೋಕರ್ಣಕ್ಕೆಂದು ಯಾತ್ರೆ ಹೊರಡಿಸಿದರು. ನಾವೂ ಹೋಗಿದ್ದೆವು. ಸಮುದ್ರಸ್ನಾನಕ್ಕೆಂದು ಹೋದೆವು. ಪೂಜಾರಿ ಏನೋ ಸಂಕಲ್ಪ ಹೇಳಿ ಸಮುದ್ರಸ್ನಾನ ಮಾಡಿಸುತ್ತಿದ್ದ. ಪೂಜಾರಿ ನನ್ನ ಕೈಹಿಡಿದು ಕರೆದುಕೊಂಡು ಹೋಗಿ ಮುಳುಗು ಹಾಕಿಸಿದ. ನಾನು ದಂಡೆಗೆ ಬಂದೆ. ಜಾನಕಿ ಹೋಗಬೇಕಾಯಿತು. ಪೂಜಾರಿಯ ಹೊರತಾಗಿ ಇನ್ನಾರ ಆಸರ ದೊರೆಯುವಂತಿರಲಿಲ್ಲ. ನಿರ್ವಾಹವಿಲ್ಲದೆ ಅವಳ ತಂದೆ,

ತಾಯಿಯ, ಮತ್ತು ನನ್ನ ಬಲವಂತಕ್ಕೆ ಜಾನಕಿ ಪೂಜಾರಿಯೊಡನೆ ಮುಳುಗು ಹಾಕಲಿಕ್ಕೆ ಹೋದಳು. ಆಸರಕ್ಕೆಂದು ಪೂಜಾರಿ ಅವಳ ಕೈಹಿಡಿದಿದ್ದ. ಮುಳುಗು ಹಾಕಿ ಎದ್ದವಳೇ–ಜಾನಕಿಗೆ ಪೂಜಾರಿಯ ಬಗ್ಗೆ ಏನು ಅನುಮಾನ ವಾಯಿತೊ ಏನೊ—ನಡುನೀರಿನಲ್ಲಿ ನಿಂತಿದ್ದವಳು 'ನೀವು ಬನ್ನಿರಿ ಆಸರಕ್ಕೆ, ಇಲ್ಲವಾದರೆ ಯಾರೂ ಬೇಡ ನಾನೊಬ್ಬಳೇ ಬರುತ್ತೇನೆ'ಂದು ಅಷ್ಟು ದೂರ ಹೋಗಿದ್ದವಳು ಪೂಜಾರಿಯ ಕೈ ಕೊಸರಿಕೊಂಡು ಒಬ್ಬಳೇ ಧೈರ್ಯವಾಗಿ ಧಡಧಡ ಸಾಗಹತ್ತಿದಳು. ಹಿಂದಿನಿಂದ ಒಂದು ತೆರೆ ಅಬ್ಬರಿಸುತ್ತ ಬಂದು ತಡಹಾಯಿತು. ಜಾನಕಿ ಕುಸ್ಸರಿಸಿಕೊಂಡು ಬಿದ್ದಳು. ಪೂಜಾರಿ 'ಅಯ್ಯೋ ಅವ್ವಾಅವರೊ!' ಎಂದು ಕೈಹಿಡಿಯಲು ಹೋದರೆ ಕಿಡಿಕಿಡಿಯಾಗಿ 'ನಾನು ಮುಳುಗಿದರೂ ಚಿಂತೆಯಿಲ್ಲ. ತಮ್ಮ ಸಹಾಯ ಸಾಕು, ನಮಸ್ಕಾರ!' ಎಂದು ಬಿಟ್ಟಳು. ಆಮೇಲೆ ನಾನೇ ಹೇಗೋ ಧಾವಿಸುತ್ತ ಹೋದೆ......'

'ಹೌದು. ನಿಮ್ಮ ಜಾನಕಿ ಝಾಂಸಿರಾಣಿಗಿಂತಲೂ ಶೂರಳು. ನನಗೆ ಅಷ್ಟು ಶೌರ್ಯವಿಲ್ಲ, ಧೈರ್ಯವಿಲ್ಲ. ಒಪ್ಪಿಕೊಳ್ಳುತ್ತೇನೆ ಆಯಿತೊ? ಏನು ಬರೆದುಕೊಡಬೇಕೊ?'

'ವಿದ್ಯಾ, ಸ್ತ್ರೀಯರಿಗೆ ಮಾನಮರ್ಯಾದೆಗಳು ಭೂಷಣ. ಒಂದು ಮರ್ಯಾದೆಯನ್ನು ಮೀರಿ ನಿಂತರೆ....'

'ರಾಮನಾಥ, ನೀವು 'Conservative' ಅಷ್ಟೆ ಅಲ್ಲ ಬಹಳ 'Puritan' ಎಂದು ಕಾಣುತ್ತೀರಿ. ಸುಶಿಕ್ಷಿತ ಸ್ತ್ರೀ ನಿಮಗೆ ಬೇಕಾಗಿತ್ತು ಎಂದು ಹೇಳಿದಿರಿ. ಸುಶಿಕ್ಷಿತ ಹೆಂಡತಿ ಬೇಕು, ಅವಳಿಗೆ ಸ್ವಾತಂತ್ರ್ಯ ಕೊಡುವುದು ಬೇಡ. ಎರಡೂ ಅಸಮಂಜಸ.'

'ವಿದ್ಯಾ, ಸ್ವಾತಂತ್ರ್ಯವೆಂದರೇನು? ಸ್ವೈರಾಚಾರವಾಗಬಾರದಷ್ಟೆ?'

'ಏನು ಹಾಗೆಂದರೆ? ಗಂಡಸೂ ಮಾನವಪ್ರಾಣಿ, ಹೆಂಗಸೂ ಮಾನವ ಪ್ರಾಣಿ. ನಿಮ್ಮಷ್ಟೇ ನಾನೂ ಕಲಿತವಳು. ನಿಮಗಿರುವ ಹಕ್ಕುಬಾಧ್ಯತೆಗಳು ನನಗಿರಬಾರದು ಎಂದರೆ ದೇವರ ಕಣ್ಣಿಗೆ ಅನ್ಯಾಯವಾಗಿ ಕಾಣುವುದಿಲ್ಲವೆ ಇದು?'

'ವಿದ್ಯಾ, ಹೆಂಗುಸಿಗೆ ಹೆಣ್ಣುಹೃದಯವಿರುತ್ತದೆ. ಸುಶಿಕ್ಷಿತ ಹೆಂಗು ಸೆಂದು ಹೆಣ್ಣುಹೃದಯವನ್ನೆ ಬದಲಿಸಿಬಿಡುವುದೆ?'

‘ ನಿನ್ನ ಮಾತಿನ ಅರ್ಥವಾಗುವುದಿಲ್ಲ ನನಗೆ. ’

‘ ಮದುವೆಯಾದ ಹೆಂಗುಸಿಗೆ ಗೃಹಿಣಿ ಎನ್ನುತ್ತಾರೆ. ಹೊರಗೆ ದುಡಿದು ಹಸಿದು ಬಂದ ಗಂಡನಿಗೆ ಹೆಂಡತಿ ಮಾತೃಸ್ಥಾನದಲ್ಲಿದ್ದುಕೊಂಡು ಅನ್ನ ಪೂರ್ಣಿಯಾಗಿ ಊಟಕ್ಕೆ ಬಡಿಸುತ್ತಾಳೆ. ಗಂಡನ ಮನಸ್ಸು ಹಗುರಾಗಿ, ಹುರುಪಾಗುವಂತೆ ಮನೆಯ ವಾತಾವರಣವನ್ನು ಕಲ್ಪಿಸುತ್ತಾಳೆ. ಗಂಡನ ಅಭಿರುಚಿಗಳಿಗೆ ಅನುಗುಣವಾಗಿ ಊಟ-ಉಪಚಾರ ಮಾಡಿ ನೀಡುತ್ತಾಳೆ. ವಿದ್ಯಾ,ನನ್ನ ಜಾನಕಿ ನನ್ನ ಮನಸ್ಸಿನ ಒಲವುಗಳನ್ನರಿತುಕೊಂಡು ಅದರಂತೇ ನಡೆದುಕೊಳ್ಳುತ್ತಿದ್ದಳು. ನನ್ನ ಒಲವುಗಳನ್ನರಿತುಕೊಂಡೇ ನನ್ನ ಹೊಟ್ಟೆಯ ಹಸಿವು ತಣಿಸುತ್ತಿದ್ದಳು. ನನ್ನ ಒಲವುಗಳನ್ನರಿತುಕೊಂಡೇ ನನ್ನ ಹೃದಯದ ಹಸಿವನ್ನು ತಣಿಸುತ್ತಿದ್ದಳು. ಜಾನಕಿಯೊಡನೆ ನನ್ನ ಜೀವನ ಮುದ್ರಣ ಮನೋರಮೆಯುರಂತಿತ್ತು. ಜಾನಕಿ ಜಾಣೆ, ಸುಶಿಕ್ಷಿತಳಲ್ಲ. ಸುಶಿಕ್ಷಿತಳಾದ ಜಾನಕಿಯನ್ನು ಕಾಣಬೇಕೆಂದು ನಾನು ಬಗೆದೆ. ಜಾನಕಿಯಲ್ಲದ........’

‘ ವಿದ್ಯಾ ನಿಮ್ಮ ಪಾಲಿಗೆ ಗಂಟುಬಿದ್ದಳು. ಆದರೂ ಇದೇನು, ಬ್ರಹ್ಮ ಗಂಟಲ್ಲ. ಪೇಟೆಯಿಂದ ಕೊಂಡು ತಂದ ಸರಗಂಟು. ’

‘ ವಿದ್ಯಾ, ನೀನೆನ್ನುವ ಮಾತು ನಿಜ. ನಮ್ಮ ಊಟ ಹೋಟೆಲಿನ ಡಬ್ಬಿಯ ಊಟ. ನಮ್ಮ ಉಪಹಾರ ಇರಾಣಿ ಅಂಗಡಿಯ ಉಪಹಾರ. ನಮ್ಮ ಜೀವನ ಮುಶಾಫರಿ. ಈ ಪ್ರೇಮದಾಂಪತ್ಯ ಎರಡು ಗಳಿಗೆಯ ಸಿನೆಮಾ ಶೋದಂತೆ ನಡೆದಿದೆ. ಈ ರಸವಿಲ್ಲದ, ರಾಗವಿಲ್ಲದ, ಮೇಳವಿಲ್ಲದ, ಜೀವವಿಲ್ಲದ ದಾಂಪತ್ಯ ಫಿಲ ಪ್ರೊಡ್ಯೂಸರನೊಂದಿಗೆ ಸಿನೇಮಾ ನಟ ಮಾಡಿಕೊಂಡ ‘ ಕಂಟ್ರಾಕ್ಟ ’ ನಂತೇ ಇದೆ. ’

‘ ರಾಮ್ ! ಒಂದೇ ಮಾತಿನಲ್ಲಿ ಹೇಳಿಬಿಡುವೆ. ನಾವು ಗಂಡಹೆಂಡಿರಾಗಿ ಒಲುಮೆಯಿಂದ ಒಗೆತನ ಮಾಡಿಕೊಂಡಿರಬೇಕಾಗಿದ್ದರೆ ನನಗೂ ಮಾನವಸಹಜವಾದ ಸ್ವಾತಂತ್ರ್ಯವಿದೆಯೆಂಬುದನ್ನು ನೀನು ಒಪ್ಪಿಕೊಳ್ಳಬೇಕು. ಸುಶಿಕ್ಷಿತ ಸ್ತ್ರೀಯಾಗಿರಬೇಕು, ದಾಸಿಯೂ ಆಗಿರಬೇಕೆಂದರೆ ಸಾಧ್ಯವಿಲ್ಲ. ಮುಂಬಯಿಯಲ್ಲಿ ‘ ಮೋಲ್ಕರ್ಣಿ ’ ಗಳೂ ಹಕ್ಕು-ಸ್ವಾತಂತ್ರ್ಯಗಳನ್ನು ಕೇಳುತ್ತಾರೆ. ಸಂಬಳ ಕೊಟ್ಟರೂ ‘Slavery’ ನಿಮಗೆ ಸಿಗಲಾರದು. ........ನಾನೂ ಹಣವನ್ನು ಗಳಿಸುತ್ತೇನೆ, ಎಂದ ಮೇಲೆ ನಾನೂ ಹಣವನ್ನು

ಬಳಸಲು ಬಾಧ್ಯಸ್ಥಳಲ್ಲವೆ ? ನಿಮ್ಮಂತೆ ನನಗೂ ಗೆಳೆಯರು ಇದ್ದಾರೆ. ನಿಮ್ಮಂತೆಯೆ ನಮಗೂ ' Social obligations ' ಇರುತ್ತವೆ. ನಿಮ್ಮಂತೆಯೆ ನನ್ನದೂ ಪತ್ರವ್ಯವಹಾರವಿರುತ್ತದೆ. ನಿಮ್ಮ ' ಲೆಟರಹೆಡ್ ' ನಲ್ಲೇ ನಾನೂ ಪತ್ರ ಬರೆಯಲಾರೆ. ನನಗೂ ವ್ಯಕ್ತಿತ್ವವಿದೆ. ನನಗೂ ಬೇರೆ 'ಲೆಟರ ಹೆಡ್' ಬೇಕಾಗುತ್ತವೆ ಇಷ್ಟೆಲ್ಲಾ ಆಗಿ ಒಂದೇ ಮಾತು ಹೇಳುತ್ತೇನೆ. ನನಗೆ ಗಂಡಸರು ಗೆಳೆಯರಿರುತ್ತಾರೆಂದು ವ್ಯಭಿಚಾರವನ್ನು ಬಿಟ್ಟು ಬೇರೆ ವ್ಯವಹಾರವೇ ನನಗಿಲ್ಲವೆಂದು ತಿಳಿಯಬೇಡ. ನೀನು ಛಬಿಯೊಡನೆ ಸಲಿಗೆಯಿಂದ ಇರುವಂತೆ ನಾನೂ ನನ್ನ ಮಿತ್ರರೊಂದಿಗೆ ಸಲಿಗೆಯಿಂದ ಇರ ಬಹುದು. ನಿನ್ನಂತೆಯೆ ನಾನೂ ಮಾನವಪ್ರಾಣಿಯಾಗಿದ್ದರೂ ನಿನ್ನ ಹಾಗೆ ನನ್ನದು ಎರಡನೆಯ ಸಂಬಂಧವಲ್ಲ, ಮೊದಲನೆಯ ಸಂಬಂಧವೆಂಬುದನ್ನು ಮರೆಯಬೇಡ........' ವಿದ್ಯಾವತಿಗೆ ಹೆಚ್ಚಿಗೆ ಮಾತು ಮುಂದುವರಿಸಲಿಕ್ಕೆ ಸಾಧ್ಯವಾಗದೆ ಗಪ್ಪನೆ ಕುಳಿತು ಮುಖವನ್ನಾಚೆಗೆ ಹೊರಳಿಸಿದಳು; ಫಕ್ಕನೆ ದೀಪವನ್ನಾರಿಸಿ ಮುಸುಕೆಳೆದುಕೊಂಡುಬಿಟ್ಟಳು.

ಆ ದಿನ ಛಬಿ ರಾಮನಾಥನ ಒಂದು ಕಣ್ಣು ತೆರೆದರೆ ಇಂದು ವಿದ್ಯಾ ಇನ್ನೊಂದು ಕಣ್ಣು ತೆರೆದಳು, ಚಾಟೂಕ್ತಿಯ ಚಾಟಿಯ ಏಟು ಕೊಟ್ಟು. ರಾಮನಾಥನಿಗೆ ಹೊಸ ವಿಚಾರಕ್ಕೆ ಮೊದಲಾಯಿತು. 'ಹೌದು, ವಿದ್ಯಾ ಏನು ಅಪರಾಧ ಮಾಡಿದ್ದಾಳೆ........ಎರಡನೆಯ ಸಂಬಂಧ ಬೆಳಸಿದ ನಾನೇ ವ್ಯಭಿಚಾರಿಯಲ್ಲವೆ ? ಜಾನಕಿಯನ್ನು ತ್ರಿಕರಣಪೂರ್ವಕವಾಗಿ ಪ್ರೀತಿಸಿದ ಪ್ರತಿಫಲವೆಂದು ಇನ್ನೊಂದು ಮದುವೆಯೆ ?.......ಆಂ? ಜಾನಕಿಯ ಬದಲು ತಾನೇ ಕಣ್ಣು ಮುಚ್ಚಿಬಿಟ್ಟಿದ್ದರೆ, ಜಾನಕಿ ಎರಡನೆಯ ಸಂಬಂಧ ಎನ್ನುತ್ತಿದ್ದಳೆ?....ಛೆ, ಛೆ, ಛೆ, ಗಂಡಸಿಗೆ ಮಾತ್ರ ಎರಡನೆಯ ಸಂಬಂಧದ ಹಕ್ಕು.... ಯಾರು ಹೇಳಿದರು ಹೀಗೆ ? ಯಾರು ಮಾಡಿದರು ಈ ಧರ್ಮದ ಕಾಯಿದೆ ಯನ್ನು ? ........ವಿದ್ಯಾ ಹೇಳಿದ್ದರಲ್ಲಿ ಏನು ತಪ್ಪಿದೆ ? ಗಂಡಸಿನಂತೆ ಹೆಂಗುಸೂ ಮಾನವಪ್ರಾಣಿ. ಗಂಡಸಿನಂತೆ ಹೆಂಗಸಿಗೂ ಹೃದಯವಿರುತ್ತದೆ, ಜೀವವಿರುತ್ತದೆ, ಆಶೆಆಕಾಂಕ್ಷೆಗಳಿರುತ್ತವೆ. ಅವಳಿಗೂ ಸುಖವೆಂಬುದು ಬೇಕು........ಹೌದು, ಸುಖವೆಂಬುದು ಸಕಲ ಪ್ರಾಣಿಗಳಿಗೂ ಬೇಕು, ಎಲ್ಲರ ಹಕ್ಕು ಅದು. ಎರಡನೆಯ ಸಂಬಂಧ ಗಂಡಸಿಗಷ್ಟೆ ಏಕೆ ?........ವಿದ್ಯೆಯ

ಮಾತು ಸರಿ....ವಿದ್ಯೆಯ ಮಾತು ನ್ಯಾಯಸಮ್ಮತ....ಜಾನಕಿಯಲ್ಲಿ ರಸಿಕತೆ ಯಿತ್ತು, ಜಾಣ್ಮೆಯಿತ್ತು; ವಿದ್ಯೆಯಲ್ಲಿ ಶಿಕ್ಷಣದ ಜಾಗೃತಿಯಿದೆ. ಜಾನಕಿ ಪತಿಯೆ ದೈವವೆಂದು ಅನುಭವಿಸಿದ ಅಜ್ಞಾನ ಸೌಖ್ಯ, ದಾಸ್ಯಸೌಖ್ಯ ವಿದ್ಯೆಗೆ ಬೇಡ. ವಿದ್ಯೆ ವಿದ್ಯಾವತಿ.......... !

ರಾಮನಾಥ ವಿದ್ಯೆಯ ಮಗ್ಗುಲಿಗೆ ಬಂದ. ಅವಳ ಮುಸುಕು ತೆರೆದ. ಅವನ ಕಣ್ಣು, ಅವನ ಮಂದ ಮುಗುಳ್ನಗೆ ದೈನ್ಯವನ್ನು ಬೀರಿ ಕ್ಷಮೆಯನ್ನು ಕೋರುತ್ತಿದ್ದವು.

‘ವಿದ್ಯಾ, ನನ್ನನ್ನು ಕ್ಷಮಿಸು.’ ಎಂದು ಅವಳ ತೀರ ಸಮೀಪಕ್ಕೆ ಹೋದ. ಅವನ ಕಂಬನಿ ಅವಳ ಗಲ್ಲವನ್ನು ಹಸಿ ಮಾಡಿತು. ಬಿರುಸು ಮಾತುಗಳ ಬಿರುಗಾಳಿಗೆ ಎರಡೂ ಹೃದಯಗಳು ಹಣ್ಣಾಗಿದ್ದುವು ಅವಳ ಸಾಮೀಪ್ಯದಲ್ಲಿ ಸುಖ ಸಾಂತ್ವನಗಳನ್ನು ಅನುಭವಿಸಿದ ರಾಮನಾಥ.

‘ವಿದ್ಯಾ ?’

‘ರಾಮ್!’

‘ವಿದ್ಯಾ, ನಾವು ಸುಖದಿಂದಿರೋಣವೆ?’

‘ಹೂಂ!’

‘ವಿದ್ಯಾ ನಾವು ಪ್ರೀತಿಯಿಂದಿರೋಣವೆ?’

‘ಹೂಂ.’

‘ವಿದ್ಯಾ ನಾಳೆ ನಾನು ಧಾರವಾಡಕ್ಕೆ ಹೋಗಿ ಬರಲೆ?’

‘ಹೂಂ.’

‘ವಿದ್ಯಾ....’

ವಿದ್ಯಾ ಮೌನವಾಗಿದ್ದಳು. ಮೆಲ್ಲನೆ ಮುಖ ಅಲ್ಲಾಡಿಸಿದ ರಾಮನಾಥ. ವಿದ್ಯಾ ಕಣ್ಣು ಒರಸಿಕೊಂಡಳು. ರಾಮನಾಥನ ಅಂತಃಕರಣ ನೀರು ನೀರಾಗಿ ಹೋಯಿತು.

‘ಮೋಹನನನ್ನು ಇಲ್ಲಿಗೇ ಕರೆದುಕೊಂಡು ಬರಲೆ ವಿದ್ಯಾ?’

ವಿದ್ಯಾ ಸುಮ್ಮನಿದ್ದಳು.

ಮರುದಿನ ರಾಮನಾಥನೇಳುವ ಹೊತ್ತಿಗೆ ತಲೆಗಿಂಬಿನ ಬದಿಯ ಟೀ ಪಾಯ್ ಮೇಲೆ ಒಂದು ಟ್ರೇದಲ್ಲಿ ಕಿಟ್ಲಿ, ಎರಡು ಕಪ್ಪು ಬಸಿಗಳು. ಕಿಟ್ಲಿಯ

ಬಾಯಿಂದ ಹೊಗೆ ಹಾಯುತ್ತಿತ್ತು. 'ಸ್ಟೆನಲೆಸ್' ತಟ್ಟೆಯೊಳಗಿನ 'Cream crackers' ಬಿಸ್ಕೀಟುಗಳು ಅದೇ 'ಪ್ಯಾಕ್' ಒಡೆದು ಬಿಚ್ಚಿಟ್ಟಂತೆ ಕಾಣು-ತ್ತಿದ್ದುವು. ಅತ್ತ ನೋಡುತ್ತಲೆ ರಾಮನಾಥನಿಗಾದ ಹರುಷ ಅಷ್ಟಿಷ್ಟಲ್ಲ. ಮುಖ ತೊಳೆದುಕೊಂಡು ಬಂದವನೆ ಒಳಗೆ ಹೋಗಿದ್ದ ವಿದ್ಯಾವತಿಯನ್ನು ಕೂಗಿದ. ವಿದ್ಯಾ ಆಗಲೆ ಎದ್ದು ಹೊತ್ತಾಗಿತ್ತು. ತನ್ನ 'ಟಾಯಲೆಟ್' ಎಲ್ಲಾ ಮುಗಿಸಿಕೊಂಡು ಬಂದಳು ವಿದ್ಯಾ. ಚಹಾ ಸೋಸಿ ಕಪ್ಪು ನಾಥನ ಕೈಯೊಳಗೆ ಕೊಟ್ಟಳು. ಕೃತಜ್ಞತೆಯಿಂದ ಸ್ವೀಕರಿಸಿದ ರಾಮನಾಥ.

'ವಿದ್ಯಾ, 'I am so glad!' ಎಂದು ತಾನು ಇನ್ನೊಂದು ಬಿಸ್ಕೀಟು ತೆಗೆದು ವಿದ್ಯಾವತಿಗೆ ಕೊಟ್ಟ. ಮುಗುಳ್ನಗೆಯಿಂದ ಸ್ವೀಕರಿಸುತ್ತ 'Lov' is a fair bargain of give and take' (ಪ್ರೇಮ ಎಂಬದೂ ಒಂದು ಕೊಡುಕೊಳ್ಳಿಯ ವ್ಯವಹಾರ) ಎಂದಳಾಕೆ. ರಾಮನಾಥ ನಕ್ಕುಬಿಟ್ಟ.

ಎಲ್ಲ ಸಿದ್ಧತೆ ಮಾಡಿಕೊಂಡು ಹ್ಯಾಂಡಬ್ಯಾಗಿನಲ್ಲಿ 'Unseen powere ಮತ್ತು ಮಹಾತ್ಮರ ಆತ್ಮಚರಿತ್ರಗಳನ್ನೂ ಸೇರಿಸಿಕೊಂಡು ರಾಮನಾಥ ವಿದ್ಯಾವತಿಯನ್ನು ಬೀಳ್ಕೊಂಡು ಕೆಳಗಿಳಿಯಬೇಕೆಂದಾಗ ಆಚೆಯ ಮನೆಯ ಬಾಗಿಲು ತೆರೆಯಿತು. ಛಬಿ ಹೊರಗೆ ಬಂದಳು. ಇಬ್ಬರ ದೃಷ್ಟಿಗಳೂ ಕೂಡಿದವು. ವಿದ್ಯಾ ಇನ್ನೂ ಬಾಗಿಲಕ್ಕೇ ನಿಂತಿದ್ದಳು. ರಾಮನಾಥ ಛಬಿಯನ್ನು ನೋಡಿಯೂ ನೋಡದವರಂತೆ ಧಡಧಡನೆ ಕೆಳಗಿಳಿದು ಹೋದ. ನಾಲ್ಕು ಹೆಜ್ಜೆ ಮುನ್ನಡೆಯುವಷ್ಟರಲ್ಲಿ ಮತ್ತೆ ಮನಸ್ಸು ಹಿಂಜರಿಯಿತು....'ಛಬಿಯನ್ನು ಕಡೆಗಣಿಸಿ ಬಂದಂತಾಯಿತಲ್ಲ? ಛಬಿ ಏನು ತಿಳಿದುಕೊಂಡಳೊ ಏನೊ? ಏಕೆ, ವಿದ್ಯಾಳ ಎದುರಿಗೇ ಛಬಿಗೆ ಹೋಗಿ ಬರುತ್ತೇನೆಂದು ಹೇಳಬಹುದಾಗಿತ್ತಲ್ಲ! ಇದರಲ್ಲಿ ಏನು ಆಕ್ಷೇಪವಿತ್ತು? ಆಕ್ಷೇಪವೇನೂ ಇರಲಿಲ್ಲ. ಹಾಗಾದರೆ ಅವನ ಮನಸ್ಸಿಗೇ ತಾನು ದೂಷಿತನೆಂದು ಹೊಳೆಯಿತೆ? ವಿದ್ಯಾ ಇನ್ನೇ-ನಾದರೂ ತಿಳಿದುಕೊಳ್ಳಬಹುದೆಂದು ತಾನು ತಿಳಿದುಕೊಳ್ಳಬೇಕೇಕೆ? ವಿದ್ಯಾ ಎಷ್ಟು ಸ್ಪಷ್ಟವಾಗಿ, 'Business like' ಆಗಿ ಹೇಳಿದಳಲ್ಲ.... 'Love is a fair bargain of give and take' ಅಂತ!....ನಿನ್ನೆ ಮಾತಿನಲ್ಲಿ ಸೋತವರು ಯಾರು? ಇಂದು ವಿದ್ಯಾ ತಾನೇ ಚಹ ಮಾಡಿಕೊಟ್ಟ ಬಳಿಕ ತನ್ನದೆ ಗೆಲುವಲ್ಲವೆ?....' ಎಂದೆಲ್ಲಾ ಆಲೋಚಿಸುತ್ತ ಗಕ್ಕನೆ ಹಿಂತಿರುಗಿದ ರಾಮ

ನಾಥ. ಧಡಧಡ ಮಜಲುಗಳನ್ನೇರಿ ಛಬಿಯ ಮನೆಯ ಬಾಗಿಲಕ್ಕೆ ನಿಂತ. ಬೆಲ್ ಬಾರಿಸಿದ. ಛಬಿ ಹೊರಗೆ ಬಂದಳು.

'ಛಬಿ ಮಲಾ ಕ್ಷಮಾ ಕರಾ. ಮಿ ತುಮ್ಹಾಶಿ ನ ಬೋಲತಾ ಗೇಲೊ. Did you misundresatnd ಛಬಿ ?' (ಛಬಿ ನನ್ನನ್ನು ಕ್ಷಮಿಸು ನಿನಗೆ ತಿಳಿಸದೆ ನಾನು ಹೊರಟಿದ್ದೆ. ತಪ್ಪು ತಿಳಿದಿಯೇನು ?)

'ಛೆ. ಛೆ. ಬಿಲ್ಕೂಲ ನಾಹಿ. ತ್ಯಾತ ಕಾಯ್ ? (ಛೆ.ಛೆ. ಒಂದಿಷ್ಟೂ ಇಲ್ಲ. ಅದರಲ್ಲೇನಿದೆ ?)

'No. I have to tell you a good deal on my return.' (ಇಲ್ಲ, ನಾನು ತಿರುಗಿ ಬಂದ ಮೇಲೆ ನಿನಗೆ ಹೇಳಬೇಕಾದದ್ದು ಬಹಳಿದೆ.)

'ಬರಂ.' (ಆಗಲಿ).

'ಕಾಕಾಸಾಹೇಬ ಉಠಲೆ ಆಹೇತ ಕಾಯ?' (ಕಾಕಾ ಎದ್ದಾರೇನು?)

'ಹಾ !'

ಒಳಗೆ ಹೋಗಿ ಅವರನ್ನೂ ಬೀಳ್ಕೊಂಡು ಬಂದ ರಾಮನಾಥ. ಛಬಿ ರಾಮನಾಥನನ್ನು ಕಾಣಲಿಕ್ಕೆ ಮತ್ತೆ ಅಪರಾಧಿಯಂತೆ 'ಛಬಿ, ಮಲಾ ಕ್ಷಮಾ ಕರಾ' ಎಂದ.

''Please don't be silly'(ಇದೇನು ಹುಚ್ಚುಚಾಟ್ಚಾರ!)ಎಂದಳು ಛಬಿ.

ಛಬಿಯ ನಿರ್ಮಲ ನಿಶ್ಚಲ ಮನಸ್ಸಿನ ರೀತಿಯನ್ನು ಕಂಡು ಮುಗ್ಧನಾಗಿ ಮತ್ತೊಂದು ಮಾತನಾಡದೆ ಕೆಳಗಿಳಿಯಬೇಕೆನ್ನುವಷ್ಟರಲ್ಲೇ ರಾಮನಾಥನ ಮನೆಯ ಮುಂದೆ ಪೋಸ್ಟಮನ್ ಬೆಲ್ ಬಾರಿಸುತ್ತಿದ್ದ. ರಾಮನಾಥನಿಗೆ ಮತ್ತೆ ಕುತೂಹಲ. ಆದರೂ ವಿದ್ಯಾವತಿಯ ಕಣ್ಣಿಗೆ ಬೀಳಬಾರದೆಂದು ಧಡ ಧಡನೆ ಇಳಿಯುವುದಕ್ಕೂ ವಿದ್ಯಾ ಹೊರಬರುವುದಕ್ಕೂ ಸರಿಹೋಯಿತು. ಆದರೂ ರಾಮನಾಥ ಹೊರಳಿ ನೋಡದೆ ಆದದ್ದಾಗಲಿ ಎಂದು ನೆಟ್ಟಗೆ ದಾದರ ಸ್ಟೇಶನ್‌ಗೆ ನಡೆದ. ಕೊಹಿನೂರ ಮಿಲ್ಲಿನ ಬಳಿ ಅನಾಯಾಸವಾಗಿ ಬಸ್ ನಿಂತಿತ್ತು. ಸರಕ್ಕನೆ ಅದರ ಒಳಗೆ ನುಸುಳಿಕೊಂಡ. ವಿದ್ಯಾ ಬಂದು-ಗಿಂದಾಳೆಂಬ ಭೀತಿಯೊ ಏನೊ !

ೞ ೞ ೞ ೞ

ಅಂದು ರವಿವಾರ. ಮನೂ ಪುಣೆಯಿಂದ ಮೇಲಿಗೆ ಬರುತ್ತೇನೆಂದು

ಕಾಗದ ಬರೆದಿದ್ದ. ಬೆಳಿಗ್ಗೆ ಹನ್ನೊಂದು ಗಂಟೆಯೊಳಗಾಗಿ ವಿದ್ಯಾ ಟಾಯ್ ಲೆಟ್ ಮುಗಿಸಿ ಬಿಳಿಯ ಗಂಜಿಯ ಗುಜರಾತಿ ನಮೂನೆಯ ಕುಪ್ಪುಸ ಹಾಕಿಕೊಂಡು, ಕೆಂಪು ಬಣ್ಣದ ಕರಿಯ ಚಿಕ್ಕೆಚಿಕ್ಕೆಗಳ ಚೌಕಡಿಗಳುಳ್ಳ ಪತ್ತಲ ಉಟ್ಟುಕೊಂಡು, ಬೆನ್ನಮೇಲೆ ಬೀಳುವಂತೆ ಸಡಿಲಾಗಿದ್ದರೂ ಅಚ್ಚುಕಟ್ಟಾಗಿ ಮುಡಿ ಕಟ್ಟಿ, ಅದಕ್ಕೊಂದು ಕರಿಯ ಜಾಳಿಗೆ ಸುತ್ತಿ, ಓರಣವಾಗಿ ನಡುವೇ ಬೈತಲ ತೀಡಿಕೊಂಡು, ಬಂಗಾಲಿಯವರಂತೆ ಬೈತಲದ ಮಧ್ಯದಲ್ಲಿ ಸಿಂಧೂರದ ಬೊಟ್ಟಿಟ್ಟುಕೊಂಡು, ಹೆಗಲಿಗೆ ಲಂಬಾಣಿಗಳ ಥೈಲಿಯ ನಮೂನೆಯ ಒಂದು ಮನಿಬ್ಯಾಗ್ ಹಾಕಿಕೊಂಡು, ಕಾಲೊಳಗೆ ಸ್ಯಾಂಡಲ್ಸ ಮೆಟ್ಟಿಕೊಂಡು ಜಿ. ಐ. ಪಿ. ದಾದರ ಸ್ಟೇಶನ್‌ಗೆ ಹಾಜರಾದಳು. ಪ್ಲ್ಯಾಟ್‌ಫಾರ್ಮಿನ ಒಳಗೆ ಪ್ರವೇಶಿಸುತ್ತಲೆ ಟಿಕೆಟ್ ಕಲೆಕ್ಟರನು 'ಟಿಕೆಟ್ ?' ಎಂದು ಕೇಳಿದ.

'ಫಾಸ್' ಎಂದು ಪರ್ಸ ಬಡೆದುಕೊಳ್ಳುತ್ತ ಅವನನ್ನು ಏನೂ ದರಕಾರು ಮಾಡದೆ ಒಳಗೆ ನಡೆದಳು.

೧೧-ಕ್ಕೆ ಗಾಡಿ ದಾದರ ಸ್ಟೇಶನ್‌ಗೆ ಬಂದಿತು. ಎಂಜಿನ್ನಿಗೆ ಸಮೀಪವಾಗಿಯೆ ಕೂತಿದ್ದ ಮನೂನನ್ನು ನೋಡಿದವಳೆ ವಿದ್ಯಾ ಮುಗುಳ್ನಗೆಯಿಂದ ಸ್ವಾಗತದ ಸಂಕೇತವಾಗಿ ಬಲಗೈ ಮೇಲೆ ಮಾಡಿ ಬೆರಳು ಆಡಿಸಿದಳು. ವ್ಯಾಪಾರಸ್ಥರಂತಹ ಒಂದು 'ಲೆದರ ಬ್ಯಾಗ್' ಬಗಲೊಳಗಿಟ್ಟುಕೊಂಡು ನೀಲಿಬಣ್ಣದ ಬುಶ್‌ಕೋಟ, ಕಪ್ಪುಬಣ್ಣದ ಉಣ್ಣೆಯ 'ಪ್ಯಾಂಟು' ಧರಿಸಿದ ಮನೂ ಸೆಕಂಡಕ್ಲಾಸ ಡಬ್ಬೆಯೊಳಗಿಂದ ಕೆಳಗಿಳಿದನು. ವಿದ್ಯಾ 'So you have come' (ಅಂತೂ ನೀನು ಬಂದೆ) ಎಂದು 'ಶೇಕ-ಹ್ಯಾಂಡ' ಮಾಡಿ 'ಹವಾಲ್!' ಎಂದು ಕೂಗಿದಳು.

'Don't wory, I have no luggage' (ತೊಂದರೆ ಬೇಡ; ನಾನೇನೂ ಸಾಮಾನ ತಂದಿಲ್ಲ.) ಎಂದ ಮನೂ.

'ಹಾಗಾದರೆ ವ್ಹಿ. ಟಿ. ಗೇ ಹೋಗೋಣ ?'

'Why ?' (ಯಾಕೆ ?)

'ಇವೊತ್ತು ಊಟ 'ಚೇತನಾ' ಹಲ್ಲಿ. ನಿನ್ನ ಸ್ನಾನವಾಗಿದೆಯೆ ಮನೂ ?'

'ಓಹೋ. ನಿನ್ನೇ ಆಗಿದೆ.'

'Dirty fellow!' ಎಂದು ಖೊಳ್ಳನೆ ನಗುತ್ತ ಮನೂನ ಕೈಯೊಳಗಿನ 'ಟೈಮ್ಸಿ'ನ ಸುರುಳಿಯಿಂದಲೆ ಬೆನ್ನಿಗೆ ಏಟು ಕೊಟ್ಟಳು. ಹೊರಗೆ 'ಇಂಡಿ-ಕೇಟರ್' ನೋಡಿ ಬಂದು ಗಡಬಡಿಸುತ್ತ 'Come on, we shall catch the 11-30 local' (೧೧-೩೦ರ ಲೋಕಲ್ ಗಾಡಿ ಹಿಡಿಯೋಣ ಬನ್ನಿ.)

'ಹಾಗಾದರೆ ಇದೇ ಮೇಲಿನಲ್ಲಿ ಹೋಗಬಹುದಾಗಿತ್ತಲ್ಲ?'

'ಹುಂ. ಹುಂ' ಎಂದು ನಕ್ಕು 'ಅದು ಹೇಗೆ ಸಾಧ್ಯ?' ಎಂಬುದನ್ನು ಸೂಚಿಸಿದಳು.

'ಹಾಗಾದರೆ ಫ಼. ಟಿ. ಟಿಕೆಟ್ಟು?'

'ಏನು ಕಾರಣೆಲ್ಲ, ಬನ್ನಿ.'

'ವಿದ್ಯಾ, ನಿನ್ನ ಬಳಿ ಪಾಸು ಇರಬಹುದು; ನನಗೆ?'

'ನನ್ನ ಹತ್ತಿರೂ ಬಿ. ಬಿ ಸಿ. ಪಾಸು ಇದೆ.'

'ಹಾಗಾದರೆ?'

'ಇರಲಿ, ಗಾಡಿ ಬಂತು, ಬನ್ನಿ ಬನ್ನಿ ಬೇಗ.' ಎಂದವಳೆ ಮನೂನನ್ನು ಮುಂದೂಡಿ ಬ್ರಿಜ್ ಹತ್ತಿದಳು. ಗಾಡಿ ಬಂದುಬಿಟ್ಟಿತ್ತು. ಎದುರಿನಿಂದ ಅವಿಚ್ಛಿನ್ನವಾಗಿ ಸೈನ್ಯದಲಗಳಂತೆ ಪ್ಯಾಸಿಂಜರರು ರೀಜಿಟ್ಟಿದ್ದರು. ವಿದ್ಯಾ ಅವರ ದರಕಾರವಿಲ್ಲದೆ ನುಗ್ಗುತ್ತ ಧಡಧಡ ಕೆಳಗಿಳಿದಳು. ಇವಳ ವೇಗಕ್ಕೆ ಮನೂ ಓಡಬೇಕಾಯಿತು. ಓಡೋಡುತ್ತ ಹಾದಿಯೊಳಗಿನ ಒಂದು ಬಾಳೇಹಣ್ಣಿನ ಸಿಪ್ಪಿ ತುಳಿದು ಧಡಲ್ಲೆಂದು ಜಾರಿಬಿದ್ದ. ನೆರೆದವರೆಲ್ಲಾ ಖೊಳ್ಳನೆ ನಕ್ಕರು. ಅರಿವೆ ಹೊಲಸಾಯಿತೇನೊ ಎಂದು ಹಿಂದೆ ಮುಂದೆ ನೋಡಿಕೊಳ್ಳುತ್ತ, ಅವರ ನಗೆಯನ್ನು ಲಕ್ಷ್ಯಕ್ಕೆ ತಾರದೆ ತಾನೂ ಅವರೊಂದಿಗೆ ಖೊಳ್ಳೆಂದು ನಕ್ಕು ಕೆಳಗಿಳಿದ. ಸಿಕ್ಕ ಒಂದು ಡಬ್ಬೆಯೊಳಗೆ ಇಬ್ಬರೂ ಒಳನುಗ್ಗಿದರು. ಡಬ್ಬೆಯೊಳಗೆ ಗೂಡ್ಸುಗಾಡಿಯ ಹಾಗೆ ಗಂಡು-ಹೆಣ್ಣೆಂಬ ಸರಕುಗಳು ಅಡಕಲೇರಿ ಕಾಲಹಲಿಗೆಯ ಮೇಲೆ, ಕೈಬಾರು ಹಿಡಿದುಕೊಂಡು ಜನ ಜೋತುಬಿದ್ದಿದ್ದರು. ಅಂಥದರೊಳಗೆ ವಿದ್ಯಾ ಒಳನುಗ್ಗಿದಳು. ಮನೂ ಹೇಗೊ ಅವಳನ್ನನುಸರಿಸಿದ. ಇಬ್ಬರೂ ಅಷ್ಟರೊಳಗೇ ಬಾರ್ ಹಿಡಿದುಕೊಂಡು ನಿಂತರು. ಒಂದೆರಡು ಸಲ ಗಾಡಿಯ ಹೊಯ್ದಾ

ಟಕ್ಕೆ ಬಾರು ಕೈ ತಪ್ಪಿ ಬಾಜೂದವರ ಮೈಮೇಲೆ ಬಿದ್ದಾಗ, ವಿದ್ಯಾ ತನ್ನೊಳಗೆ ತಾನೇ ನಕ್ಕಳು. ಪರೇಳಿಗೆ ಒಬ್ಬ ಗೃಹಸ್ಥ ತನ್ನ ಸ್ಥಳ ಖಾಲಿ ಮಾಡಿ ಅವಳಿಗೆ ಅನುವು ಮಾಡಿಕೊಟ್ಟು ತಾನು ಕೆಳಗಿಳಿದ. 'ಥ್ಯಾಂಕ್ಸ' ಎಂದು ವಿದ್ಯಾ ಆ ಸ್ಥಳದ ಮೇಲೆ ಕೂತುಕೊಂಡಳು. ಸ್ಥಳ ಸಿಗದೆ ಹಾಗೇ ನಿಂತಿದ್ದ ಮನೂನನ್ನು ನೋಡಿ ಕೊಂಕುನಗೆಯೊಂದನ್ನು ಬೀರಿದಳು. ಮನೂನು ಒಸುಳಿಕೊಂಡು ಅವಳ ಮಗ್ಗುಲಿಗೆ ಬಂದು ಅವಳ ಸೀಟಿನ ಬೆನ್ನು ಹಿಡಿದುಕೊಂಡು ಅವಳೆದುರಿಗೇ ನಿಂತನು. ಅಲ್ಲೇ ಅವರ ಹರಟೆ ನಿರಾತಂಕವಾಗಿ ಸಾಗಿತು. ಒಬ್ಬಿಬ್ಬರು ಗಾಂಪರಂತಹರು ಸ್ವಲ್ಪ ಬೆಪ್ಪರಾಗಿ ನೋಡುತ್ತ ನಿಂತರು. ಇವರು ಯಾರಿರಬಹುದು ಎಂದು ಅವರಿಗೆ ಕುತೂಹಲವಾಗಿರಬೇಕು. ಸುದೈವದಿಂದ ಬಾಯುಖಳಾಕ್ಕೆ ಒಂದು ಸ್ಥಳ ಖಾಲಿಯಾಯಿತು. ಮನೂ ವಿದ್ಯೆಯ ಮಗ್ಗುಲಿಗೇ ಸ್ಥಳ ಸಾಧಿಸಿಕೊಂಡ.

ಮನೂ 'ಚೇತನಾ' ನೋಡಿದುದು ಇದೇ ಮೊದಲನೆಯ ಸಲ. The fashions of East and West have met here. (ಪೂರ್ವ ಪಶ್ಚಿಮದ ಅಂದಚಂದದ ಸಂಗಮವಾಗಿದೆ ಇಲ್ಲಿ) ಎಂದು ಅಲ್ಲಿಯ ಶಿಸ್ತು ಸಿದ್ಧತೆಗಳನ್ನು ನೋಡಿ ಉದ್ಗಾರವೆತ್ತಿದ. ಪ್ರವೇಶದ್ವಾರದಲ್ಲಿ ಬಾಳೆಯ ಮರಗಳು, ತಳಿರು ತೋರಣ, ಒಳಗೊಂದು ತುಳಸೀ ವೃಂದಾವನದ ತರಹ ಒಂದು ಕಟ್ಟೆ. ಅಲ್ಲಲ್ಲಿ ಇಳಕಲ್ಲಿನ ಖಣಗಳ ಮೇಲೆ ಪ್ರಾಚ್ಯ ಪದ್ಧತಿಯಲ್ಲಿ ಕಸೂತಿ ತೆಗೆದು ಪ್ರದರ್ಶನ ಮಾಡಿದ ನಕ್ಷೆಗಳು, ಗೋಡೆಗೆ ಅಂಟಿಸಿದ ಚಿತ್ರಗಳು ಎಲ್ಲಾ ಮುಂಬಯಿಯಂತಹ ಪಾಶ್ಚಾತ್ಯಮಯ ಪಟ್ಟಣದಲ್ಲಿ ಈ ತರಹದ ಪೌರ್ವಾತ್ಯಪ್ರದರ್ಶನ ವಿಚಿತ್ರವಾಗಿಯೆ ಕಂಡಿತು.

ಊಟಕ್ಕೆ ಮತ್ತೆ ಮಡಿಯುಟ್ಟುಕೊಂಡು ಕೂಡಬೇಕೇನು ?' ಎಂದು ವಿನೋದ ಮಾಡಿದ ಮನೂ. ಅಷ್ಟರೊಳಗೆ ವಿದ್ಯಾ ಅಲ್ಲಿಯ ಏಕಾಂತ ಜಾಗೆಯನ್ನು ನೋಡಿ ಟೇಬಲ್ ಮೇಲೆ ತನ್ನ ಪರ್ಸ ಇಟ್ಟು 'ಇಂಡಿಯನ್' ಪದ್ಧತಿಯ ಎರಡು ತಾಟಿಗೆ 'ಆರ್ಡರ' ಮಾಡಿದಳು. ತಾಟಿನ ತುಂಬ ಸಾಧನೆಯ ಸಾಮಾನುಗಳು, ಝುಣಕದ ಒಡೆಯಿಂದ ಹಪ್ಪಳದ ವರೆಗೆ ತುಂಬಿ ಬಿಟ್ಟಿದ್ದುವು. ಇದಲ್ಲದೆ ಮೂರು ನಾಲ್ಕು ಬಟ್ಟಲಲ್ಲಿ ಪ್ರವಾಹಿ

ಸಾಧನಗಳು. ಪರಿಚಾರಕನು ಬಂದು ಮೊದಲಿನ ಪೆಟ್ಟಿಗೇ ತಾಟಿನ ತುಂಬ ಪುರಿಗಳನ್ನು ಸುರುವಿದ.

'ಆಹಾ! ಇಂಥಾ ಮಹಾ ಹೋಟೆಲ್ಲು! ಪುರಿಯ ಹೊರತಾಗಿ ಮತ್ತೊಂದು ಪಕ್ವಾನ್ನವೇ ಇಲ್ಲವೇನು ನಿಮ್ಮಲ್ಲಿ?' ಎಂದು ವಿದ್ಯೆಗೇ ಪ್ರಶ್ನೆ ಮಾಡಿದ ಅವಳೇ ಹೋಟೆಲ್ಲಿನ ಪ್ರೊಪ್ರಾಯಿಟರ ಇದ್ದ ಹಾಗೆ.

'ಇಂಗ್ಲಿಷ ಪದ್ಧತಿಯ ಊಟ ಬೇಕೇನು ಹಾಗಾದರೆ? ತಡೆ, ಕೇಳುತ್ತೇನೆ.' ಎಂದಳು ವಿದ್ಯಾ. ಮನೂ ಬಹಳ ಹಸಿದುದರಿಂದ ವಿಶೇಷ ತಡ ಮಾಡದೆ ಪುರಿಗಳಿಗೆ ತೋಳೇರಿಸಿ ಕೈಹಚ್ಚಿದ.

'ಹಂ ಸಾವಕಾಶವಾಗಲಿ!' ಎಂದು ನಕ್ಕಳು ವಿದ್ಯಾ.

'ಓಹೋ! ಬ್ರಾಹ್ಮಣರಿಗೆ ಆನಂದ ಮಾಡಿಸಿಬಿಟ್ಟೆದ್ದೀರಿ ಇನ್ನೇನು!'

ಇಬ್ಬರೂ ನಗೆಯಾಡಿದರು.

ಊಟ ಮುಗಿಸಿ ಕೈತೊಳೆಯಲು ಹೋದಾಗ ಇಡೀ ಹೋಟೆಲ್ಲಿನ ವ್ಯವಸ್ಥೆಯನ್ನು ನೋಡಿ ಮನೂ 'ನಮ್ಮ ಬಾದಶಾಹಿ ಬೋರ್ಡಿಂಗಿಗಿಂತಲೂ ಅಚ್ಚುಕಟ್ಟಾಗಿದೆ!'

'ಹೂಂ?' ಎಂದು ನಕ್ಕಳು ವಿದ್ಯಾ.

ಊಟ ಮುಗಿಸಿ ಮಸಾಲೆಯ ಪಾನಪಟ್ಟಿ ಮೆಲ್ಲುತ್ತ ಕಾಳಾಘೋಡಾ ಎದುರಿಗೆ 'ನೇವಿ ಸ್ಟೋರ್ಸ' ಬಳಿ ಟ್ರ್ಯಾಮುಗಾಗಿ ಕಾದು ನಿಂತರು.

'ವಿದ್ಯಾ, ಇವೊತ್ತು ರಾತ್ರಿ 'ಜುಗುನೂ' ಶೂಟಿಂಗ್ ಮತ್ತೆ!'

'ಓ. ಕೆ. ಒಳ್ಳೇ ಸುದ್ದಿ!' ಎಂದಳು ವಿದ್ಯಾ.

'ಹಾಗಾದರೆ ರಾತ್ರಿಯ ವರೆಗಿನ ಕಾರ್ಯಕ್ರಮ?' ಮನೂ ಕೇಳಿದ.

'ಇಂಡಿಯಾ ಕಾಫಿ ಹೌಸು. ಅದು ಮುಚ್ಚಿದ್ದರೆ 'ಏಶಿಯನ್ ರಿಸ್ಟಾರೆಂಟ್' ಅಥವಾ 'ಗ್ರೀನ್ಸ' ಅಥವಾ 'ತಾಜ' ಯಾವುದನ್ನು ಆರಿಸುವಿಯೋ ಅದು. ಆನಂತರ ಮೆಟ್ರೊ, ಲಕ್ಸ ಲ್ಯಾಂಡ ರೆಕ್ಸೊನಾ ಕಂಪನಿ ಮತ್ತು ಮುಂಪೆ 'ಜೆ.ಜೆ. ಸ್ಕೂಲ್ ಆಫ್ ಆರ್ಟ್ಸ' ಎಪ್ಪೋಲೋ, ಕೊಲಾಬಾ ಅಥವಾ ಪುರೋಹಿತ........'Last but not the least' ಜುಗುನು—ಓ. ಕೆ.?'

‘ ಗ್ರ್ಯಾಂಡ್ ಪ್ರೋಗ್ರಾಮ್ ! ಕೈ ತಾ ಮೊದಲು ! ’

‘ ಸರಿ, ಹಾಗಾದರೆ ಮೊದಲು ನೇವ್ಹಿ ಸ್ಟೋರ್ಸ್‌ಗೆ ಹೋಗೋಣ.’

* * * *

ಎಲ್ಲಾ ಕಾರ್ಯಕ್ರಮ ಮುಗಿಸಿಕೊಂಡು ಕೊಲಾಬಾ ಚಾಯಿನಿಸ್ ಹೊಟೆಲಿನಲ್ಲಿ ಇಂಗ್ಲಿಷ್ ಪದ್ಧತಿಯ ಊಟದ ರುಚಿ ನೋಡಲು ಹೋದರು. ಒಂದು ಏಕಾಂತ ಸ್ಥಳ ಹುಡುಕಿ ಕುಳಿತುಕೊಂಡರು. ಬಾ:ಯ್ ಬಂದು ಅಂದಿನ ‘ ಮೆನೂ ’ ತಂದು ಇಟ್ಟು ಹೋದ.

‘What will you have ?’ ( ಏನು ತರಿಸಬೇಕು ? ) ಎಂದು ವಿದ್ಯೆಯನ್ನು ಕೇಳಿದನು.

‘ ಹೋಸ್ಟ ಯಾರು ?’

‘ ಪರ್ಸ ಹಿಡಿದುಕೊಂಡವರು. ’

ವಿದ್ಯಾ ನಗುತ್ತ ‘ ಹಾಗಾದರೆ ಬರಿ ಆಮ್ಲೆಟ್ ತರಿಸತೇನಿ. ’ ಎಂದಳು.

ಮನೂ ‘ ಮೆನೂ ’ ನೋಡುತ್ತ ‘ಇಕಾ, ಒಂದು ಆಮ್ಲೆಟ್, ಒಂದು ಕಟಲೆಟ್ ಮತ್ತು ರೈಸಕರಿ’ ಎಂದ.

ಬಾ:ಯ್ ಎಲ್ಲ ಸಾಮಾನುಗಳನ್ನು ಅಚ್ಚುಕಟ್ಟಾಗಿರಿಸಿ ಎರಡು ಗಂಜಿಯ ನ್ಯಾಪಕಿನ್ ಇಟ್ಟು ಹೋದ.

ಮನೂ ನ್ಯಾಪಕಿನ್ ತೊಡೆಯ ಮೇಲೆ ಹಾಕಿಕೊಳ್ಳದೆ ಹಾಗೇ ಫೋರ್ಕ ಮತ್ತು ಚಾಕುಗಳನ್ನು ಕೈಯಲ್ಲಿ ತೆಗೆದುಕೊಂಡಾಗ ‘ ಹ–ಹ–ಹ ! ಇದು ಟೇಬಲ್‌ಕ್ಲಾತ್ ಅಲ್ಲ ಮತ್ತೆ ! ತೊಡೆಯ ಮೇಲೆ ಹಾಕಿಕೊಳ್ಳಲಿಕ್ಕೆ ! ನ್ಯಾಪಕಿನ್’ ಎಂದು ಚೇಷ್ಟೆ ಮಾಡಿದಳು ವಿದ್ಯಾ.

‘ ಮೈಮೇಲೆ ಮುಸುರೆ ಬೀಳದಂತೆ ತಿಂದರೂ ನ್ಯಾಪಕಿನ್ ಹಾಕಿಕೊಳ್ಳಲೇಬೇಕೆಂದು ಕಾಯಿದೆ ಇದೆಯೇನು ?’ ಮನೂ ಉತ್ತರಿಸಿದ.

ವಿದ್ಯಾ ಬ್ರೆಡ್ ಹೆಚ್ಚಲಿಕ್ಕೆ ಚಾಕೂ ಉಪಯೋಗಿಸದೆ ಕೈಯಿಂದಲೆ ಮುರಿದು ಬಾಯೊಳಗೆ ಹಾಕಿಕೊಂಡಾಗ ‘ ಚಾಕೂ ಫೋರ್ಕು ಬರಿ ಆಮ್ಲೆಟ್ಟಿಗಷ್ಟೆ ಅಲ್ಲ, ಬ್ರೆಡ್ಡಿಗೂ ಉಪಯೋಗಿಸಲ್ಪಡುತ್ತವೆ. ’ ಎಂದು [redacted] ಮುಯ್ಯ ತೀರಿಸಿದ.

‘ ಕೈಯಿಂದ ಮುರಿದು ತಿನ್ನಬಾರದೆಂದು ಕಾಯಿದೆಯಿದೆಯೇನು? ’

ಇಬ್ಬರೂ ನಕ್ಕರು. ಆಮ್ಲೆಟ್ ಹೆಚ್ಚಲಿಕ್ಕೆ ವಿದ್ಯಾ ಚಾಕು ಎತ್ತುತ್ತಲೆ, 'ಚಾಕೂ ಬಲಗೈಯಲ್ಲಿ ಹಿಡಿಯಬೇಕು, ಫೋರ್ಕ ಎಡಗೈಯಲ್ಲಿ ಹಿಡಿಯ ಬೇಕು.' ಎಂದು ನಗೆಗೆ ನಗೆ ಹೊಸೆದ ಮನೂ.

ಪ್ಲೇಟಿನೊಳಗಿನ ಸಾಮಾನು ತೀರಿದಾಗ ಮನೂ ಫೋರ್ಕ ಮತ್ತು ಚಾಕೂ ಸಮಾಂತರವಾಗಿರಿಸಲು 'ತಿನ್ನುವುದು ಮುಗಿದು ಅದು ಸಾಕಾದರೆ ಫೋರ್ಕ ಮತ್ತು ಚಾಕೂ 'Cross' ಮೇಲೆ ಇಡಬೇಕು!' ಸಮಯ ಸಾಧಿಸಿ ಊಟದೊಂದಿಗೆ ಚೇಷ್ಟೆಯನ್ನೂ ಸರಸವಾಗಿ ರುಚಿಯಾಗಿ ಬೆರಸಿ ಮುಕ್ತಾಯಗೊಳಿಸಿದಳು ವಿದ್ಯಾ. ಬಸಿಯೊಳಗೆ ಬಿಲ್ ತಂದಿಟ್ಟ ಬಾ:ಯ್.ಐದು ರೂಪಾಯಿ ಆರಾಣೆ ಆಗಿತ್ತು ಬಿಲ್ಲು. ವಿದ್ಯಾ ಆರು ರೂಪಾಯಿ ಇಟ್ಟಳು. ಬಾ:ಯ್ ಸಲಾಮು ಹೊಡೆದು ಒಡೆಯನಿಗೆ ಹಣ ಮುಟ್ಟಿಸಿ ಹತ್ತಾಣೆ—ಎಂಟಾಣೆ ಮತ್ತು ಎರಡಾಣೆಯ ಚೂರುಗಳನ್ನು — ಅದೇ ಬಸಿಯೊಳಗೆ ಹಾಕಿ ತಂದ. ವಿದ್ಯಾ ಅವನನ್ನು ತಡೆದು 'That's all right' ಎಂದಳು. ಬಾ:ಯ್ 'Thank you madam' ಎಂದು ವ್ಯವಸ್ಥಿತವಾಗಿ ಇನ್ನೊಂದು ಸಲಾಮು ಹಾಕಿ ಬಸಿಯೆತ್ತಿಕೊಂಡು ಹೋದ.

ಹೋಟೆಲ್‌ನಿಂದ ಹೊರಗೆ ಬಂದು 'ಬೀಡಾ' ತೆಗೆದುಕೊಂಡು ಮೆಲ್ಲುತ್ತ ಬಂದರು. ಮನೂ 'ಕ್ಯಾವೆಂಜರ'ದ ಹೊಗೆ ಬಿಡುತ್ತ 'ನೀನೂ ಒಂದು ಹಚ್ಚುತ್ತೀಯೇನು?' ಎಂದು ವಿದ್ಯಾನೆದುರಿಗೆ ಸಿಗರೇಟ್ ಪ್ಯಾಕೆಟ್ ತೆರೆದು ಹಿಡಿದ.

'ಇದೇನು, ಇಲ್ಲದ ಹುಚ್ಚುಚ್ಚು ಬಡಿಯಬೇಡ! Don't be silly I say!' ಎಂದು ಸಲುಗೆಯಿಂದ ಬೈದಳಾಕೆ.

ಮನೂ ನಗುತ್ತ 'ಮದಾಮ್, ನನಗೀಗ 'ಟ್ಯಾಕ್ಸಿ' ಬೇಕು. ನನ್ನ ದೇಹ ಮುಂದೆ ಸಾಗದು' ಎಂದು ಅಲ್ಲೇ ನಿಂತುಬಿಟ್ಟ.

'ರೀಗಲ್ ವರೆಗಾದರೂ ನಡೆಯುತ್ತೀ ಇಲ್ಲವೊ?'

'ಹೂಂ, ಆಗಲಿ' ಎಂದು ಮನೂ ಒಪ್ಪಿಕೊಂಡ. ಇಬ್ಬರೂ ರೀಗಲ್ ಸಿನೇಮಾದ ಬಳಿ ಒಂದು ಟ್ಯಾಕ್ಸಿ ಮಾಡಿಕೊಂಡು ದಾದರಿಗೆ ನಡೆದರು.

'ಓ' ರೂಟ್ ಹಿಡಿದು ಹೋಗೋಣ.' ಎಂದ ಮನೂ.

'ಏಕೆ?'

' ಮಹಾಲಕ್ಷ್ಮಿ ಬಳಿಯಿಂದ ವರ್ಲಿ ಮೇಲಿಂದ ಹೋದರೆ ಸಮುದ್ರ-ದಿಂದ ಬರುವ ತಂಗಾಳಿ ಚೆನ್ನಾಗಿರುತ್ತದೆ. '

ಗಾಡಿ ' ಕೆಂಪ್ಸ ಕಾರ್ನರ್.' ಮೇಲಿಂದ ಹಾಯ್ದು ವರ್ಲಿಮಾರ್ಗವಾಗಿ ಸಾಗಿತು. ರೇಸಕೋರ್ಸನ್ನು ಬಲಕ್ಕೆ ಹಾಕಿಕೊಂಡು ನೀಲಿ ವರ್ಣದ ಸಾಲುಸಾಲಾದ ಗ್ಯಾಸ್‌ದೀಪಗಳನ್ನು ದಾಟುತ್ತ ಹೋಗುವಾಗ ಇಬ್ಬರೂ ಆ ಸುಖದ ರಮಣೀಯ ವಾತಾವರಣವನ್ನು ಅನುಭವಿಸಿ ಆನಂದಿಸುತ್ತ ಒಬ್ಬರಿಗೊಬ್ಬರು ಕನ್ನಡದಲ್ಲಿ ಚೇಷ್ಟೆಮಾಡುತ್ತಿರುವಾಗ ಡ್ರಾಯವರನೊಬ್ಬ ಅಡ್ಡಬಾಯಿ ಹಾಕಿ ತನಗೂ ಕನ್ನಡ ಬರುತ್ತದೆಂಬ ಜಂಬ ತೋರಬೇಕೆ ? ಇಬ್ಬರೂ ಅವನ ಕನ್ನಡ ಮಾತಿಗೆ ಮೊದಲು ನಕ್ಕರು, ತಮ್ಮ ಚೇಷ್ಟೆಯ ಹೂರಣ ಅವನಿಗೆ ಗೊತ್ತಾಯತಲ್ಲ ಎಂದು. ಆದರೆ ಮುಂಬಯಿಯಂತಹ ಊರಲ್ಲಿ ಕನ್ನಡ ಡ್ರೈವ್ಹರ ಸಿಕ್ಕನಲ್ಲ ಎಂದು ಉಂಟಾದ ಕುತೂಹಲದ ಮೂಲಕ ವಿಶೇಷ ನಿರಾಶೆಯಾಗಲಿಲ್ಲ.

' ನಿಮ್ಮೂರಾವುದು ? ' ಮನೂ ಕೇಳಿದ.

' ಮಂಗಳೂರಾಯಿತು ಸ್ವಾಮಿ. '

' ಆಂ ! ' ವಿದ್ಯಾ ಸಾನಂದಾಶ್ಚರ್ಯದಿಂದ ಉದ್ಗಾರವೆತ್ತಿದಳು. ಮತ್ತೆ ಮುಂದರಿದು ' ಮೊಗವೀರರ ಪೈಕಿಯೇನು ? '

' ಅಲ್ಲಮ್ಮ, ಬಂಟರು. '

' ಮುಂಬಯಿಯಲ್ಲಿ ಮೊಗವೀರರು ಬೇಕಾದಷ್ಟು ಜನ ಇದ್ದಾರೆ, ಅದಕ್ಕೆಂದು ಕೇಳಿದೆ. ' ಎಂದು ತಾನು ಮಂಗಳೂರಿನವಳು ಎಂಬುದನ್ನು ತೋರಗೊಡದೆ ಮಾತಾಡಿದಳು ವಿದ್ಯಾ.

ಪೋರ್ತುಗೀಜ ಚರ್ಚ ಮೇಲಿಂದ, ರಾನಡೆ ರೋಡ 'ಕ್ರಾಸ್' ಮಾಡಿ ' ಟಿಳಕ ಬ್ರಿಜ್ ' ದಾಟಿ ಖುದಾದಾ ಸರ್ಕಲ್ಲಿನಿಂದ ' ಚಿತ್ರಾ ಟಾಕೀಜ ' ಎಡಕ್ಕೆ ಮಾಡಿಕೊಂಡು ಹೊರಳಿ, ಟ್ಯಾಕ್ಸಿ ' ಶ್ರೀ ಸೌಂಡ ಸ್ಟುಡಿಯೊ'ದ ಎದುರಿಗೆ ಬಂದು ನಿಂತಿತು.

ಶೂಟಿಂಗಿಗೆ ಪ್ರಾರಂಭವಾಗಿತ್ತು. ಎತ್ತರವಾದ ವಿಸ್ತಾರವಾದ ಮಹಾ-ರಾಯನಂತಹ ಸ್ಟುಡಿಯೋ. ಅದೇ ಮುಖ್ಯ ಸ್ಟುಡಿಯೊ. ಅದರಲ್ಲಿ ದೊಡ್ಡದೊಂದು ಅತ್ಯಾಧುನಿಕ ಶಿಸ್ತಿನ ಒಂದು ಮನೆ. ದೊಡ್ಡ ಅಂಗಳ, ಎಡಬಲ-

ದಲ್ಲಿ ಉದ್ಯಾನ. ಕಾಗದದ ಹೂ—ಹಸಿರು ಕಂಪವೊಂದು ಬಿಟ್ಟರೆ ಕಣ್ಣಿಗೆ ತೀರ ಸ್ವಾಭಾವಿಕವಾಗಿ ಕಾಣುತ್ತಿದ್ದುವು. ಮನೆಯ ಪ್ರವೇಶಕ್ಕೆ ಎಡಬಲದಲ್ಲಿ ಕಟ್ಟೆಗಳು. ಸಮೀಪಕ್ಕೆ ಹೋಗಿ ನೋಡಿದಾಗ ಮಾತ್ರ ಬರಿ ಅರಿವೆ, ರಟ್ಟು, ಕಟ್ಟಿಗೆಗಳೆಂಬುದು ಗೊತ್ತಾಗಬೇಕು. ಆದರೆ ಆ ಪಡಸಾಲೆ, ನಡುಮನೆ, ನಡುಮನೆಯೊಳಗಿನ ಕೋಣೆಗಳು, ಕೋಣೆಗಳ ಬಾಗಿಲುಗಳು, ಮನೆಯ ಮಾಳಿಗೆಯಿಂದಿಳಿದ ಥಾಟು ಇವನ್ನೆಲ್ಲಾ ನೋಡಿದರೆ ಮುಂಬಯಿ ಸಬರ್ಬುಗಳಲ್ಲಿರುವ ಶ್ರೀಮಂತರ ಉತ್ತಮವಾದ ಒಂದಸ್ತಿನ ಮನೆಯೆಂಬ ಮಾಯೆಯನ್ನು ಹುಟ್ಟಿಸುತ್ತಿತ್ತು. ಈ ಸೃಷ್ಟಿಯನ್ನು ನೋಡಿ ವಿದ್ಯಾವತಿಗೆ ಬೆರಗಾಗಿಹೋಯಿತು. ವಿಶ್ವಾಮಿತ್ರನ ಸೃಷ್ಟಿಯೂ ಅಲ್ಲ, ಬ್ರಹ್ಮನ ಪ್ರತಿಸೃಷ್ಟಿಯೆಂದು ಕೌತುಕಬಟ್ಟಳು. ಮುಗಿಲೆತ್ತರದಲ್ಲಿ ಜಂತಿಯ ಮೇಲೆ ನಿಂತುಕೊಂಡು ಶಕ್ತಿಯುಕ್ತವಾದ ವಿದ್ಯುದ್ದೀಪಗಳನ್ನು ಕೊಡುತ್ತಿದ್ದರು. ಕ್ಯಾಮೇರಾಮನ್ ಗಾಲಿಗಳ ಮೇಲೆ ಹೇಗೆ ಫೋಕಸ್ ಬೇಕೋ ಹಾಗೆ ಹಿಂದೆ,ಮುಂದೆ, ಮೇಲೆ, ಕೆಳಗೆ ಹೊರಳಾಡಿಸುತ್ತಿದ್ದ ತನ್ನ ಕ್ಯಾಮೆರಾ. ಫೋಟೊ ತೆಗೆದುಕೊಳ್ಳುವ ದೃಶ್ಯವಿಷ್ಟೆ ಮನೋಹರವಾಗಿ ಮೆರೆಯುತ್ತಿದ್ದರೆ ಉಳಿದ ಭಾಗವೆಲ್ಲಾ ನೈಜದಿಂದ ಹಾಳು ಸುರಿಯುತ್ತಿತ್ತು. ಧ್ವನಿಮುದ್ರಕನು ತನ್ನ ಕೋಣೆಯೊಳಗಿನಿಂದ ಮಾತಾಡಿದುದೆಲ್ಲಾ ಸ್ಟುಡಿಯೊದಲ್ಲಿಯ ಒಂದು ಧ್ವನಿಪೆಟ್ಟಿಗೆಯಲ್ಲಿ ಕೇಳಬರುತ್ತಿತ್ತು.

ಸದ್ಯಕ್ಕೆ 'ಶೂಟಿಂಗ್' ನಡೆದ ದೃಶ್ಯ ಹೀಗಿತ್ತು: ಕಥಾನಾಯಕ, —ಎಂದರೆ ದಿಲೀಪಕುಮಾರನು—ಕಥಾನಾಯಕಿಯ ಮನೆಯಿಂದ ಹೊರಬಿದ್ದು ಕಟ್ಟೆಯ ಕೆಳಗಿಳಿದು ತನ್ನ ಸೈಕಲ್ ಕೈಯೊಳಗೆ ಹಿಡಿದುಕೊಂಡು ಹಿಂತಿರುಗಿ 'ಟಾ-ಟಾ' ಎನ್ನುತ್ತಾನೆ. ನಾಯಕಿ—ಎಂದರೆ ನೂರಜಹಾನ್— ಕಟ್ಟೆಯ ಮೇಲೆ ನಿಂತುಕೊಂಡು ಪ್ರೇಮಪೂರಿತವಾದ ಸ್ನೇಹಸ್ನಿಗ್ಧವಾದ ಕಣ್ಣುಗಳಿಂದ ತಾನೂ 'ಟಾ ಟಾ' ಎಂದು ಬೆರಳು ಮಾಡುವಳು. ಇಲ್ಲಿಗೆ ಒಂದು 'ಶೊಟ್' ಮುಗಿಯುತ್ತಿತ್ತು.

'Yes shot number fifty-two get ready.' ಎಂದು ಧ್ವನಿಮುದ್ರಕ ಕೂಗಿದ.

'Yes get ready' ಎಂದು ಚಪ್ಪಾಳೆ ಹೊಡೆಯುತ್ತ ದಿಗ್ದರ್ಶಕ

ಶೌಕತ ಹುಸೇನ ಗಡಬಡಿಸಹತ್ತಿದರು. ಒಂದು ಫ್ಲ್ಯಾನಲ್ ಪ್ಯಾಂಟು, ವೇಸ್ಟ-ಸಿಲ್ಕಿನ ಒಂದು ಬುಶ್‌ಕೋಟು, ನೀಳವಾದ ಬಿಳಿ ಛಾಯೆಯ ಮುಖ, ಮುಖಕ್ಕೊಪ್ಪುವಂತೆ ಕರ್ರಗೆ ಕಂಗೊಳಿಸುವ ಗುಂಗುರಗೂದಲು ಕ್ರಾಪು, ಬಗಲೊಳಗೊಂದು ಸಿನೇರಿಯೊ ಹಸ್ತಪ್ರತಿ ! ಪ್ರತಿಭಾವಂತ ದಿಗ್ದರ್ಶಕನೆಂಬಂತೆ ಠೀವಿಯಿಂದ ಕಂಗೊಳಿಸುತ್ತಿದ್ದರು.

ದಿಲೀಪಕುಮಾರ ಒಳ್ಳೇ ಶಿಸ್ತಿನ ‘ ವೂಲನ್‌ಸ್ಯೂಟ್ ’ನಲ್ಲಿ ದಪ್ಪನಾದ ಕ್ರಾಪ್ ಬಿಟ್ಟುಕೊಂಡು ಕೊರಳಿಗೊಂದು ‘ ಸ್ಕಾರ್ಫ ’ ಹಾಕಿಕೊಂಡು ಸಜ್ಜಾಗಿ ಬಂದು ನಿಂತ.

‘ ಇವರೇನೆ ದಿಲೀಪಕುಮಾರ ? ’ ವಿದ್ಯಾ ಬಹಳ ಕುತೂಹಲದಿಂದ ನೋಡುತ್ತ ನಿಂತಳು. ಚಿತ್ರದಲ್ಲಿ ನೋಡುತ್ತಿದ್ದ ಪರಿಚಿತ ಮುಖವು ಪ್ರತ್ಯಕ್ಷದಲ್ಲಿ ಕಂಡುಬಂದಾಗ ಏನೋ ಒಂದು ಹಿಗ್ಗು ಮಿಂಚಿನಂತೆ ಸುಳಿದು ಹೋಯಿತು.

ಸರಿ. ನಾಯಕ ಸಿದ್ಧನಾಗಿ ನಿಂತ. ನಾಯಕಿಯೆ ಬರಲಿಲ್ಲ. ‘ Get ready, get ready ’ ಎಂದು ಪೆಟ್ಟಿಗೆಯೊಳಗಿನ ಧ್ವನಿ ಕೂಗಿತು. ಆಚೆಯ ಒಂದು ಮೂಲೆಯಲ್ಲಿ ಸೋಫಾದ ಮೇಲೆ ನೂರಜಹಾನ್ ತನ್ನ ಮಗುವನ್ನು ಮಲಗಿಸುತ್ತಿದ್ದಳು. ವಿದ್ಯಾವತಿಯ ದೃಷ್ಟಿ ಒಮ್ಮಿಂದೊಮ್ಮೆ ಆಚೆಗೆ ಹೋಯಿತು. ‘ ಓ, ನೂರಜಹಾನ್ ! ’ ಎಂದು ಕೂಗುವುದರಲ್ಲಿದ್ದಳು. ಮನೂ ಕಣ್ಣು ಹಿಗ್ಗಿಸಿದುದನ್ನು ನೋಡಿ ತಡೆಹಿಡಿದಳು.

‘ ಆ ಮಗು ಅವಳದೊ ? ಕಥೆಯೊಳಗಿನದೊ ? ’ ವಿದ್ಯಾವತಿಗೆ ಅತ್ಯಂತ ಕುತೂಹಲ.

ಮನೂ ಮೆಲ್ಲನೆ ನಕ್ಕ. ‘ ಜೀವನದೊಳಗಿನ ಮಕ್ಕಳನ್ನು ಎತ್ತಿ ಮುದ್ದಾಡಿಸಿದವರೇ ಮಾತೃಹೃದಯವನ್ನರಿತು ಅಭಿನಯಿಸಬಲ್ಲರು. ’ ಎಂದು ಹೇಳಿದ.

ದಿಗ್ದರ್ಶಕರು ನಾಯಕಿಯ ಸಮೀಪಕ್ಕೆ ಬಂದು ‘ ಹೂಂ. ಹೂಂ. ಚಲೀಯೆ ’ ಎಂದು ಮೆಲ್ಲನೆ ರಟ್ಟೆ ತಟ್ಟಿದರು. ನೂರಜಹಾನ್ ‘ ಮೇಕಪ್ ’ ಸರಿಮಾಡಿಕೊಂಡು ಮನೆಯ ಕಟ್ಟೆಯ ಮೇಲೆ ಹೋಗಿ ನಿಂತಳು.

‘ Lights on ’ ( ಹುಂ, ಬೆಳಕು ಬಿಡಿರಿ. ) ದೂರಿಂದ ಒಂದು ಧ್ವನಿ ಕೂಗಿತು. ಮುಗಿಲೆತ್ತರದ ಜಂತಿಯ ಮೇಲಿಂದ ಎರಡು ಮೂರು ದೀಪಗಳು ಬಂದವು.

'ರಿಹರ್ಸಲ್' ಒಮ್ಮೆ ನಡೆಯಿತು. ಅಳತೆ ಮಾಡಿಟ್ಟಂತೆ ದಿಲೀಪ ಕುಮಾರ ಕಟ್ಟೆಯ ಕೆಳಗಿಳಿದು ಹತ್ತು ಹೆಜ್ಜೆ ಮುಂದೆ ಬಂದು ಕೈಯಲ್ಲಿ ಸೈಕಲ್ ತೆಗೆದುಕೊಂಡು 'ಟಾ-ಟಾ' ಎಂದ. ನೂರಜಹಾನ್ ಮುಗುಳ್ನಕ್ಕು 'ಟಾ-ಟಾ' ಎಂದು ಬೆರಳಾಡಿಸಿದಳು.

ದಿಗ್ದರ್ಶಕರಿಗೆ ಇದು ಸರಿ ಬರಲಿಲ್ಲ. ತಾವೇ ಸ್ವತಃ ಕಟ್ಟೆ ಹತ್ತಿ, ಕೆಳಗಿಳಿದು ಹತ್ತು ಹೆಜ್ಜೆ ಮುಂದೆ ಬಂದು, ಕೈಯಲ್ಲಿ ಸೈಕಲ್ ತೆಗೆದುಕೊಂಡು 'ಟಾ-ಟಾಽಽಽ' ಎಂದು ಬಹು ಮೋಹಕವಾಗಿ ನುಡಿದರು. ಅದಕ್ಕೆ ನೂರ ಜಹಾನ್ ಮುಗುಳ್ನಕ್ಕು 'ಟಾ-ಟಾ' ಎಂದು ಬೆರಳಾಡಿಸಿದಳು. ಅದೂ ಮನಸ್ಸಿಗೆ ಬರಲಿಲ್ಲ ದಿಗ್ದರ್ಶಕರಿಗೆ. ಕಟ್ಟೆ ಹತ್ತಿ ತಾವೇ ಬೆರಳಾಡಿಸುತ್ತ ಅತ್ಯಂತ ಮಾರ್ಮಿಕವಾಗಿ ಪ್ರಣಯಚೇಷ್ಟೆಯ ನಗೆ ಮೂಡಿಸುತ್ತ 'ಟಾ-ಟಾಽಽಽ' ಎಂದು ಇನ್ನಷ್ಟು ಮನಮೋಹಕವಾಗಿ ನುಡಿದರು. ಅದ ರಂತೆ ಮಾಡಲು ದಿಲೀಪನಿಗೂ ತಮ್ಮ ಹೆಂಡತಿ ನೂರಜಹಾನಳಿಗೂ ಹೇಳಿ ದರು.

'Feel yourself a lover. Imagine the situation and let me know how you would do' (ನೀವೆ ಪ್ರೇಮಕಾಮಿಯಾಗಿದ್ದೀರೆಂದು ಭಾವಿಸಿ ಸಂದರ್ಭವನ್ನು ಕಲ್ಪಿಸಿಕೊಂಡು ಮಾಡಿರಿ. ಹೇಗೆ ಮಾಡುತ್ತೀರೊ ನೋಡೋಣ.) ಎಂದು ಕಥಾನಾಯಕನಿಗೆ ಹೇಳಿದರು. ಅದೇ ರೀತಿ ತಮ್ಮ ಹೆಂಡತಿಗೆ 'Look here. You are his lady-love. You have taken a fancy for him. You have to enthral his heart and mind, his very soul.........now come on' (ಇಕಾ, ನೀನು ಆತನ ಪ್ರೇಯಸಿ. ಆತನಿಗೆ ಮೋಹಿಸಿಬಿಟ್ಟಿದ್ದೀ. ಆತನ ಮನಸ್ಸನ್ನು—ಅಷ್ಟೇ ಏಕೆ ಆತ್ಮವನ್ನೂ ಮರುಳುಗೊಳಿಸಿ ಸೆರೆಹಿಡಿಯಬೇಕು.) ಎಂದು ಗಂಡನೇ ನಿಂತುಕೊಂಡು ತನ್ನ ಕೈಹಿಡಿದ ಹೆಂಡತಿಗೆ ಇನ್ನೊಬ್ಬನೊಡನೆ ಪ್ರಣಯ ಬೆಳಸುವ ಪಾಠ ಹೇಳಿಕೊಡುತ್ತಲಿದ್ದಾನೆ! ವಿದ್ಯಾವತಿಯ ವಿಚಾರಸರಣಿ ಇನ್ನೊಂದು ವಿಧದಲ್ಲಿ ಮುಂದೋಡಿತು:

'ಶೌಕತ್‌ಹುಸೇನರ ಮನಸ್ಸು ಎಷ್ಟೊಂದು ವಿಶಾಲ, ಉದಾರವಾಗಿರ ಬೇಕು! ಗಂಡನೇ ನಿಂತುಕೊಂಡು ತನ್ನ ಹೆಂಡತಿಗೆ ಇನ್ನೊಬ್ಬನೊಡನೆ ಪ್ರೇಮ ಮಾಡಲು ಕಲಿಸಿಕೊಡುತ್ತಿರುವನಲ್ಲ.......'

ಮನೂನ ಪತ್ರದ ಬಗ್ಗೆ ತನ್ನ, ರಾಮನಾಥನ ನಡುವೆ ನಡೆದು ಹೋದ ವಾಗ್ಯುದ್ಧದ ಚಿತ್ರ ಮತ್ತೊಮ್ಮೆ ಅವಳ ಕಣ್ಮುಂದೆ ಸುಳಿಯಿತು. 'ರಾಮನಾಥ ಇಂತಹ ವಿಶಾಲ ಜಗತ್ತನ್ನು ಕಣ್ತೆರೆದು ನೋಡಬೇಕು. ಎಂದರೆ ಅವನಿಗೆ ವಿಶಾಲಚಿತ್ತ ಉದಯವಾದೀತು....'

ರಿಹರ್ಸಲ್ ಹಾಗೇ ಮುಂದರಿದಿತ್ತು. ಒಂದು ಸಲ, ಎರಡು ಸಲ, ಹತ್ತು ಸಲ ನಡೆಯಿತು. ಕೊನೆಗೊಮ್ಮೆ ಮೈಕ್ರೊಫೋನ್ ಮತ್ತು ಕ್ಯಾಮರಾ 'adjustment' ನಡೆದ ಮೇಲೆ 'Ready for take' ಎಂದು ಕೂಗಿದರು ದಿಗ್ದರ್ಶಕರು. ದೀಪಗಳು ಝಗ್ಗನೆ ಮೂಡಿದುವು. 'ಶೊಟ್ ನಂಬರ ೭೪' ಎಂದು ಬರೆದಿದ್ದ ಒಂದು ಬೋರ್ಡು ಕ್ಯಾಮರಾದ ಮುಂದೆ ಹಿಡಿದು ಒಬ್ಬ 'Production Assistant' ಅದಕ್ಕೆ ಹಚ್ಚಿದ ಕಟ್ಟಿಗೆ ತುಂಡಿನಿಂದ 'ಕಟ್' ಎಂದು ಸಪ್ಪಳ ಮಾಡಿದ. ಎಲ್ಲ ಕಡೆಗೂ ನಿಶ್ಶಬ್ದ. ಕಥಾನಾಯಕ ಮನೆಯ ಕಟ್ಟೆಯಿಂದ ಕೆಳಗಿಳಿದು ಬಂದ. ಹತ್ತುಹೆಜ್ಜೆ ಮುಂದೆ ಬಂದು ಕೈಯೊಳಗೆ ಸೈಕಲ್ ತೆಗೆದುಕೊಂಡು ಹಿಂತಿರುಗಿ 'ಟಾ-ಟಾಽಽ' ಎಂದ. ಕಟ್ಟೆಯ ಮೇಲೆ ನಿಂತಿದ್ದ ಕಥಾನಾಯಕಿ ಕಾಲು ಎತ್ತರಿಸಿ'—ಟಾ-ಟಾಽಽ' ಎಂದು ಬೆರಳಾಡಿಸಿದಳು. 'ಶೊಟ್' ಮುಗಿಯಿತು.

'No cut.' ಎಂದು ಧ್ವನಿಮುದ್ರಕ ಕೂಗಿದ.

'Light off.' ದಿಗ್ದರ್ಶಕ ಕೂಗಿದ.

'Retake.' ಕ್ಯಾಮೆರಾಮನ್ ಕೂಗಿದ.

ಮತ್ತೆ ಬಿಗಿಹಿಡಿದ ಧ್ವನಿಗಳು ಗಲಭೆ ನಡಿಸಿದುವು. 'Retake' ಸಿದ್ಧತೆ ನಡೆಯಿತು. ಮತ್ತೆ ಶ್ರೀಕೃಷ್ಣನ ಸುದರ್ಶನವನ್ನು ಝುಕ್ಕಿಸುವ ಗಿರಣಿಯು ಬೀಸುವ ಕಲ್ಲಿನಂತಹ 'ಫ್ಯಾನ್' ಭಂವ್ ಎಂದು ತಿರುಗಹತ್ತಿತು.

'Yes, ready.' ಧ್ವನಿಮುದ್ರಕ ಕೂಗಿದ.

'Lights on.'

'Start.'

ಮತ್ತೆ ನಿಶ್ಶಬ್ದ. ದೀಪಗಳೂ ಝಗ್ಗನೆ ಹತ್ತಿದುವು. ಕಥಾನಾಯಕ ಕಟ್ಟೆಯಿಳಿದು ಹತ್ತುಹೆಜ್ಜೆ ಮುಂದೆನಡೆದು ಕೈಯಲ್ಲಿ ಸೈಕಲ್ ತೆಗೆದುಕೊಂಡು ಹಿಂತಿರುಗುವಾಗ ಕೈಯೊಳಗಿನ ಸೈಕಲ್ ಜಾರಿಹೋಯಿತು.

'Cut' ಎಂದು ಅಬ್ಬರಿಸಿ ಕೂಗಿದ ಕ್ಯಾಮರಾಮನ್.

ಈ ಯಾಂತ್ರಿಕ ನಿರ್ಮಿತಿಯನ್ನು ನೋಡುತ್ತ ನಿಂತು ವಿದ್ಯಾವತಿಗೆ ಬೇಸರಿಟ್ಟುಹೋಯಿತು. ಮನೂ ತನ್ನ ಇನ್ನೊಬ್ಬ ಸ್ಟುಡಿಯೊಮಿತ್ರ ನೊಂದಿಗೆ ವಿದ್ಯಾವತಿಯನ್ನು ಕರೆದುಕೊಂಡು ಮೇಕಪ್ ರೂಮಿನತ್ತ ನಡೆದ.

'Oh, how boaring it is! Shooting means shooting without killing which is much worse.' (ಓ! ಏನು ತಲೆಬೇಸರ ಇದು! ಜೀವ ತೆಗೆದುಕೊಳ್ಳದೆ ಶೂಟ್ ಮಾಡುವದೆಂದರೆ ಇನ್ನೂ ಕೆಟ್ಟ.) ಎಂದು ನಗೆಯಾಡಿದಳು ವಿದ್ಯಾ. ಜೊತೆಗಿದ್ದ ಮಿತ್ರರೂ ನಕ್ಕರು.

'And how do they manage for songs?' (ಹಾಡುಗಳಿಗೆ ಹೇಗೆ ಮಾಡುತ್ತಾರೆ?)

'No. Songs are recorded before hand. During the shoot ing the whole action is being photographed with the play-back, when the character simply sings it without recording' (ಇಲ್ಲ. ಮೊದಲೇ ಹಾಡುಗಳ ಧ್ವನಿಮುದ್ರಿಕೆ ತೆಗೆದಿರುತ್ತಾರೆ. ಶೂಟಿಂಗ್ ನಡೆದಾಗ ಈ ಧ್ವನಿಮುದ್ರಿಕೆಯ ಹಿನ್ನೆಲೆಯಲ್ಲಿಯೇ ಇಡೀ ಅಭಿನಯವನ್ನು ಪ್ರತಿರೂಪಿಸಿಕೊಳ್ಳುತ್ತಾರೆ ಫೋಟೋಗ್ರಾಫಿಯಿಂದ. ಆಗ ಪಾತ್ರ ಅದೇ ಹಾಡನ್ನೇ ಮತ್ತೆ ಒಟಗುಟ್ಟಿದರೂ ಅದು ಮೂಡುವುದಿಲ್ಲ.)

'Is it so?' (ಹೀಗೇನು?) ಎಂದು ಆಶ್ಚರ್ಯದಿಂದ ಕೇಳಿದಳು ವಿದ್ಯಾ.

'And therefore they can use any other voice suitable for the song'– (ಅಂತೇ ಬೇಕಾದ ಧ್ವನಿಯನ್ನು ಉಪಯೋಗಿಸಿಕೊಳ್ಳ ಬಹುದಾಗಿದೆ ಹಾಡಿಗೆ ತಕ್ಕಂತೆ.) ಮನೂ ಹೇಳಿದ.

ಮೇಕಪ್‌ರೂಮಿಗೆ ಬಂದರು. ಮೂರು ನಾಲ್ಕು ಕ್ರಿಶ್ಚನ್ ಕನ್ನಿಕೆಗಳ ಮೇಕಪ್ ನಡೆದಿತ್ತು. ಸುಣ್ಣ, ಬಣ್ಣ, ಸಾರಣಿ, ಕಾರಣಿಗಳನ್ನೆಲ್ಲಾ ಬಡೆಯು ವವರೊಬ್ಬರು ಬೇರೆಯೆ. ಇವು ಮಣ್ಣಿನ ಗೊಂಬೆಗಳಂತೆ ಸ್ವಸ್ಥ ಕುಳಿತು ಬಿಟ್ಟಿದ್ದುವು.

'What is the next shot?' (ಮುಂದಿನ 'ಶೊಟ್' ಯಾವದು?) ಮನೂ ಕೇಳಿದ.

'College Hostel Scene.' ಮಿತ್ರ ಉತ್ತರ ಕೊಟ್ಟ.

ಮಿತ್ರನ ಚಹಾಪಾನದ ಆತಿಥ್ಯ ಮುಗಿಸಿ ಸ್ಟುಡಿಯೊ ಪ್ರವೇಶಿಸುವುದಕ್ಕೇ ಧ್ವನಿಮುದ್ರಕ 'ಓ. ಕೇ.' ಎಂದು ಕೂಗಿದ.

ದಿಲೀಪಕುಮಾರ 'ಉಶ್' ಎಂದು ಕೋಟು ಕಳೆದು ಸೋಫಾದ ಮೇಲೆ ಆರಾಮಾಗಿ ಬಿದ್ದುಕೊಂಡ. ನಾಯಕಿ ಮತ್ತೆತ್ತೊ ಹೋದಳು. ಈ ಕ್ಷಣದ ಹಿಂದೆ ಜೀವದ ಕೆಳೆಯ ಕೆಳದಿಯರಾಗಿ ನಡೆದುಕೊಂಡವರು, ಕ್ಷಣದ ನಂತರ ಪರಕೀಯರಂತೆ ಆವನೆತ್ತೊ ಆಕೆಯತ್ತೊ ಹೋಗಿಬಿಟ್ಟರು. ವಿದ್ಯಾವತಿಯ ತಲೆಯಲ್ಲಿ ಇನ್ನೂ ಅದೇ ಗುಂಗು. ಗಂಡನೇ ನಿಂತುಕೊಂಡು ಹೆಂಡತಿಯನ್ನು ಇನ್ನೊಬ್ಬರೊಡನೆ ಪ್ರೇಮಿಸಲು ಹಚ್ಚುತ್ತಾನಲ್ಲ!

ಹಾಸ್ಟೆಲ್ ಸೀನೂ ಮುಗಿಯಿತು. ಆದರಲ್ಲಿ ಆ ಕ್ರಿಶ್ಚನ್ ಕುವರಿಯರು ಸೋಫಾದ ಮೇಲೆ ಕುಳಿತುಕೊಂಡು ಹರಟುತ್ತಿದ್ದಾಗ, ದಿಗ್ದರ್ಶಕರು ಮೆಲ್ಲನೆ ಬಂದು ಒಬ್ಬಳ ಫ್ರಾಕನ್ನು ಮೊಳಕಾಲಮೇಲೇರಿಸಿ ಹೋದರು. ಹಾಗೆ ಫ್ರಾಕ್ ಮೇಲೇರಿಸಿಕೊಂಡೇ ಶೊಟ್ ಮುಗಿಸಬೇಕಾಗಿತ್ತು. ಎಲ್ಲವೂ ಯಾಂತ್ರಿಕವಾಗಿ ಮುಗಿಯಿತು. ವಿದ್ಯಾವತಿಗೆ ಮತ್ತೊಂದು ಕುತೂಹಲ. 'ಇದೇನು, ಈ ದಿಗ್ದರ್ಶಕರು ಬೇಕಾದ 'liberty' (ಸ್ವಾತಂತ್ರ್ಯ) ತೆಗೆದುಕೊಳ್ಳಬಹುದೆ?' ಎಂದು ಮನೂನನ್ನು ಕೇಳಿದಳು.

'ಹೌದು. ಅದೆಲ್ಲ ಕರಾರಿನಲ್ಲಿಯೆ ಇರುತ್ತದೆ.'

ಶೂಟಿಂಗ ನೋಡಿಕೊಂಡು ಹೊರಬಿದ್ದಾಗ ಮಧ್ಯರಾತ್ರಿ ಮೀರಿ ಎರಡು ಗಂಟೆಯಾಗಿತ್ತು. ಮನೆ ಮುಟ್ಟುವುದಕ್ಕೆ ಯಾವ ವಾಹನಗಳೂ ಇಲ್ಲದೆ ಕಾಲನಡಿಗೆಯಿಂದಲೇ ಸಾಗಬೇಕಾಯಿತು.

'ಇದೇನು ಮನೂ, ಶೌಕತಹುಸೇನರು ಹೀಗೆಲ್ಲಾ ತಮ್ಮ ಹೆಂಡತಿಗೆ ಪ್ರಣಯದೃಶ್ಯಗಳಲ್ಲಿ ಪಾತ್ರಮಾಡಲು ಹೇಗೆ ಒಪ್ಪುತ್ತಾರೆ?'

'ಹುಂ! ಇದು ಜೀವನವಲ್ಲ ವಿದ್ಯಾ, ನಾಟಕ.'

'ನಾಟಕದಲ್ಲಿ ಇನ್ನೊಬ್ಬರೊಡನೆ ಪ್ರಣಯಚೇಷ್ಟೆಮಾಡಲು ಬಿಡಬೇಕಾದರೂ ಮನಸ್ಸಿನ ಸಿದ್ಧತೆ ಬೇಡವೆ?'

'ಹುಂ! ರೊಕ್ಕ ಎಲ್ಲವನ್ನೂ ಮಾಡಲು ಹಚ್ಚುತ್ತದೆ.'

'ದಿಗ್ದರ್ಶಕರು ಮುಖ್ಯನಾಯಕನ ಪಾತ್ರ ತಾವೇ ಏಕೆ ಮಾಡಬಾರದು?'

'ಹುಂ!' ದಿಗ್ದರ್ಶಕನಾಗಿರುವವನು ಅಭಿನಯಕಾರನಾಗಿರುತ್ತಾನೆಂದು ಹೇಳಲಿಕ್ಕೆ ಬಾರದು.........ದುಷ್ಯಂತನ ಪಾತ್ರಕ್ಕೆ ತಾನೇ ಯೋಗ್ಯನೆನಿಸಿದ್ದರೆ ಶಾಂತರಾಮ್ ಮಾಡಬಹುದಾಗಿತ್ತು.'

'ಹೌದು ತನ್ನ ಜಯಶ್ರೀಯನ್ನು ಇನ್ನೊಬ್ಬರೊಡನೆ ಅಭಿನಯಿಸಲು 'allow' ಮಾಡಿದ್ದಾನಲ್ಲವೆ?'

'ನಿನಗೂ ಸಿನೇಮಾದಲ್ಲಿ ಪಾತ್ರ ವಹಿಸಬೇಕೆಂದು ಮನಸ್ಸಿದೆಯೆ ವಿದ್ಯಾ?'

'ನಾನೇನು ನೂರಜಹಾನ್ ಅಲ್ಲ, ಜಯಶ್ರೀ ಅಲ್ಲ.'

'ನಾನು ಮಾಡುತ್ತೇನೆ ನಿನ್ನನ್ನು ನೂರಜಹಾನಳನ್ನಾಗಿ.'

'ನಿನ್ನನ್ನು ಶೌಕತ್‌ಹುಸೇನರನ್ನಾರು ಮಾಡಬೇಕು?'

ಮನೂ ಹಿಡಿಸಲಾರದೆ ನಕ್ಕ. ನಗೆಯ ಭರದಲ್ಲಿ 'ನೀನು' ಎಂದೆನ್ನುತ್ತ ಬೊಟ್ಟಿನಿಂದ ಅವಳ ಕೆನ್ನೆ ತಟ್ಟಿದ.

'I say ಮನೂ, don't be silly!' ಎಂದು ದೂರ ಸರಿದಳು ವಿದ್ಯಾ.

'ಹಾಗಾದರೆ ನಿನಗೆ ನೂರಜಹಾನ್ ಆಗುವ ಆಸೆಯಿಲ್ಲವೇನು?'

'ಮನೂ ನಾಳೆ ಆಲ್‌ಇಂಡಿಯಾ ರೇಡಿಯೋಕ್ಕೆ ಹೋಗೋಣವೆ?' ಅವನ ಪ್ರಶ್ನೆಗೆ ಲಕ್ಷ್ಯಗೊಡದೆ ಮರುಪ್ರಶ್ನೆ ಮಾಡಿದಳು ವಿದ್ಯಾ.

'ನಿನ್ನ ಮೇಲೆ ನನಗೆ ಸಿಟ್ಟು ಬಂದಿದೆ.'

'ಬರಲಿ. ನಾಳೆ ಎ. ಐ. ಆರ್. ಗೆ ಹೋಗೋಣವೆ? ನಾಳೆ ನಾನೂ ಕಚೇರಿಗೆ 'ಕ್ಯಾಜ್ಯುಅಲ್‌ಲೀವ್' ಹೇಳಿಕಳಿಸುತ್ತೇನೆ.'

'ನಾಳೆ ಹೋದರೆ ನಾಳೇ ಹೇಗೆ ನಿನ್ನ ಧ್ವನಿಪರೀಕ್ಷೆಯಾಗಬೇಕು?'

'ಮತ್ತೆ?'

'ಧ್ವನಿಪರೀಕ್ಷೆ ಶನಿವಾರಕ್ಕೊಮ್ಮೆ ಇರುತ್ತದೆ.'

'ಸಂಗೀತಕ್ಕಲ್ಲ ಮನೂ, ನಾನು ಹೇಳಿದ್ದು—ಕನ್ನಡ ನಾಟಕದಲ್ಲಿ ಭಾಗವಹಿಸಲಿಕ್ಕೇನು ಬಂದದ್ದು?'

'ಛೆ. ಛೆ. ಇಲ್ಲಿ ನಾಟಕಗಳಿರುವುದು ಮುಖ್ಯವಾಗಿ ಮರಾಠಿ, ಗುಜರಾಥಿಗಳಲ್ಲಿ. ಕರ್ನಾಟಕಕ್ಕೊಂದು ಆಲ್ ಇಂಡಿಯಾ ರೇಡಿಯೊ ಪ್ರಾರಂಭವಾದ ಮೇಲೆ ನೀನು ಪಾತ್ರವಹಿಸಬಹುದು.'

'ಏಕೆ? ನಿನಗೆ ಗೊತ್ತಿಲ್ಲವೇನು? ಮುಂಬಯಿ ಕೇಂದ್ರದಲ್ಲಿಯೂ ಕನ್ನಡ ಪ್ರಾರಂಭವಾಗಿದೆಯಂತಲ್ಲ?'

'ಓಹೋ ಹಳ್ಳಿಯ ಕಾರ್ಯಕ್ರಮಗಳು?'

'ಏನೇ ಇರಲಿ. ಅಲ್ಲಿಯೂ ನಾಟಕಗಳನ್ನಾಡುತ್ತಾರಲ್ಲವೆ?'

'ವಿಚಾರಿಸೋಣಂತೆ.'

ಪ್ಲಾಜಾದ ಬಳಿ ಬಂದರು. ಎಲ್ಲಿಂದಲೊ ಗಡಿಯಾರ ಮೂರು ಗಂಟೆ ಹೊಡೆದ ಸಪ್ಪಳ ಕೇಳಬಂತು.

'My good god! ಮೂರು ಬಡೆಯಿತೆ?' ವಿದ್ಯಾ ಸ್ವಲ್ಪ ಗಾಬರಿಗೊಂಡವಳಾಗಿ ಕೇಳಿದಳು.

'ಯಾಕೆ?'

'ಪಾಪ, ಮೋಲ್ಕರಿಣಿ ಒಬ್ಬಳೇ ಮನೆಯಲ್ಲಿ.'

'ಏನು? ಮೋಲ್ಕರಿಣಿಯ ಮೇಲೇ ಇಡೀ ಮನೆ ಬಿಟ್ಟು ಬರುವುದೆ?'

'ಛೆ. ಆಕೆ ವಿಶ್ವಾಸಿಕಳಿದ್ದಾಳೆ. ಹಾಗೇನೂ ಸಂಶಯಕ್ಕೆ ಎಡೆ ಇಲ್ಲ.'

'ಗುಡ್‌ನಾಯಿಟ್' ಎಂದು ಮನೂ ಗ್ಯಾಲರಿಯಲ್ಲಿ ಮುಸುಕೆಳೆದಾಗ ನಾಲ್ಕು ಹೊಡೆಯಲಿಕ್ಕೆ ಬಂದಿರಬೇಕು.

ವಿದ್ಯಾ ಮನೋಹರರು 'ಮರೀನ್ ಲೈನ್ಸ' ಸ್ಟೇಶನ್ನಿಗಿಳಿದಾಗ ರೇಲ್ವೆ ಗಡಿಯಾರದಲ್ಲಿ ಮಧ್ಯಾಹ್ನ ಸರಿಯಾಗಿ ಒಂದೂವರೆ ಗಂಟೆಯಾಗಿತ್ತು. ಕ್ವೀನ್ಸ ರೋಡಿನ ಗುಂಟ ನಡೆಯುತ್ತಲೆ ಬಂದರು.

ಲಿಫ್ಟಿನಿಂದ ಮೂರನೆಯ ಅಂತಸ್ತಿಗೆ ಹೊರಬರುತ್ತಲೆ ಎದುರಿಗೆ 'ಟೆಲಿಫೋನ್' ಆಪರೇಟರ ಇದ್ದಳು. ಅವಳ ತಲೆಯ ಮೇಲೆ 'All India Radio—Enquiries' ಎಂದು ಬೋರ್ಡು. ಮರಾಠಿಯ ಒಂದು ವಿಭಾಗದ 'in charge' ಇರುವ ತನ್ನ ಮಿತ್ರನೆಡೆಗೆ ವಿದ್ಯಾವತಿಯನ್ನು ಕರೆದೊಯ್ದು ಮನೂ. ಮಿತ್ರ ತನ್ನ ರೂಮಿನಲ್ಲಿ ಟೇಬಲ್ ಮೇಲೆ ಇತರ ಸ್ತ್ರೀಸಹೋದ್ಯೋಗಿಗಳೊಂದಿಗೆ 'ಲಂಚ್' ನಡಸಿದ್ದ. ಮನೂ ತನ್ನ

ಮಿತ್ರನಿಗೆ ವಿದ್ಯಾವತಿಯ ಪರಿಚಯ ಮಾಡಿಕೊಟ್ಟ. ಲಂಚ್ ಮುಗಿಸಿ ಕ್ರಿಶ್ಚನ್ ಮೈತ್ರಿಣಿಯೊಬ್ಬಳ ಕೈಯೊಳಗಿನ ಟಿನ್ನಿನಿಂದ ಒಂದು ಸಿಗಾರೆಟ್ ಎಬ್ಬಿಸಿ ಅದೇ ಟಿನ್ನನ್ನು ಮನೂನ ಮುಂದೆ ಹಿಡಿದು 'Our friend Miss Dorothy is a very noble lady. You have it if you don't mind' (ನಮ್ಮ ಮೈತ್ರಿಣಿಯರಾದ ಮಿಸ್ ದೊರೊಥೀಯವರು ಬಹಳ ಉದಾರಿಗಳು. ಏನೂ ಚಿಂತಿಸಬೇಡಿ ತೆಗೆದುಕೊಳ್ಳಿ) ಎಂದು ಚೇಷ್ಟೆಯಿಂದಲೆ ಅವಳ ಟಿನ್ನಿನೊಳಗಿನ ಸಿಗಾರೆಟ್ಟುಗಳನ್ನು ಬಳಸಹತ್ತಿದ. ಆಕೆ ತಾನೂ ಒಂದು ಸಿಗಾರೆಟ್ ಹೊತ್ತಿಸಿ ಆ ಮಿತ್ರನ ಬಳಿ ಬಂದು ಅವನ ಕೊರಳಿಗೆ ತನ್ನ ಎರಡೂ ಕೈಗಳನ್ನು ಹಾಕಿ 'And our friend Mr. Joyous (ಜೋಶಿ ಅವರ ಹೆಸರು) is so very noble that he does not mind offering drinks to every body' (ಮತ್ತೆ ನಮ್ಮ ಮಿತ್ರರಾದ ಜೋಶಿಯವರಾದರೂ ಬಹಳ ಉದಾರಿಗಳು. ಅವರು ನಮಗೀಗ 'ಡ್ರಿಂಕ್ಸ' ಪಾನಮಾಡಿಸುತ್ತಾರೆ.) ಎಂದವಳೆ 'ಚಪ್ರಾಸಿ!' ಎಂದು ಕೂಗಿ, ಅವನಿಗೆ 'Joyous' ರ ಹೆಸರಿನಿಂದ ರಾಜರ್ಸ ಆರೇಂಜ ತರಹೇಳಿದಳು.

ಮಿಸ್ ದೊರೋಥಿ ಇಂಗ್ಲೀಷ ಸಂಗೀತ ವಿಭಾಗಕ್ಕೆ ಸಂಬಂಧಿಸಿದವಳು. ನಡುವರಯದವಳು. ಇನ್ನೂ ಅವಿವಾಹಿತಳಾಗಿಯೆ ಇದ್ದು ಮದುವೆಯ ಆಸೆ, ವಯಸ್ಸು ಮೀರಿದ್ದುದರಿಂದ ಕಂಡ ಮಿತ್ರರನ್ನೆಲ್ಲಾ 'ನನ್ನನ್ನು ಮದುವೆಯಾಗುವಿರಾ?' ಎಂದು ಕೇಳಿ ಚೇಷ್ಟೆ ಮಾಡುವಳು. ರಾವ್ ಎಂಬ ಇಪ್ಪತ್ತೈದು ವಯಸ್ಸಿನ ಮುಗ್ಧ ತರುಣ ಅಲ್ಲಿಯೆ ಟಾಯಪಿಸ್ಟ. ಅವನನ್ನು ಕಂಡಾಗಲೆಲ್ಲಾ 'ನಮ್ಮ ಮದುವೆ ಎಂದು ರಜಿಸ್ಟರ ಮಾಡಿಸೋಣ?' ಎಂದು ಅವನ ಕ್ರಾಪಿನ ಮೇಲೆ ಕೈಯಾಡಿಸಿದಾಗ ಪಾಪ, ರಾವ್ ನವಯುವತಿಯಂತೆ ನಾಚಿ ಕೆಂಪಗಾದ ತನ್ನ ಮುಖ ಕೆಳಗೆ ಹಾಕುತ್ತಿದ್ದ. ಅದರಿಂದ ಇನ್ನಷ್ಟು ತಮಾಷೆಗೆ ಅವಕಾಶವಾಗುತ್ತಿತ್ತು.

ಡ್ರಿಂಕ್ಸ ಬಂದುವು. ಎಲ್ಲರೂ 'ಸ್ಟ್ರಾ' ಬಾಯೊಳಗಿಡುವ ಮೊದಲು, 'ಜೋಯ್ಸರ ಆರೋಗ್ಯಕ್ಕಾಗಿ' ಎಂದು ಹೇಳಿ ದೊರೋಥಿ ಗ್ಲಾಸು ಅವನ ಹಣೆಗೆ ಹಚ್ಚಿ ತನ್ನ ಹಣೆಗೆ ಹಚ್ಚಿಕೊಂಡು ಕಣ್ಣು ಮುಚ್ಚಿ ಔಷಧ ಕುಡಿದಂತೆ ಗಟಕ್ಕನೆ ಕುಡಿದುಬಿಟ್ಟಳು. ಅದರ ವಿನೋದವನ್ನು ಮೆಚ್ಚಿ ಎಲ್ಲರೂ ನಗೆ ಗಡಲಿನಲ್ಲಿ ಮುಳುಗಿ ಎದ್ದರು.

'How was your Radio Forum yesterday?' ಜೋಶಿ ಇನ್ನೊಬ್ಬ ವೈತ್ರಿಣಿಯನ್ನುದ್ದೇಶಿಸಿ ಕೇಳಿದ.

'ಊಫ್! It was a horrible job'—ಎಂದು ನಿಟ್ಟುಸಿರು ಬಿಟ್ಟಳು. ಆಕೆ.

'ಯಾಕೆ?'

'ಒಮ್ಮೆ ನಾವು ಹೈಕೋರ್ಟು ಜಜ್ಜರ 'ನನ್ನ ಜೀವನದಲ್ಲಿಯ ವಿಚಿತ್ರ ಅನುಭವಗಳು' ಎಂಬ ವಿಷಯದ ಮೇಲಿನ ಭಾಷಣವನ್ನು ಧ್ವನಿಮುದ್ರಿತ ಮಾಡಿಕೊಂಡು, ಅದನ್ನು ಉಪಯೋಗಿಸುವ ಮೊದಲು ಅದು 'ಧ್ವನಿಮುದ್ರಿತ' ಎಂದು ತಿಳಿಯಪಡಿಸಲು ಮರೆತುಬಿಟ್ಟೆವು. ಭಾಷಣದ ರಿಕಾರ್ಡು ಅರ್ಧ ಆಗಿರುವಾಗ, ಆ ಮೂರ್ಖ ಮಹಾಶಯ ಪ್ರಸಾರಕ ಒಮ್ಮೆಗೇ 'ಲೈಫ್-ಸ್ಟುಡಿಯೋ' ದಲ್ಲಿ ನುಗ್ಗಿ ಬಂದು, ತಿಳಿಯದೆ 'ಪಿಕ್-ಅಪ್'ನ್ನು ತಟ್ಟಿಬಿಡ-ಬೇಕೆ? ಆದರಿಂದ ನಡೆದ ಭಾಷಣ ಮೂರು ನಿಮಿಷ ಹಿಂದೆ ಹೋಯಿತು—ಅಂದರೆ ಹಾಡಿದ್ದೆ ಹಾಡೊ.....ಆಯಿತು.'

'ನ್ಯಾಯಾಧೀಶನೇ ಅದನ್ನು ಕೇಳಿರಬೇಕು?'

'ಅವನು ಕೇಳಲಿ ಬಿಡಲಿ ನಮ್ಮ 'ಬಾಃಸ್' ಕೇಳಿದನೋ ಇಲ್ಲವೊ?'

'ಕೇಳಿದನಿಷ್ಟೆ ಅಲ್ಲ, ಒಂದು ಕೈ ತೆಗೆದುಕೊಂಡೇಬಿಟ್ಟ!'

'ಫೋನ್ ಮೇಲೆ ಹೌದಲ್ಲೋ?' ಜೋಶಿ ವಿನೋದ ಮಾಡಿದ.

ವಿದ್ಯಾವತಿಗೆ ಅಲ್ಲಿಯ ಮುಕ್ತವಾತಾವರಣ ಬಹಳ ಮೋಹಕವೆನಿಸಿತು. ಅಲ್ಲಿಯ ಸ್ವಾರಸ್ಯಪೂರ್ಣವಾದ ವಿನೋದಲಹರಿಗಳ ಸುಳಿಸುಳಿಯಲ್ಲಿ ಸುತ್ತಾಡಿ ಕನ್ನಡ ವಿಭಾಗದ ಚಾಲಕರನ್ನು ಕಂಡಳು ಮನೂನೊಂದಿಗೆ.

'ಸುರಾಸುರೀ' ಎಂಬ ಪಾನನಿರೋಧದ ಮೇಲಿನ ರೇಡಿಯೊ ರೂಪಕವೊಂದು ಅದೇ ವಾರದಲ್ಲಿ 'ಶೆಡ್ಯೂಲ್' ಆಗಿತ್ತು. ಒಂದು ಸ್ತ್ರೀಪಾತ್ರಕ್ಕೆ ಒಬ್ಬ ಕಲಾವಿದೆ ಅವಶ್ಯವಾಗಿ ಬೇಕಾಗಿದ್ದರು, ಒಬ್ಬರ ಬದಲು ಕೆಲಸಕ್ಕಾಗಿ. ವಿದ್ಯಾ ಸಂತೋಷದಿಂದ ಒಪ್ಪಿಕೊಂಡಳು ಅದಕ್ಕೆ.

ನಾಲ್ಕು ಗಂಟೆಗೆ ರಿಹರ್ಸಲ್ ಪ್ರಾರಂಭವೇ ಆಯಿತು. ಉಳಿದ ಪಾತ್ರ ವರ್ಗದವರೂ ಬಂದಿದ್ದರು. ಪ್ರಥಮದಲ್ಲಿ ಸ್ಟುಡಿಯೋ ಪ್ರವೇಶ ಮಾಡುತ್ತಲೆ ಅಲ್ಲಿಯ 'ಎಅರ ಕಂಡಿಶನ್'ನಿಂದ ಮೈ-ಮನಸ್ಸಿಗೆ ಹಾಯೆನಿಸಿತು.

'ಮೊದಲು 'ಡೆಡ್‌ರಿಹರ್ಸಲ್' ತೆಗೆದುಕೊಳ್ಳೋಣ.' ಎಂದರು ಚಾಲಕರು. ವಿದ್ಯಾವತಿಗೆ ಒಮ್ಮೆಲೆ ಅದರರ್ಥವೆ ಆಗಲಿಲ್ಲ. ಆಶ್ಚರ್ಯದಿಂದ ಅವರ ಮುಖ ನೋಡಿದಾಗ 'ಮಾಯಿಕ್ ಇಲ್ಲದೆ'—ಎಂದು ತಿಳಿಸಿದರು. ನಾಟಕದಲ್ಲಿ ಆಗಾಗ ಪಾತ್ರ ವಹಿಸುತ್ತಿದ್ದ ಮಿಸ್ಟರ ಹಾಗೂ ಮಿಸೆಸ್ ರಾವ್ ಅವರ ಪರಿಚಯವೂ ಆಯಿತು ವಿದ್ಯಾವತಿಗೆ. ರಾವ್ ಕುಡುಕನ ಪಾತ್ರ ವಹಿಸಿದ್ದರು. ಅವರ ಹೆಂಡತಿ ವೇಶ್ಯೆಯ ಪಾತ್ರ ವಹಿಸಿದ್ದರು. ವಿದ್ಯಾ ಕುಡುಕನ ಹೆಂಡತಿಯಾಗಬೇಕಿತ್ತು.

ವೇಶ್ಯೆಯ ಮನೆಯ ದೃಶ್ಯದಿಂದಲೆ ನಾಟಕ ಪ್ರಾರಂಭವಾಗುತ್ತಿತ್ತು. ಅಲ್ಲಿ ಬರುವ ತರ-ತರಹದ ಜನರು ಅವಳಿಗೆ ಆಡುವ ತರತರಹದ ಮಾತು-ಗಳನ್ನು ಕೇಳಿ ವಿದ್ಯಾವತಿಗೆ ಸ್ವಲ್ಪ ಸೋಜಿಗವೆನಿಸುತ್ತಿತ್ತು. ಮಿಸೆಸ್ ರಾವ್ ಮಾತ್ರ ನೈಛಳಿ ಬಿಟ್ಟು ಅವರವರ ಮಾತಿಗೆ ಮುರುಕ ಮಾಡುತ್ತ ಪ್ರತಿ ಮಾತನಾಡುತ್ತಿದ್ದರು. ಮಿ. ರಾವ್ ಒಳ್ಳೇ ಗಂಭೀರವಾಗಿ ಕೇಳುತ್ತಿ-ದ್ದರು. ತಾನು ಕುಡುಕನ ಹೆಂಡತಿಯಾಗಿ ಮಾತನಾಡುವಾಗ ಮಿಸೆಸ್ ರಾವ್ ಅವರಿಗೆ ಏನಾದರೂ ಸಂಕೋಚವಾದೀತೇನೋ ಎಂದು ತಾನು ಬಗೆದದ್ದು ತಪ್ಪು ಎಂದು ಆಮೇಲೆ ತಿಳಿಯಿತು.

ವಿದ್ಯಾ ತಾನು ಓದುತ್ತಿರುವ ಸಂಭಾಷಣೆಯಲ್ಲಿ ಒಂದೆಡೆಗೆ ಕಂಸಿನಲ್ಲಿ 'Baby cries' ಎಂದಿತ್ತು.

'ಇದನ್ನು ಹೇಗೆ ಮಾಡುವುದು?' ಎಂದು ಕೇಳಿದಳು.

'ನೀವು ಕಾಳಜಿ ಮಾಡಬೇಡಿರಿ. ನಮ್ಮಲ್ಲಿ ಕೂಸು ಅಳುವುದು, ಸಿಂಹ ಗರ್ಜಿಸುವುದು, ನಾಯಿ ಕುಂಯ್‌ಗುಡುವುದು ಎಲ್ಲಾ ಬಗೆಯ ಧ್ವನಿ ಮುದ್ರಿಕೆಗಳಿವೆ' ಎಂದರು ಚಾಲಕರು.

'ಆದರೆ ಹಿಂದೊಮ್ಮೆ ರೆಕಾರ್ಡಿನ ಮೂರನೆಯ ರಿಂಗನ್ನು, ಒಳಗಿನಿಂದ ಹೊರಗೆ ಹಚ್ಚುವ ಬದಲು ಹೊರಗಿನಿಂದ ಒಳಗೆ ಹಚ್ಚಿ ಕೂಸು ಅಳುವಲ್ಲಿ ಸಿಂಹವನ್ನು ಗರ್ಜಿಸಹಚ್ಚಿದಿರಿ. ಹಾಗೆ ಮಾತ್ರ ಮಾಡಬೇಡಿರಿ.' ಎಂದು ಮಿ. ರಾವ್ ತಮಾಷೆ ಮಾಡಿದರು.

'ಹೌದು. ನಿಮ್ಮ ಮಿಸೆಸ್‌ಗೆ 'Maneyalli Holige' (ಮನೆಯಲ್ಲಿ ಹೊಲಿಗೆ) ಎಂದು ಕಾಂಟ್ರ್ಯಾಕ್ಟ ಕಳಿಸಿದಾಗ 'ಮನೆಯಲ್ಲಿ ಹೋಳಿಗೆ' ಎಂಬ

ವಿಷಯದ ತಯಾರಿ ಮಾಡಿದ್ದುದಕ್ಕಿಂತಲೂ ಏನು ವಿಶೇಷವಾಗಲಿಲ್ಲವಲ್ಲ?' ಎಂದು ಚಾಲಕರು ನಗೆಯಾಡಿದರು.

ರಿಹರ್ಸಲ್ ಮುಗಿಸಿಕೊಂಡು ಹೊರಗೆ ಬಂದಾಗ ಆರು ಹೊಡೆಯಲಿಕ್ಕೆ ಬಂದಿತ್ತು. ಮನೂ ಒಳಗೆ ಬಂದಿರಲಿಲ್ಲ. ಎಲ್ಲಿಲ್ಲೊ ತಿರುಗಾಡಿ ವೇಟಿಂಗ್ ರೂಮಿನಲ್ಲಿ ಬಂದು ಕುಳಿತಿದ್ದ.

ಮರುದಿನ ಮತ್ತೆ ನಾಲ್ಕಕ್ಕಗಂಟೆಗೆ ರಿಹರ್ಸಲ್. ವಿದ್ಯಾ ಒಬ್ಬಳೇ ಬಂದಳು. ಮಿಸ್ಟರ್ ಮತ್ತು ಮಿಸೆಸ್ ರಾವ್ ಆಗಲೆ ಹಾಜರಿದ್ದರು.

'ಹ್ಯಾಗಿದ್ದೀರಾ?' ಮಿಸೆಸ್ ರಾವ್ ಕೇಳಿದರು.

'ಓ. ಕೆ.' ವಿದ್ಯಾ ಮುಗುಳ್ನಗುತ್ತ ಉತ್ತರಿಸಿದಳು.

'ಒಬ್ಬರೆ ಬಂದಿರಾ?' ಮಿಸ್ಟರ ರಾವ್ ಕೇಳಿದರು.

'ಹೌದು.'

'ಮನೆಯವರು ಬರಲಿಲ್ಲವೆ?' ಕೇಳಿದರು ಮಿಸೆಸ್ ರಾವ್.

'ಅವರು ಊರಲ್ಲಿಲ್ಲ.'

'ನಿನ್ನೆ ಬಂದಿದ್ದರಲ್ಲವೆ?' ಒಮ್ಮೆಲೆ ಕೇಳಿದರು ರಾವ್.

ವಿದ್ಯಾ ನಕ್ಕಳು. ಮಿಸೆಸ್‌ರಾವ್ ಕೂಡ ನಕ್ಕು ತಮ್ಮ ಯಜಮಾನರನ್ನು ನೋಡಿದರು. ಇದನ್ನು ವಿದ್ಯಾ ಲಕ್ಷಿಸದಿರಲಿಲ್ಲ.

'ಅವರು ನನ್ನ ಫ್ರೆಂಡ್ ಮಿಸ್ಟರ ಮನೋಹರ' ಎಂದಳು ವಿದ್ಯಾ.

'ನಿಮ್ಮ ಫ್ರೆಂಡ್ ಒಳಗೆ ಏಕೆ ಬರಲಿಲ್ಲ?' ಮಿಸ್ಟರ ರಾವ್ ಸಹಜವಾಗಿ ಕೇಳಿದರೂ ವಿದ್ಯಾವತಿಗೆ ಅದು ಕೆಣಕಿ ಕೇಳಿದಂತೆನಿಸಿತು.

'ಯಾಕೆ ಬರಬೇಕು?' ಎಂದವಳೆ ಗಪ್ಪಾದಳು.

ಚಾಲಕರು ಒಂದು ಬಗಲೊಳಗೆ ನಾಲ್ಕಾರು ಧ್ವನಿಮುದ್ರಿಕೆಗಳನ್ನು ಹಿಡಿದುಕೊಂಡು ನಾಟಕದ ಹಸ್ತಪ್ರತಿಯ ನಾಲ್ಕೈದು ಪ್ರತಿಗಳನ್ನು ಇನ್ನೊಂದು ಬಗಲೊಳಗೆ ಇಟ್ಟುಕೊಂಡು ಗಡಬಡಿಸುತ್ತ ಬಂದರು.

'ಹುಂ. ಇನ್ನು 'ಮೈಕ್-ರಿಹರ್ಸಲ್' ಮಾಡೋಣ.' ಎಂದು ಅವರನ್ನು ಸ್ಟುಡಿಯೋದಲ್ಲಿ ಕರೆದೊಯ್ದರು. ಚಾಲಕರು ರೆಕಾರ್ಡ್ಸ್ ಇಟ್ಟು 'ಕಂಟ್ರೋಲ್‌ರೂಂ'ಗೆ ಹೋದರು. ಮಿಸೆಸ್ ರಾವ್ ಮತ್ತು ವಿದ್ಯಾ ಉಳಿದ ಸ್ಟುಡಿಯೋಗಳಲ್ಲೆಲ್ಲಾ ಬಾಗಿಲು-ಗಿಂಡಿಗಳಿಂದ ಇಣುಕಿ ನೋಡತೊಡಗಿದರು.

‘ ಕಂಟ್ರೋಲ್ ರೂಮಿ ’ನ ಮುಂದೆ ‘ No Admission’ ಎಂದು ನೀಲಿಯ ವರ್ಣದ ಅಕ್ಷರಗಳು ಎದ್ದು ಕಾಣುತ್ತಿದ್ದುವು.

‘ ಇಲ್ಲಿಂದಲೆ ಪ್ರಸಾರ ಆಗುತ್ತದೇನು ? ’

‘ ಟ್ರಾನ್ಸಮಿಟರ ಇರುವುದು ವರ್ಲಿಯಲ್ಲಿ. ಅಲ್ಲಿಂದ ಪ್ರತ್ಯಕ್ಷವಾಗಿ ಪ್ರಸಾರ ಆಗುವುದು. ಇಲ್ಲಿಂದ ಅದೆಲ್ಲಾ ವಿಸ್ತಾರ ಹೊಂದಿ ಅಲ್ಲಿಗೆ ಹೋಗುತ್ತದಷ್ಟೆ ಲಾಯಿನ್ಸ ಮೇಲಿಂದ. ’

ಮಿಸೆಸ್ ರಾವ್ ಅವರಿಗಿರುವ ಈ ತಾಂತ್ರಿಕ ಮಾಹಿತಿಯ ಬಗ್ಗೆ ವಿದ್ಯಾವತಿ ಕಣ್ಣಿನಿಂದಲೆ ಕೌತುಕವನ್ನು ವ್ಯಕ್ತಪಡಿಸಿದಳು. ಕಂಟ್ರೋಲ್ ರೂಮಿನ ಬಳಿಯ ದ್ವಾರಗಳನ್ನು ತೆರೆಯಲು ಒಳಗೆ ಮತ್ತೆ ಎರಡು ಸ್ಟುಡಿಯೊ ಇದ್ದುವು. ವಿಸ್ತಾರವಾದ ‘ ಸ್ಟುಡಿಯೊ ನಂ ೧ ’ ರಲ್ಲಿ ಒಂದು ಮರಾಠಿ ನಾಟಕದ ಸಿದ್ಧತೆ ನಡೆದಿತ್ತು.

‘ ಇದೇನು ಇವರು ಲೀಲಾ ಚಿಟ್ನಿಸ್ ಅಲ್ಲವೆ ? ’

‘ ಹೌದು. ಇನ್ನೊಬ್ಬರು ದುರ್ಗಾ ಖೋಟೆ. ಆಚೆಗಿದ್ದವರು ಮಿಸ್ಟರ ಡೇವಿಡ್. ಅದರಾಚೆಗಿದ್ದವರು ಶಾಂತಾ ಆಪ್ಟೆ. ’

‘ ಆಂ ? ’ ಅತ್ಯಂತ ಆತುರಬಟ್ಟು ನೋಡಿದಳು ವಿದ್ಯಾ.

‘ ಓಹೋ ! ಇವರೇನೊ ಶಾಂತಾ ಆಪ್ಟೆ !.... ಅಂತೂ ಸಿನೇಮಾ ಕ್ಷೇತ್ರದಲ್ಲಿ ಹೆಚ್ಚಿನ ಸಂಪಾದನೆ ಮಾಡಿದವರು ಇವರಲ್ಲವೆ ? ’

‘ ಏಕೆ, ಇತ್ತೀಚಿಗೆ ಸುರೈಯ್ಯಾ ಬಹಳ ಮುಂದೆ ಬರುತ್ತಿದ್ದಾಳೆ. ಆದರೆ ಬರಿ ‘ ಪ್ಲೇ-ಬ್ಯಾಕ್ ’ ಹಾಡಿ ಲಕ್ಷಾಧೀಶಳಾಗಿದ್ದಾಳಲ್ಲಾ, ಅಮೀರಬಾಯಿ ಕರ್ನಾಟಕೀ ! ’

‘ ಇಲ್ಲಿದ್ದಾಳೇನು ಮಿರಬಾಯಿ ? ’

‘ ಇಲ್ಲ. ಹಾಗೇ ಮಾತು ಹೇಳಿದೆ. ’

‘ ಶಾಂತಾ ಆಪ್ಟೆ ಮದುವೆಯಾಗಿಲ್ಲವಲ್ಲವೆ ? ’

‘ ಸ್ತ್ರೀಯರ ವಯಸ್ಸನ್ನೂ ಸಿನೇಮಾ ತಾರೆಗಳ ಮದುವೆಯ ಮಾತನ್ನೂ ಕೇಳಬಾರದಂತೆ. ’ ಇಬ್ಬರೂ ಅಲ್ಲಿಯೆ ನಕ್ಕರು.

ವಿದ್ಯಾ ಇನ್ನೂ ಕುತೂಹಲದಿಂದ ಅವರನ್ನೆ ನೋಡುತ್ತಿದ್ದಾಗ ಚಾಲಕರು ಬಂದು ರಿಹರ್ಸಲ್ಲಿಗೆ ಮತ್ತೊಂದು ಸ್ಟುಡಿಯೋಕ್ಕೆ ಕರೆದೊಯ್ದರು.

' ಸ್ವಾಮಿ, ನಿಮ್ಮ ಕೈಯಿಂದಲೆ ಕಟ್ಟಿದ ಕೊನೆಯ ಹಾಗೂ ಶ್ರೇಷ್ಠವಾದ ಸೌಭಾಗ್ಯಾಲಂಕಾರ, ನನ್ನ ಮಂಗಲಸೂತ್ರ! ಬೇಡ, ಬೇಡ, ನಿಮ್ಮನ್ನು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ ನನ್ನನ್ನು ಹೀಗೆ ನರಕಕ್ಕೆ ನೂಕಬೇಡಿರಿ.....' ಎಂಬ ಮಾತುಗಳನ್ನು ವಿದ್ಯಾ ಗದ್ಗದಿತವಾಗಿ ಅತ್ಯಂತ ಮಾರ್ಮಿಕವಾಗಿ ಹೇಳಬೇಕಾಗಿತ್ತು. ಪ್ರಕಟನೆಯ ರೂಮಿನಿಂದ ನಿರ್ಮಾತೃಗಳು ಹತ್ತುಸಲ ತಾವು ಅಂದು ತೋರಿಸಿ ಹಾಗೆ ಅನುಕರಿಸಲು ಹೇಳಿದರು. ವಿದ್ಯಾವತಿಗೆ ಅದು ಯಶಸ್ವಿಯಾಗಿ ಸಾಧಿಸಲಿಲ್ಲ.

' ಸರಿ. ಇರಲಿ ಗದ್ಗದ ನಿಟ್ಟುಸಿರುಗಳನ್ನು ನಿಮ್ಮ ಬಳಿಗೇ ನಿಂತು ಇನ್ನೊಬ್ಬರು ಮೈಕಿನ ಮೇಲೆ ಮಾಡಲು ಬಂದೀತು.' ಎಂದರು. ವಿದ್ಯಾವತಿಗೆ ಈ ಮಾತು ಕೇಳಿ ವಿಸ್ಮಯದ ನಗೆ ಬಂತು.

' ಹಿನ್ನೆಲೆಯ ಸಂಗೀತದಿಂದಲೂ ಆ ವಾತಾವರಣ ಕಲ್ಪಿಸುವುದಕ್ಕೆ ಬರುತ್ತದೆ, ಮುಂದೆ ಸಾಗಲಿ.' ಎಂದು ಹಸ್ತಪ್ರತಿಯಲ್ಲಿಯ ನಿರ್ದೇಶದ ಪ್ರಕಾರ ಕೂಸು ಅಳುವ ಮುದ್ರಿಕೆಯನ್ನು ಹಚ್ಚಿದರು. ಹತ್ತುದಿನದ ಬತ್ತಿ ಉಸಿರು ಹಿಡಿದು ಅಳುತ್ತಿರುವುದನ್ನು ಕೇಳಿ ವಿದ್ಯಾವತಿಯು ಗಾಬರಿಯಿಂದ ಮಗುವಿನ ದನಿ ಎಲ್ಲಿಂದ ಬರುತ್ತಿದೆ ಎಂದು ಮಾಳಿಗೆ ಗೋಡೆಗಳ ಕಡೆಗೆ ನೋಡಹತ್ತಿದಳು.

' ಈ ರೇಡಿಯೋದಲ್ಲಿಯ ರಸಸೃಷ್ಟಿಯೆಂದರೆ ಯಾಂತ್ರಿಕ ತಂತ್ರ. ಕೇಳುಗರಿಗಷ್ಟೆ ಇದರ ಭಾಸ ಉಂಟಾಗುತ್ತದೆ.' ಎಂದರು ಮಿಸೆಸ್ ರಾವ್, ವಿದ್ಯಾವತಿಯ ಗಾಬರಿಯನ್ನು ಅಚ್ಚರಿಯನ್ನು ನೋಡಿ. ಮಿ. ರಾವ್ ದನಿಗೂಡಿದರು.

' ಮತ್ತೆ ಈ ಫಿಲ್ಮಿನಲ್ಲೇನು? ಒಬ್ಬರ ಕಂಠ ಒಬ್ಬರ ಅಭಿನಯ.'

' ಅಂತೆಯೇ ನಾಟಕದಲ್ಲಿರುವ ಜೀವಂತತನ ಫಿಲ್ಮ-ರೇಡಿಯೋಗಳಲ್ಲಿ ಬರಲಾರದೆಂದು ನನ್ನ ಮತ.'

' ಹಾ! ತಡೆಯಿರಿ. ಮಿಸೆಸ್ ರಾವ್ ನಿಮ್ಮ ಮಾತು ಹೇಳಿರಿ.... ಇಲ್ಲಿಲ್ಲ, ಮೊದಲು ಶ್ರೀಧರರಾವ್ ತಮ್ಮ ಪ್ರೇಮಯಾಚನೆ ಮಾಡಲಿ.' ಚಾಲಕರೆಂದರು.

ಶ್ರೀಧರನ ಪಾತ್ರದಿಂದ ಪ್ರೇಮಯಾಚನೆಯಾಯಿತು ವೇಶ್ಯೆ ಅದನ್ನು ಮನ್ನಿಸಿ, ' ಪ್ರಿಯಾ ಭಕ್ತವತ್ಸಲಾ, ನನ್ನ ಕರಪಲ್ಲವಿಯಿಂದ ನಿನ್ನ

ಕರಕಮಲದಲ್ಲಿ ನನ್ನ ಬಾಯ್ದಂಬುಲವನ್ನು ನೀಡುತ್ತೇನೆ. ಇದೋ ದೇವತಾ-ಪ್ರಸಾದ....'ಎನ್ನುತ್ತಾಳೆ. ಮಿಸೆಸ್ ರಾವ್ ಹಾವಭಾವಗಳಿಂದ ಈ ಮಾತ ನಾಡುತ್ತಿದ್ದಾಗ ಮಿಸ್ಟರ ರಾವ್ ಅಭಿನಯವನ್ನು ನೋಡಿ, ' ಚೆನ್ನಾಗಿದೆ! ' ಎಂದು ಉದ್ಗಾರವೆತ್ತಿದರು.

ಅಂದು ರಾತ್ರಿಯೆಲ್ಲಾ ಮನೆಯಲ್ಲಿ ವಿದ್ಯಾವತಿಗೆ ಮಿಸೆಸ್ ರಾವ್ ಅವರ ಸ್ವಚ್ಛಂದ ಅಭಿನಯದ ಗುಂಗೇ ಗುಂಗು. ತನ್ನಷ್ಟಕ್ಕೆ ತಾನೇ ತನ್ನ ಪಾತ್ರ-ವನ್ನು ಓದಿಕೊಳ್ಳಹತ್ತಿದಳು. ಹೊರಗೆ ಬೆಲ್ ಬಾರಿಸುತ್ತಿದ್ದರೂ ಲಕ್ಷ್ಯವಿರ ಲಿಲ್ಲ. ಹೊರಗೆ ಬಂದಿದ್ದವರು ಮನೂ. ಆಮೇಲೆ ಮನೂನ ಮುಂದೆ ನಡೆಯಿತು ಅಭಿನಯ. ಮನೂ ತಲೆದೂಗಲಿಲ್ಲ. ವಿದ್ಯಾವತಿಗೆ ನಿರಾಶೆ ಆಯಿತು.

' ಮನೂ, ಮುಖ್ಯವಾಗಿ ಈ ಹಳೆಯ ಸಂಪ್ರದಾಯದ ಪಾತ್ರ ನನಗೆ ಒಗ್ಗುವುದಿಲ್ಲ. ಆಹಾ! ಮೂಢ ಪತಿವ್ರತಾಶಿರೋಮಣಿಯಂತೆ ಅಭಿನಯಿಸ ಬೇಕಂತೆ! ನನಗಿದರ ಅರ್ಥವೇ ಆಗುವುದಿಲ್ಲ. ಇದು ನನ್ನ ಮನಸ್ಸಿಗೇ ವಿರುದ್ಧವಾದದ್ದು....ಮನೂ ನಾನೇ ಮಿಸೆಸ್ ರಾವ್ ಅವರ ಪಾತ್ರ ಮಾಡಿ-ದರೆ ಹೇಗೆ? ' ವಿದ್ಯಾವತಿಗೂ ಈ ಪ್ರಶ್ನೆ ಕೇಳಲು ಅಷ್ಟು ಪ್ರಶಸ್ತವೆನಿಸಲಿಲ್ಲ.

' ಯಾವ ಪಾತ್ರ? ' ಮನು ಗೊತ್ತಿದ್ದೂ ಕೇಳಿದ.

' ವೇಶ್ಯೆಯ ಪಾತ್ರ. '

' ಇದು ಮಾತ್ರ ನಿನ್ನ ಮನಸ್ಸಿಗೆ ಒಪ್ಪಿದ ಪಾತ್ರವೇ? '

ಮನೂನ ಕುಚೇಷ್ಟೆ ವಿದ್ಯಾವತಿಗೆ ಚಾಟಿಯ ಏಟು ಕೊಟ್ಟಂತಾ-ಯಿತು. ಬಹಳ ಗಂಭೀರವಾಗಿ ಹೇಳಿದಳು: ' ಮನೂ, ನೀನು ಬಹಳ ಅಡ್ಡ ಹಾದಿ ಹಿಡಿದು ಮಾತಾಡುತ್ತಿದ್ದಿ, ನಾನು ನೋಡುತ್ತ ಬಂದಿದ್ದೇನೆ. '

ಮನೂ ನಗಲಿಕ್ಕೆ ಯತ್ನಿಸಿದ.

' ಸುಮ್ಮನೆ ಹಲ್ಲು ತೆರೆಯಬೇಡ. '

' ವಿದ್ಯಾ, ನೀನೂ ಬಹಳ ದೀರ್ಘಕ್ಕೆ ಹೋಗುತ್ತಿದ್ದೀ. '

' ಆದಕ್ಕೆಂದೇ ಪುರುಷರನ್ನು ಕಂಡರೇನೆ ನನಗೆ ಸೇರಿಕೆಯಾಗುವುದಿಲ್ಲ. '

' ವಿದ್ಯಾ ನಾನು ಹೋಗಿಬಿಡಲೆ ನಿನಗೆ ತೊಂದರೆಯಾಗುತ್ತಿದ್ದರೆ? '

ಮನೂಗೆ ಬಹಳ ಅವಮಾನವಾದಂತಾಯಿತು.

‘ ನಾನೇನು ನಿನಗೆ ಆಮಂತ್ರಣ ಕೊಟ್ಟು ಸ್ವಾಗತ ಮಾಡಿ ಕರೆಯಿಸಿಲ್ಲ. ’

‘ ವಿದ್ಯಾ, ಮಾತಿಗೆ ಮಾತು ಹತ್ತಿತೆಂದರೆ ನೀನು ಹುಚ್ಚಿದ್ದ ಒದರಾಡ ಹತ್ತುತ್ತೀ. ’

‘ ಸಾಕು, ಹುಚ್ಚನಂತೆ ಬಡಬಡಿಸಬೇಡ. ’

‘ ವಿದ್ಯಾ, ‘ಗುಡ್‌ಬಾಯ್’ ಧಡಲ್ ಎಂದು ಬಾಗಿಲು ಹಾಕಿಕೊಂಡು ಕೈಯೊಳಗೆ ಬ್ಯಾಗ್ ತೆಗೆದುಕೊಂಡು ಧಡಧಡನೆ ಪಾವಟಿಗೆಗಳನ್ನು ಇಳಿದು ಕೆಳಗೆ ಹೋದ ಮನೂ.

ವಿದ್ಯಾವತಿಗೂ ಜೀವಕ್ಕೆ ಬಹಳ ತ್ರಾಸವೆನಿಸಿತು. ಆದರೂ ಎದ್ದು ಹೋಗಿ ಮನೋಹರನನ್ನು ಕರೆಯಬೇಕೆಂದು ಅವಳಿಗನಿಸಲಿಲ್ಲ. ಅದು ತನ್ನ ಗೌರವಕ್ಕೆ ಕಡಿಮೆಯದೆಂದು ಬಗೆದಳು. ಕ್ಷಣಹೊತ್ತು ಯಾವುದೂ ತೋಚದೆ ಹಸ್ತಪ್ರತಿ ಕಾಟಿನ ಮೇಲೆ ಒಗೆದು ಸ್ವಸ್ಥವಾಗಿ ಕೈಯೊಳಗೆ ಹಿಡಿದ ಕನ್ನಡಿಯೊಳಗೆ ತನ್ನ ಮುಖ ನೋಡಿಕೊಳ್ಳುತ್ತ ಮಗ್ಗುಲಾಗಿ ಬಿದ್ದುಕೊಂಡಳು.

ಅದೇ ಹಿಂದಿನ ದಿನ ಬಹು ಮೋಜಾಗಿ ಮನೂನೊಂದಿಗೆ ವಿಹಾರಮಾಡಿ ರಿಕ್ಸೋನಾ ಲಕ್ಸ ಕಂಪನಿಗಳಿಗೆ ಹೋಗಿ ಫೋಟೊ ಕೊಟ್ಟು ಬಂದು ‘ಕೊಡಕ್ ಕಂಪನಿಯಲ್ಲಿ ಕೆಮರಾ ನೋಡಿಕೊಂಡು ಬಂದು ಊಟ-ಉಪಹಾರಗಳಲ್ಲಿ ಸರಸವಾಗಿ ಕಾಲ ಕಳೆದು ಈಗ ಯಾವುದೊ ಕ್ಷುಲ್ಲಕ ಮಾತಿಗಾಗಿ ಅವನನ್ನು ಓಡಿಸಿಬಿಟ್ಟುದು ಒಳಿತೇ ? ಎಂದು ಮನಸ್ಸು ಒಮ್ಮೆಲೇ ಅವಳನ್ನು ಪ್ರಶ್ನೆ ಮಾಡಿ ಕೇಳಿದರೂ ತನ್ನ ಗೌರವ, ಅಹಂಕಾರಗಳನ್ನು ಕೆಣಕಿದ ಅವನಿಗೆ ಅದು ಯೋಗ್ಯ ಶಿಕ್ಷೆಯೆ ಎಂದು ನೆನೆದುಕೊಂಡು ಸಮಾಧಾನ ತಂದುಕೊಂಡರೂ ಮನಸ್ಸು ಇನ್ನೂ ಸ್ತಿಮಿತಕ್ಕೆ ಬಂದಿರಲಿಲ್ಲ. ಮರುದಿನದ ರೇಡಿಯೊ ಕಾರ್ಯಕ್ರಮದಲ್ಲಿ ಮನಸ್ಸು ಹಾಕುವಷ್ಟು ಮನಸ್ಸು ಪ್ರಸನ್ನತೆ ಪಡೆದಿರಲಿಲ್ಲ. ಮನೋಹರನನ್ನು ಹಾಗೆ ದುಡುಕಿನಿಂದ ದೂಡಿಕೊಟ್ಟದ್ದು ತಪ್ಪಾಯಿತೇನೊ ಎಂದು ಮತ್ತೆ ಮನಸ್ಸು ಎಣಿಕೆಹಾಕತೊಡಗಿತ್ತು. ಮನೋಹರನಲ್ಲಿ ಹಠಾತ್ತಾಗಿ ಬೇಸರ ಬರಲಿಕ್ಕೆ ಕಾರಣವೇನು ? ಅವನು ಆಗಾಗ ಎತ್ತುತ್ತಿದ್ದ ಆಕ್ಷೇಪಾರ್ಹ ಚೇಷ್ಟೆಗಳಷ್ಟೆ ಅಲ್ಲ, ಮಿಸ್ಟರ ಮತ್ತು ಮಿಸೆಸ್ ರಾವ್ ಅವರು ಅವನನ್ನೇ ಮನೆಯವರೆಂದುಕೊಂಡು ಕೇಳಿದ ಲಕ್ಷ್ಯಪೂರ್ವಕ ಪ್ರಶ್ನೆಗಳು,

ಅದೂ ಅಲ್ಲದೆ ರೇಡಿಯೊ ವಾತಾವರಣದಿಂದುಂಟಾದ ಮೋಹ ಇವೆಲ್ಲಾ ಒಂದುಗೂಡಿ ಮನೂನ ವಿಷಯವಾಗಿ ದ್ವೇಷ, ತಿರಸ್ಕಾರಗಳನ್ನು ಹುಟ್ಟಿಸ ದಿದ್ದರೂ ಉದಾಸೀನತೆಯನ್ನಾದರೂ ಹುಟ್ಟಿಸಿದವು. ಕೈಯೊಳಗೆ ನಾಟಕದ ಹಸ್ತಪ್ರತಿ ತೆಗೆದುಕೊಂಡಿದ್ದರೂ ಮನೂನ ಬಗ್ಗೆ ತನ್ನ ಮನಸ್ಸನ್ನು ಇನ್ನೂ ರಮಿಸುತ್ತಿದ್ದಳು. ತನ್ನ ವರ್ತನೆಯೇ ಸರಿಯೆಂದು ಖಾತ್ರಿಮಾಡಿಕೊಳ್ಳ ಬೇಕಾಗಿತ್ತು ಅವಳಿಗೆ. ಸುಮ್ಮನೆ ರಾವ್ ದಂಪತಿಗಳು ಇಂತಹ ಸುಧಾರಿಸಿದವರು ಕೂಡ ಏನೋ ಕೇಳಿಬಿಟ್ಟರಲ್ಲ ಎಂದು ಆದರಿಂದುಂಟಾದ ಅಸಮಾಧಾನವು ಅವಳ ವರ್ತನೆ ಸರಿಯೆಂಬ ಸಮರ್ಥನೆಗೆ ಸಹಾಯವಾಯಿತು. ತಾನು ವೇಶ್ಯೆಯ ಪಾತ್ರವಹಿಸಬೇಕೆಂಬ ಅಪೇಕ್ಷೆಗೆ ಮನೂನಿಂದ ಅನುಕೂಲ ಅಭಿ ಪ್ರಾಯ ಬರಲಿಕ್ಕಿಲ್ಲವೆನಿಸಿತು. ಅದು ಹೋಗಲಿ ಮನೂನಿಂದ ಇನ್ನೇನಾಗ ಬೇಕಾಗಿದೆ ? ರೇಡಿಯೊ ಪ್ರವೇಶವಾಯಿತು. ಚಲನಚಿತ್ರದ ತೆರೆಯ ಹಿಂದಿನ ಅನುಭವ ಬಂತು—ಎಂಬ ಸಮಾಧಾನ ಹೆಚ್ಚಿನದೆನಿಸಿತು. ಮನೋಹರ ನೊಂದಿನ ಸ್ನೇಹದ ಗುರಿ ಏನಿತ್ತೆಂಬ ಬಗ್ಗೆ ವಿಶೇಷ ತಲೆ ಕೆಡಿಸಿಕೊಳ್ಳಲು ಹೋಗದೆ ಸದ್ಯಕ್ಕೆ ಈ ಪ್ರಕರಣಕ್ಕೆ ಪೂರ್ಣವಿರಾಮ ಕೊಡತಕ್ಕದ್ದೆಂದು ನಿಶ್ಚಯಿಸಿ ಆ ಸಂಗತಿಯ ಮೇಲೆ ವಿಸ್ಮರಣದ ಉಕ್ಕಿನ ತೆರೆ ಹಾಕಿಬಿಟ್ಟಳು.

ಮರುದಿನ ಎದ್ದೊಡನೆ ಮತ್ತೆ ಅದೇ ವಿಚಾರ ! ತಾನು ವೇಶ್ಯೆಯ ಪಾತ್ರ ತೆಗೆದುಕೊಂಡರೆ ಹೇಗೆ ಎಂದು. ರಾವ್ ದಂಪತಿಗಳನ್ನು ಕಂಡು ಬರೋಣವೆ ಎನಿಸಿತು. ವಿಳಾಸ ಗೊತ್ತಿರಲಿಲ್ಲ.

ಮಧ್ಯಾಹ್ನ 'ಲಂಚ್' ವೇಳೆಯಲ್ಲಿ ಕಾಫಿ ಹೌಸಿಗೆ ಹೋದಾಗ ಸುದೈವ-ದಿಂದ ಮಿಸ್ಟರ ರಾವ್ ಅಲ್ಲೇ ಬಂದಿರಬೇಕೆ ? ಅವರನ್ನು ನೋಡಿದವಳೆ 'ಹಲ್ಲೋ ! ಗುಡ್‌ಮಾರ್ನಿಂಗ್ ಮಿಸ್ಟರ ರಾವ್ !' ಎಂದು ಅವರ ಟೇಬ-ಲ್ಲಿಗೇ ಹೋದಳು. ರಾವ್ ಅವಳನ್ನು ಬಹಳ ಉತ್ಸಾಹದಿಂದ ಸ್ವೀಕರಿಸಿ ಬಾ:ಯ್‌ಗೆ ಅರ್ಧ ಡಜನ್ ಸ್ಯಾಂಡ್‌ವಿಚೆಸ್' ಮತ್ತು ಕೋಲ್ಡ ಕಾಫಿ ಹೇಳಿದರು.

'ಕೋಲ್ಡ ಕಾಫಿ ಆದೀತಲ್ಲವೆ ?'

'Oh yes. After all your treatment is warm.' ಎಂದಳು. ವಿದ್ಯಾವತಿಯ ಚುರುಕು ಮಾತಿಗೆ 'Thats a good one' ಎಂದು ಮೆಚ್ಚಿಗೆ ಸೂಚಿಸಿದರು.

'ನಾನು ನಿಮ್ಮನ್ನೆ ಕಾಣಬೇಕೆಂದಿದ್ದೆ.'

'ಕಾಫಿ ಹೌಸು ನಮ್ಮನ್ನು ಕೂಡಿಸಿಯೇಬಿಟ್ಟಿತು.'

'ಹೌದು ಕಾಫಿ ಹೌಸ್ ಎಂದರೆ ಕಲ್ಪವೃಕ್ಷದ ಮನೆಯಾಗಿದೆ.' ರಾವ್ ಅವರ ಚುರುಕು ಮಾತಿಗೆ ವಿದ್ಯಾ ಅಷ್ಟೇ ಮಾರ್ಮಿಕ ಮೆಚ್ಚುಗೆಯನ್ನು ವ್ಯಕ್ತ ಮಾಡಿದಳು.

'ಸಾಯಂಕಾಲ ೬-೫೫ಕ್ಕಲ್ಲವೆ ಕಾರ್ಯಕ್ರಮ ?' ವಿದ್ಯಾ ಪ್ರಶ್ನೆಯೆತ್ತಿದಳು.

'ಹೌದು.'

'ನೀವು ಆಫೀಸಿನಿಂದ ಮನೆಗೆ ಹೋಗಿ ನಿಮ್ಮ ಮಿಸೆಸ್ ಅವರನ್ನು ಕರೆತರುವಿರಾ ?'

'ಇಲ್ಲ, ಅವಳು ನೇರವಾಗಿ ಆರೂಕಾಲಿಗೆ 'ಎ. ಐ. ಆರ್' ಗೇ ಬರುತ್ತಾಳೆ. ಹಾಗೇ ನಾವು ಗೊತ್ತುಮಾಡಿಕೊಂಡಿದ್ದೇವೆ.'

'ನನ್ನ ಪಾಲಿಗೆ ನಿಮ್ಮ ಹೆಂಡತಿಯಾಗುವುದು ಬಂದಿದೆ.'

'ಹ—ಹ—ಹ ! ರೇಡಿಯೊ-ನಾಟಕದಲ್ಲಿ ಮಾತ್ರ.'

'ಅದನ್ನು ತಪ್ಪಿಸಬೇಕೆಂದು ನನ್ನ ಆಸೆ.'

'ಅಂದರೆ ? ಅದನ್ನು ತಪ್ಪಿಸಿ ?'

'ಅದನ್ನು ತಪ್ಪಿಸಿ ನಾನು ವೇಶ್ಯೆಯ ಪಾತ್ರವಹಿಸಬೇಕೂ ಎಂದು.'

'ನೀವು ಬಹಳ ಮಡಿವಂತರಾಗಿ ಕಾಣುತ್ತೀರಿ !'

'ವೇಶ್ಯೆಯರು ಮಡಿವಂತರಾಗಿರುತ್ತಾರೇನು ?'

'ಹೌದು, ಇನ್ನೊಬ್ಬರ ಹೆಂಡತಿಯಾಗಿ ಕೆಲಸ ಮಾಡುವುದಕ್ಕಿಂತ ವೇಶ್ಯೆಯ ಪಾತ್ರ ವಹಿಸಬೇಕೆಂದು ನಿಮ್ಮ ವಿಚಾರ. ಆದರೆ ನಿಮ್ಮ ನಡತೆಯಿಂದ ನೀವೇನೊ ಪ್ರಗತಿಶೀಲ ವಿಚಾರದವರಿರಬೇಕು ಎಂದುಕೊಂಡಿದ್ದೆ ನಾನು. ಸವಿತಾನೂ ಹಾಗೇ ಎಂದುಕೊಂಡಿದ್ದಳು.'

'ಸವಿತಾ ಏನು ನಿಮ್ಮ ಹೆಂಡತಿಯ ಹೆಸರು ?'

'ಹೌದು ಏಕೆ ?'

'ನನಗೆ ಗೊತ್ತಿರಲಿಲ್ಲ.'

'ಸರಿ.'

‘ ಮಿಸ್ಟರ ರಾವ್, ತಾವು ಮಾಡಿದ ಸ್ತುತಿಗಾಗಿ ನಾನು ಕೃತಜ್ಞಳು. ನಾನು ಪ್ರಗತಿಶೀಲ ವಿಚಾರಪವಳೆಂದೆ ಈಗೂ ಹೇಳುತ್ತೇನೆ. ಕುಡುಕನ ಹೆಂಡತಿಯ ಪತಿವ್ರತಾಪಾತ್ರ ನನ್ನ ಮನಸ್ಸಿಗೆ ಒಗ್ಗುವುದಿಲ್ಲ. ಅಂತೆಯೆ ನಿಮ್ಮ ಮಿಸೆಸ್ ಅದನ್ನು ಸ್ವಿಕರಿಸಿದರೆ....’

‘ ಏಕೆ ಅವಳು ಬಹಳ ಮಡಿವಂತಳೆಂದು ನಿಮಗೆ ಕಂಡಳೆ ? ’

‘ ಅದಕ್ಕಲ್ಲ. ಅವರು ಯಾವ ಪಾತ್ರವನ್ನೂ ಯಶಸ್ವಿಯಾಗಿ ಮಾಡಿ ತೋರಿಸಬಲ್ಲರು. ’

‘ ಥ್ಯಾಂಕ್ಯೂ. ಆದರೆ ನಾನು ಅವಳ ಅಭಿಪ್ರಾಯ ಕೇಳದೆ ಹೇಗೆ ಹೇಳಲಿ ? ಸ್ತ್ರೀಯರಿಗೆ ಇಷ್ಟೂ ಸ್ವಾತಂತ್ರ್ಯ ಬೇಡವೆ ? ’

‘ ಇಷ್ಟು ಉದಾರ ವಿಚಾರಗಳುಳ್ಳವರೆಂದರೆ ನಾನು ನೋಡಿದವರಲ್ಲಿ ನೀವೊಬ್ಬರೆ ! ’

‘ ಗಂಡಸರೆಲ್ಲಾ ನಿರಂಕುಶಪ್ರಭುಗಳೆಂದು ನೀವು ಅಭಿಪ್ರಾಯ ಮಾಡಿ ಕೊಂಡಿದ್ದಾದರೂ ಏಕೆ ? ’

‘ ಅದೇ ಎಂದಲ್ಲ, ಆ ತರಹ. ಅದಲ್ಲದಿದ್ದರೂ ಸಾಮಾನ್ಯವಾಗಿ ಎಲ್ಲ ಗಂಡಸರೂ ಸ್ವಾರ್ಥಸಾಧಕರೆ. ’

‘ ನಿಮ್ಮ ವಾದಸರಣಿ ಸರಿಯಾಗಿಲ್ಲ. ’

‘ I appreciate your honest opinion. ’ (ನಿಮ್ಮ ಪ್ರಾಮಾಣಿಕ ಅಭಿಪ್ರಾಯಕ್ಕಾಗಿ ಮೆಚ್ಚಿದೆ.)

ಬಾಯ್ ‘ ಸ್ಯಾಂಡ ವಿಚಿಸ್ ’ ತಂದಿಟ್ಟ. ರಾವ್ ವಿದ್ಯಾವತಿಯ ಕೈಯಲ್ಲಿ ಒಂದು ಸ್ಯಾಂಡವಿಚ್ ಕೊಟ್ಟು ‘ತೆಗೆದುಕೊಳ್ಳಿ’ ಎಂದ. ‘ಥ್ಯಾಂಕ್ಯೂ’ ಎಂದು ಸ್ವೀಕರಿಸಿದಳು ವಿದ್ಯಾವತಿ.

‘ ಹಾಗಾದರೆ ವಿದ್ಯಾವತಿಯವರೆ, ಸಾಯಂಕಾಲ ಸವಿತಾ ಬಂದಮೇಲೆ ಕೇಳೋಣ. ಅವಳನ್ನು ವಿಚಾರಿಸದೆ ಮಾಡದೆ ನಾನು ಏನೂ ಹೇಳಲಾರೆ. ನೀವು ತಪ್ಪು ತಿಳಿಯಲಿಕ್ಕಿಲ್ಲೆಂದು ಆಶಿಸುತ್ತೇನೆ. ’

‘ ಎಲ್ಲಾ ವಿಷಯದಲ್ಲೂ ನೀವು ಅವರ ಅಭಿಪ್ರಾಯ ಕೇಳುತ್ತೀರೇನು ? ’

‘ ಹೌದು ಎಲ್ಲಾ ವಿಷಯದಲ್ಲಿ. ಎಷ್ಟೋ ಸಲ ಅವಳ ಸಲಹೆ ನನಗೆ ಮಾರ್ಗದರ್ಶಿಯಾಗಿರುತ್ತದೆ. ’

ರಾವ್ ಅವರ ಬಗ್ಗೆ ವಿದ್ಯಾವತಿಯ ಅಭಿಪ್ರಾಯ ಇನ್ನೂ ಅಷ್ಟು ತಿಳಿಯಾಯಿತು.

‘ ಹಾಗೇ ಆಗಲಿ ಮಿಸ್ಟರ ರಾವ್, ನಿಮ್ಮ ಮನೆಯವರನ್ನು ಕೇಳಿಯೆ ’ ವಿಚಾರಿಸೋಣ..ನಿರ್ಮಾತೃಗಳ ಅಭಿಪ್ರಾಯವನ್ನೂ ಕೇಳಬೇಕಾಗಬಹುದು.

‘ ಬರಾಬರಿ. ನೀವೆಂದದ್ದು ತೀರ ನಿಜವಾದದ್ದು. ’

‘ ಬ್ರಾಡ್‌ಕಾಸ್ಟಿಗೆ ’ ಜರೂರ ಅರ್ಧತಾಸು ಉಳಿದಿತ್ತು. ವಿದ್ಯಾವತಿಯ ಸೂಚನೆಗೆ ಮಿಸೆಸ್ ರಾವ್ ಅವರದೇನೂ ಅಡ್ಡಿಯಿರಲಿಲ್ಲ. ನಿರ್ಮಾತೃಗಳು ವಿದ್ಯಾವತಿಯಿಂದ ವೇಶ್ಯೆಯ ಪಾತ್ರ ಓದಿಸಿದರು. ರಾವ್ ದಂಪತಿಗಳೂ ಮೆಚ್ಚಿ ಹಿಗ್ಗಿದರು.

‘ ಚೆನ್ನಾಗಿ ಸಾಧಿಸಿತು. ’ ಚಾಲಕರೆಂದರು.

‘ That is because the role fits me ’ ( ಹೌದು; ಯಾಕಂದರೆ ಆ ಪಾತ್ರವೇ ನನಗೆ ಅಷ್ಟು ಒಪ್ಪುತ್ತದೆ.) ವಿದ್ಯಾ ಎಂದಳು.

‘ Not the cap ’—ಎಂದು ತುದಿಕಳಿಸಿ ಬಂದ ಮಾತನ್ನು ಒಳಗೇ ನುಂಗಿಕೊಂಡರು ರಾವ್, ಸಭ್ಯತೆಯನ್ನರಿತು.

‘ ನಿನ್ನೆ ಮಿಸೆಸ್ ರಾವ್ ಮಾಡಿತೋರಿಸಿದಂತೆ ಇಂದು ಅವರ ಅನು-ಕರಣ ಮಾಡಲು ನನಗೆ ಸುಲಭವಾಯಿತು. ’ ಎಂದಳು ವಿದ್ಯಾ. ಮಿಸೆಸ್ ರಾವ್ ಆಗಿಂದಾಗಲೆ ಕುಡುಕನ ಹೆಂಡತಿಯ ಪಾತ್ರ ಯಶಸ್ವಿಯಾಗಿ ಮಾಡಿ ತೋರಿಸಿದರು. ಎಲ್ಲರೂ ಮೆಚ್ಚಿದರು.

‘ Choice ಇಲ್ಲದೆ ನೀವು ಯಾವ ಪಾತ್ರವನ್ನೂ ಯಶಸ್ವಿಯಾಗಿ ಮಾಡಬಲ್ಲಿರಿ. ’ ವಿದ್ಯಾ ಮಿಸೆಸ್ ರಾವ್‌ರ ಗುಣಗಾನ ಮಾಡಿದಳು.

‘ ನಾಟಕಾಭಿನಯ ಎಂದರೆ ಎಲ್ಲಾ ಸುಳ್ಳು ಎಂದರ್ಥ. ಇನ್ನೊಬ್ಬರಂತೆ ನಟಿಸುವುದಕ್ಕೆ ನಮ್ಮ ಸ್ವಭಾವವೇನೂ ಅಡ್ಡಬರಲಾರದು. ’ ಸವಿತಾದೇವಿಯ ಉತ್ತರ ವಿದ್ಯಾವತಿಯನ್ನು ಕ್ಷಣಹೊತ್ತು ವಿಚಾರಿಸಹತ್ತಿತು.

ೞ ೞ ೞ ೞ

ಧಾರವಾಡ ಲೈನಬಾಜಾರ ಹನುಮಂತದೇವರ ಗುಡಿಯ ಸಮೀಪದಲ್ಲಿ ಒಂದು ಮಂಗಳೂರೀ ಹೋಟ್ಲು. ಸಂಜೆ ೬-೫೦ ಗಂಟೆಯಾಗಿತ್ತು. ನಾಲಗೆಗೆ ರುಚಿಯಿಲ್ಲದಿದ್ದರೂ ಮನಸ್ಸಿಗೆ ಚೈನವಿಲ್ಲದಿದ್ದರೂ ರಾಮನಾಥ ಸುಮ್ಮನೆ ಗಂಟಲಕ್ಕೊಂದಿಷ್ಟು ಬಿಸಿಯಾದರೂ ಹತ್ತಲೆಂದು ಪ್ಲೇಟಿನೊಳಗಿನ ಒಂದೇ ಭಜಿಯನ್ನು ತುಸು ತುಸುವೆ ಕಡಿದು ತಿನ್ನುತ್ತ ಕಪ್ಪಿನಿಂದ ' ಸುರಕ್' ಎಂದು ಒಂದೊಂದೇ ಗುಟುಕು ಚಹ ಕುಡಿಯುತ್ತಿದ್ದನು. ಮನಸ್ಸು ಮೋಡಗವಿದು ಮುಖದ ಮೇಲೆ ತನ್ನ ಕಪ್ಪು ನೆಳಲನ್ನು ಕೆಡವಿತ್ತು.

೬-೫೫ ಆಯಿತು.

' ಕನ್ನಡ ಕಾರ್ಯಕ್ರಮ ಹಚ್ಚಿರಿ ! ' ಯಾರೋ ಭಕ್ತರು ಕೂಗಿದರು. ಮಾಲಕ ಆಲಕ್ಷ್ಯದಿಂದ ಯಂತ್ರದ ಬಿರಡೆ ತಿರುಗಿಸಿದ.........

'........ಆಲ್ ಇಂಡಿಯಾ ರೇಡಿಯೊ ಮುಂಬಯಿ. ಕನ್ನಡ ಹಳ್ಳಿಯ ಬಂಧುಗಳ ಕಾರ್ಯಕ್ರಮ'....ಪ್ರಸಾರಕನ ಬೆನ್ನಿಗೇ ಒಂದು ಮೋಹಕವಾದ ವಾದ್ಯಮೇಳದ ಧ್ವನಿಮುದ್ರಿಕೆ ಮೆಲ್ಲನೆ ಪ್ರಾರಂಭವಾಗಿ ಜೋರಾಗಿ ಮತ್ತೆ ಕ್ರಮವಾಗಿ ಮಂದವಾಯಿತು.

'....ಈಗ ಒಂದು ಚಿಕ್ಕ ನಾಟಕ. ' ಸುರಾಸುರೀ '. ಇದನ್ನು ಬರೆದವರು ಪಿ. ಟಿ. ಮೂರ್ತಿಯವರು. ಇದರಲ್ಲಿ ಭಾಗವಹಿಸುವವರು: ವಿ. ಪಿ. ರಾವ್, ಸವಿತಾದೇವಿ ರಾವ್, ಶ್ರೀಧರರಾವ್ ಮತ್ತು ವಿದ್ಯಾವತಿ ಆರ್. ನಾಥ್ ಅವರು....'

ಕೊನೆಯ ಹೆಸರು ಕೇಳುತ್ತಲೆ ರಾಮನಾಥನ ಕಿವಿ ನೆಟ್ಟಗಾದುವು. ತನ್ನ ಆಶ್ಚರ್ಯವನ್ನು ನೆರೆದವರೆದುರು ತೋರಗೊಡದೆ ಸಹಜವಾಗಿ ಕೇಳುತ್ತಿರುವವರಂತೆ ನಟಿಸಿದ. ಶಬ್ದಶಬ್ದವನ್ನೂ ತಪ್ಪಿಸಿಕೊಳ್ಳದೆ ಕಥಾಸೂತ್ರವನ್ನು ಅನುಸರಿಸುತ್ತ ಪಾತ್ರಗಳು ಬದಲಾದಂತೆ ಧ್ವನಿಗಳ ಜಾಡ ಹಿಡಿದು ಕೇಳುತ್ತಿದ್ದನು........

'........ದಿವ್ಯಸುಂದರೀ, ನನ್ನ ಕಾಮಕ್ಷೇಮಧುರಂದರೀ ನಿನ್ನ ಅಧರ ಮಧುಪ್ರಸಾದವನ್ನು ನೀಡಿ ಈ ಭಕ್ತನನ್ನುದ್ಧರಿಸಲಾರೆಯಾ ? ...........'

' ಪ್ರಿಯಾ ಭಕ್ತವತ್ಸಲಾ ನನ್ನ ಕರಪಲ್ಲವಿಯಿಂದ ನಿನ್ನ ಕರಕಮಲದಲ್ಲಿ ನನ್ನ ಬಾಯ್ದಂಬುಲವನ್ನು ನೀಡುತ್ತೇನೆ........'

ಹೌದು, ಖಂಡಿತವಾಗಿಯೂ ವಿದ್ಯೆಯ ಧ್ವನಿ! ವಿದ್ಯಾ ವಹಿಸಿದ ಪಾತ್ರ ಯಾವುದು ? ಕಥಾಸೂತ್ರವನ್ನು ಕೂಲಂಕಷವಾಗಿ ಅನುಸರಿಸತೊಡಗಿದನು. ವಿದ್ಯಾವತಿ ವೇಶ್ಯೆಯಾಗಿದ್ದಾಳೆ! ಬೆಲೆವೆಣ್ಣಿನ ಪಾತ್ರ ವಹಿಸಿದ್ದಾಳೆ! ದುಃಖದಿಂದ ಹೊಗೆಸುತ್ತಿದ ಬಗೆಯಲ್ಲಿ ಕಿಡಿಗಳು ಹಾರಿದಂತೆನಿಸಿತು. ವಿದ್ಯಾವತಿಯ ಗತಿ ಈಪರಿಗಳಿಯಿತೆ? ನಾಟಕದ ಒಂದೊಂದು ಸಂಭಾಷಣೆಯೂ ಕಿವಿಯೊಳಗೆ ಬೀಳುತ್ತಲೆ ಕಾಸಿ ಕರಗಿಸಿದ ಸೀಸವನ್ನು ಕಿವಿಯೊಳಗೆ ಹೊಯ್ದಂತೆನಿಸಹತ್ತಿತು. ವಿದ್ಯೆಯ ಧ್ವನಿ ಕೇಳುತ್ತಿದ್ದಾಗಲಂತೂ ವಿಲಕ್ಷಣ ಸಂಕಟವೆದ್ದಂತೆ ತೋರುತ್ತಿತ್ತು. ವಿದ್ಯಾ ಯಾರೆಂಬುದು ಅಲ್ಲಿಯವರಿಗೇನು ಗೊತ್ತು ಎಂದುಕೊಂಡು ಸುಮ್ಮನಿರಲೆತ್ನಿಸಿದಾಗಲೂ, 'ಬಂದು ಮಾಡಿರಿ' ಎಂದು ತನಗೆ ತಿಳಿಯದೆಯೆ ಮಾಲಕರಿಗೆ ಒದರಿ ಹೇಳಿದ. ತಂಬಾಕ ತುಂಬಿದ ಬಾಯಿಂದ ಮಾತಾಡಲಾಗದೆ 'ತಡೆಯಿರಿ' ಎಂದು ಸುಮ್ಮನೆ ಕೈಮಾಡಿ ಹೇಳಿದ ಮಾಲಕ. ಎದ್ದು ಹೊರಟುಹೋಗಬೇಕೆಂದು ಬಾಗಿಲು ಸಮೀಪಕ್ಕೆ ಬರುತ್ತಲೆ 'ಏಕ ಇಸಂ ದೋನಾಣೆ.' ಎಂದು ಕೂಗಿದ ಮಾಣಿ. ಮತ್ತೆ ಕಾಲು ಹಿಂತೆಗೆದು ಮಾಲಕನ ಗಲ್ಲೆಯ ಬಳಿಗೆ ಬಂದು ಕಿಸೆಯೊಳಗಿನ ಎರಡು ರೂಪಾಯಿಯ ನೋಟೊಂದನ್ನು ಕೊಟ್ಟನು. ಮಾಲಕ ಚಿಲ್ಲರೆ ಎಣಿಸಿ ಕೊಡುವ ಹೊತ್ತಿಗೇ ನಾಟಕ ಮುಗಿಯಿತು.

'ಲಕ್ ಆತು ನೋಡು ನಾಟಕ!' ಎಲ್ಲಿಂದಲೊ ಒಂದು ಉದ್ಗಾರ ಬಂತು.

'ಸುಂದರೀ ಪಾರ್ಟು ಸಜ್ಜಾಗಿತ್ತು ನೋಡು!' ಇನ್ನೊಂದು ದನಿಕೇಳಿಸಿತು.

ಮತ್ತೊಬ್ಬನು ಸುಂದರಿಯನ್ನು ಕುರಿತು ವಿಟನು ಹಾಡಿದ 'ಮಾತಿನ ಗಿಣಿಯೆ ಪ್ರೀತಿಯ ಕಣಿಯೆ' ಎಂಬ ಹಾಡನ್ನು ಗೊಣಗುತ್ತಿದ್ದ.

ಹೆಚ್ಚಿಗೆ ನಿಲ್ಲಲಿಕ್ಕಾಗದೆ ರಾಮನಾಥ ಹೋಟಲಿನಿಂದ ಹೊರಬಿದ್ದು ಹೋದ. ಹಾದಿಯಲ್ಲಿ ಗುರುತಿನ ಮುಖಗಳು ಕಂಡರೆ ಮರೆಮಾಡಿಕೊಂಡು ಅಡ್ಡಹಾದಿ ಬಿದ್ದು ಮುಖ ತಪ್ಪಿಸುತ್ತ ನಡೆದ. ಸಾಧ್ಯವಾದಷ್ಟು ಬೇಗ ಊರಹೊರಗೆ ಬೀಳಬೇಕೆಂದು ಬೆಳಗಾವಿಯ ರಸ್ತೆಯಗುಂಟ ನಡೆದ. ಬೆನ್ನ ಹಿಂದಿನಿಂದ ವಿದ್ಯೆಯ ವೇಶ್ಯಾಭೂತವು ಗೆಜ್ಜೆ ಕುಣಿಸುತ್ತ ಗಾಳಿಗುಂಟ ಬೆನ್ನು ಹತ್ತಿದೆಯೇನೊ ಎಂಬಂತೆ ದುಡುದುಡು ಓಡುತ್ತಿದ್ದ. ಗೋಲ್ಫ ಗ್ರೌಂಡಿನಲ್ಲಿ ಏಕಾಂತ ಸ್ಥಳವೊಂದನ್ನು ನೋಡಿಕೊಂಡು ಕುಳಿತುಕೊಂಡ. .........

.....ವಿದ್ಯಾ ಇಷ್ಟು ಅಡ್ಡ ಹಾದಿಗೆ ಬಿದ್ದಳೆ? ಅವಳು ರೇಡಿಯೊಪ್ರವೇಶವನ್ನೆಂತು ಮಾಡಿದಳು ? ರೇಡಿಯೋದಲ್ಲಿ ಪಾತ್ರವಹಿಸಿದರೂ ಇಂತಹ ಮರ್ಯಾದೆಹೀನ ಪಾತ್ರವಹಿಸುವುದೆ ? ಮರ್ಯಾದಸ್ಥ ಗೃಹಸ್ಥನ ಗೃಹಿಣಿಯಾಗಿ ಬೀದಿಯ ಬಸವಿಯಂತೆ ನಡೆದುಕೊಳ್ಳುವುದೆ ?..........

....ರಾಮನಾಥನಿಗೆ ಉಡುಪಿಯಲ್ಲಿಯ ಮಕ್ಕಳ ಸಮ್ಮೇಲನದಲ್ಲಿ ಮುಖ್ಯ ಅತಿಥಿಯಾಗಲು ಆಮಂತ್ರಣ ಬಂದಿತ್ತು. ರಾಮನಾಥ ಜಾನಕಿಯನ್ನು ಕರೆದುಕೊಂಡು ಹೋದ. ಉಡುಪಿಯ ಯಾತ್ರೆಯಾಗುವುದೆಂದು ಜಾನಕಿಗೂ ಹಿಗ್ಗು. ಅದು ಪರ್ಯಾಯದ ವರುಷ ಬೇರೆ. ಅದೇ ಸುಮಾರಿಗೆ ರಾಮನಾಥನಿಗೆ ಆಮಂತ್ರಣ ಬಂದುದು ನೋಡಿ ತಮ್ಮ ಪುಣ್ಯದ ಬಲದಿಂದಲೆ ಯಾತ್ರೆಯಾಯಿತೆಂದು ಜಾನಕಿ ತಿಳಿದಳು. ಉಡುಪಿಯಲ್ಲಿ ಇಬ್ಬರಿಗೂ ರಾಜಸನ್ಮಾನ, ರಾಜಸ್ವಾಗತ. ಕಾರ್ಯದರ್ಶಿ ಇವರನ್ನು ಇಳಿಸಿದ್ದ ಮನೆಯವರ ಆತಿಥ್ಯವಂತೂ ಹೇಳತೀರದು. ವಾಸಂತಿಬಾಯಿ ಇನ್ನೂ ಕುಮಾರಿ. ಅತ್ಯಂತ ಉತ್ಸಾಹದಿಂದ ಅತಿಥಿದಂಪತಿಗಳಿಗೆ ಕೂತರೆ ಮಣೆ ನಿಂತರೆ ಮಣೆ ಮಾಡುತ್ತಿದ್ದಳು. ಆದರೇಕೊ ಜಾನಕಿ ಅವಳ ಅತಿಯಾದ ಸಲುಗೆ. ಅವಳ ನಡೆನುಡಿ ನೋಡಿ ಒಂದಿನಿಸು ಬೇಸರಪಟ್ಟುಕೊಳ್ಳಹತ್ತಿದಳು. ಸೂಕ್ಷ್ಮವಾಗಿ ನೋಡುತ್ತ ಬಂದ ರಾಮನಾಥನಿಗೆ, ಜಾನಕಿಯು ವಾಸಂತಿಬಾಯಿಗೆ ಒಂದಿನಸು ಉದಾಸೀನತೆ ತೋರುವುದು ಗೊತ್ತಾಗಿ ಅಸಮಾಧಾನವಾಯಿತು. ಆದರೆ ಮರುದಿನವಂತೂ ಜಾನಕಿ ಉಡುಪಿ ಕೃಷ್ಣನ ಮಂದಿರವನ್ನೆ ಹಿಡಿದು ಬಿಟ್ಟು ವಾಸಂತಿಯ ಮನೆಗೆ ಏನು ಮಾಡಿದರೂ ಬರಲಿಲ್ಲ. ರಾಮನಾಥನು ಅವಳ ಅಶಿಕ್ಷಿತತನಕ್ಕೆ ಕಿಡಿಕಿಡಿಯಾಗಿ ಜಬರಿಸಿದ. ಜಾನಕಿಯೂ ಅಷ್ಟೆ ಕಿಡಿಕಿಡಿಯಾಗಿ ' ನನಗೆ ನಿಮ್ಮ ಆತಿಥ್ಯ ಬೇಡ. ನನಗೆ ದೇವರ ಗುಡಿಯ ಆಶ್ರಯವೇ ಸಾಕು. ಮನೆತನಸ್ಥರು ಉಳಿದುಕೊಳ್ಳುವ ಮನೆ ಅಲ್ಲ ಅದು. ಸುಮ್ಮನೆ ನನ್ನ ಮಾತು ಕೇಳಿರಿ. ' ಎಂದಾಗ ರಾಮನಾಥನಿಗೆ ದಿಗಿಲಾಗಿ ಹೋಯಿತು. ಕೊನೆಗೆ ಜಾನಕಿಯ ಕೃತಿಯನ್ನೆ ರಾಮನಾಥ ಗೌರವಿಸ ಬೇಕಾಯಿತು.....................

* * * *

ವಿದ್ಯಾವತಿಯ ಹಂಬಲಗಳ ಬಗ್ಗೆ, ಅವಳ ಸ್ವಾತಂತ್ರ್ಯದೃಷ್ಟಿಯ ಬಗ್ಗೆ ರಾಮನಾಥನಿಗೆ ಹೇಸಿಗೆಯಿಟ್ಟುಹೋಯಿತು. ಹೀಗೇ ಅವಳ ಸಂಬಂಧ ವನ್ನು ತಪ್ಪಿಸಿಕೊಂಡುಬಿಡಲಿ ಎನಿಸಿತು.

ಕಂಡವರ ಮಾರಿ ತಪ್ಪಿಸಿ ಬರುತ್ತಿರುವಾಗ ಕೆರೆಯ ಕೆಳಗಿನ ಓಣಿಯ ಯದುಪತಿರಾಯರು ಎದುರಿಗೆ ತರುಬಿಯೆಬಿಟ್ಟರು.

'ಓಹೋಹೊ, ಏನಪಾ ರಾಮೂ ಯಾವಾಗ ಬಂದಿ ?'

'ಎರಡುಮೂರು ದಿವಸಾಯಿತು' ರಾಮನಾಥನೆಂದ.

'ಮತ್ತೇನೆಲ್ಲಾ ಆರಾಮ ?......ಏನಪಾ ಹೀಂಗ ಎಷ್ಟು ದಿವಸ ಮದಿವಿ ಬಿಡತಿ ? ಮಾಡಿಕೊಂಡುಬಿಡು. ಇನ್ನೂ ಚಿಕ್ಕಾವ ಇದ್ದೀದಿ. ಎರಡನೆ ಸಂಬಂಧ ಆದರಾರಿ ಏನು, ಕನ್ಯಾಕ್ಕೇನು ಕಡಿವಿ? ಮತ್ತು ಮನಿಯೊಳಗ ನಿನ್ನ ಹೇಣ್ತಿ ತಂಗೀನ ಇರಬೇಕಲ್ಲ? ಯಾಕ ಮಾಡಿಕೊಬಾರದಪಾ ? ಅಂತಃ-ಕರಣದೊಳಗ ಆಗಿಹೋಗತದ.'

ರಾಮನಾಥ ಸುಮ್ಮನೆ ಎಲ್ಲದಕೂ 'ಹೂಂ'ಗುಟ್ಟಿ ಮುಂದೆ ಸಾಗಿದ. ಎರಡನೆಯ ಸಂಬಂಧ ! ಇನ್ನು ಎಷ್ಟು ಸಂಬಂಧಗಳಾದರೇನು ? ಜಾನಕಿಗೆ ಒಮ್ಮೆ ದ್ರೋಹ ಬಗೆದರೇನು ಸಾವಿರ ಸಲ ದ್ರೋಹ ಬಗೆದರೇನು ?....

ಮನೆಗೆ ಬಂದಾಗ ರಾತ್ರಿ ಎಂಟೂವರೆ ಮೇಲಾಗಿತ್ತು. ಬಂದವನೆ ಮೊದಲು ಕೋಣೆಯೊಳಗೆ ಹೊಕ್ಕ. ಮೋಹನನ ಬಳಿ ಮೊಳಕೈಮೇಲೆ ತಲೆ ಯಿಟ್ಟುಕೊಂಡು ಅಡ್ಡಾಗಿದ್ದ ಶಾರದಾ—ಜಾನಕಿಯ ತಂಗಿ—ಚಟ್ಟನೆ ಎದ್ದು ಒಳಗೆ ಹೋದಳು. ಕಣ್ಣು ತೆಗೆದು ಸುಮ್ಮನೆ ಮಲಗಿದ ಮೋಹನನನ್ನು ಮೈದಡವಿ ಅಂತಃಕರಣದಿಂದ ಉಕ್ಕಿಬರುವ ದೃಷ್ಟಿಯನ್ನು ಬೀರಿ— 'ಮೋನೀ ಆರಾಮ ಇದ್ದೀಯೆನಪಾ ?' ಎಂದು ಕೇಳಿದ. ಮೋನಿ ತಂದೆಯ ಮುಖ ನೋಡಿ ಸುಮ್ಮನೆ ಮಂದಹಾಸ್ಯ ಬೀರಿದ. ತಂದೆಯ ಹೊಸ ಗುರು ತಾಗಿ ಐದಾರು ದಿನಗಳಾಗಿದ್ದುವಷ್ಟೆ. ಜ್ವರ ಆರಿ ಈಗೇನೊ ಸ್ವಲ್ಪ ಕಣ್ಣು ತೆಗೆದು ಬಂದವರನ್ನು ನೋಡಿ ತಾನೂ ನಗುತ್ತಿದ್ದ ಮೋಹನ.

ರಾತ್ರಿ ಊಟಕ್ಕೆ ಕುಳಿತಾಗ ರಾಮನಾಥನ ಅತ್ತೆ ರುಕ್ಮಿಣಿಬಾಯಿ, 'ಮೋನ್ಯಾನ ಔಷಧ ತಂದಿದೇನು ಸಂಜೀಮು?' ಎಂದು ಕೇಳಿದರು. ರಾಮ ನಾಥ ಅತ್ಯಂತ ಚಡಪಡಿಸುತ್ತ—'ಅಯ್ಯೋ ಮರೆತೇಬಿಟ್ಟೆ! ಈಗ ನೋಡಿ

ಬರುತೇನೆ. ' ಎಂದಾಗ ' ಇರಲಿ. ನಾಳಿಗೇ ತಂದರಾತು. ಹ್ಯಾಂಗಾದರೂ ಆರಾಮು ಅದ ಈಗ. ' ಎಂದರು ರುಕ್ಮಿಣಿಬಾಯಿ. ಮತ್ತೆ ಮೂಕತನದಿಂದ ಊಟ ಸಾಗಿತು ರಾಮುನಾಥನದು.

ರುಕ್ಮಿಣಿಬಾಯಿ ಎಲೆಯ ಮೇಲೆ ಚಪಾತಿ ಹಾಕಿದರು. ತುಪ್ಪಕ್ಕೆ ಮತ್ತೆ ಮುಸುರೆಗೈಯನ್ನು ತೊಳೆದುಕೊಳ್ಳದೆ ಶಾರಕ್ಕನನ್ನು ಒದರಿದರು. ಹೊರಗಿನ ಕೋಣೆಯಲ್ಲಿ ಶಾರಕ್ಕನಿಗೆ ಜೊಂಪು ಹತ್ತಿತ್ತು. ಒಮ್ಮೆಲೆ ಎದ್ದು ಬರಲಿಲ್ಲ. ಗೋಪಾಳರಾಯರು—ಮನೆಯ ಯಜಮಾನರು, ಜಾನಕಿ-ಶಾರಕ್ಕರ ತಂದೆ— 'ಶಾರೀ, ಯೇ ಶಾರವ್ವಾ, ತುಪ್ಪಾ ಹಾಕಿ ಹೋಗು ಬಾ' ಎಂದು ಒದರಿದರು.

' ಆಂ! ಬಂದೇ ' ಎಂದು ಶಾರಕ್ಕ ಕಣ್ಣೊರಿಸುತ್ತ ಬರುತ್ತಿರುವಾಗ ರುಕ್ಮಿಣಿಬಾಯರು 'ಯಾಕ ತುಪ್ಪಾ ಬಡಿಸಲಿಕ್ಕೆ ನಾಚತೀಯೇನು?' ಎಂದು ಚೇಷ್ಟೆ ಮಾಡುತ್ತ ತಮ್ಮೊಳಗೇ ನಕ್ಕರು.

' ಯಾಕ ನಾಚಲಿಕ್ಕೆ ಅರೇದವರು ಯಾರಿದ್ದಾರ? ' ರಾಯರೆಂದರು.

ರಾಮುನಾಥನಿಗೆ ಪ್ರಶಸ್ಥವೆನಿಸವೆ, ' ಹೌದು, ಶಾರಕ್ಕ ಎರಡು ವರುಷದೊಳಗ ದೊಡ್ಡಾಕಿ ಆಗಿಬಿಟ್ಟಾಳ ' ಎಂದು ಸಲುಗೆಯಿಂದ ಮಾತನಾಡಲೆತ್ನಿಸಿದ. ಶಾರಕ್ಕ ಮುಗುಳುನಗುತ್ತ ತುಪ್ಪ ಬಡಿಸಲಿಕ್ಕೆ ಬಂದಳು. ಊಟಕ್ಕೆ ಕೂತಾಗ ಒಮ್ಮೊಮ್ಮೆ ಮೊಳಕಾಲ ಮೇಲೆ ಮುಂದೆ ಕೈ ಚಾಚಿಕೊಂಡು ಕೂಡುವುದು ರಾಮುನಾಥನ ಸ್ವಭಾವ. ಹೀಗೆ ಕೂತಾಗೊಮ್ಮೆ ಜಾನಕಿ ' ಬಡಿಸುವವರು ಎಡವಿಕೊಂಡು ಬೀಳುವಂತೆ ಹಾಗೇಕೆ ಅಡ್ಡ ಕೈ ಚಾಚುತ್ತೀರಿ' ಎಂದು ಚೇಷ್ಟೆ ಮಾಡಬೇಕು. ಒಮ್ಮೆ ರುಕ್ಮಿಣಿಬಾಯರು ಬಡಿಸುವ ಮುಂದೆಯೂ ಹೀಗೆ ಮೈಮರೆತು ಕೈಚಾಚಿ ಕೂತಾಗ ಜಾನಕಿ ರಾಮುನಾಥನಿಗೆ ' ತಗೀರಿ ಆ ಆನಿಸೊಂಡಿಯಂಥಾ ಕೈ. ಹ್ಯಾಂಗ ಬಡಿಸಬೇಕು, ಅವ್ವಾ? ' ಎಂದು ಹೇಳಿದಾಗ ರುಕ್ಮಿಣಿಬಾಯಿಗೆ ನಗೆ ತಡೆಯಲಿಕ್ಕಾಗದೆ ಬಿದ್ದು ಬಿದ್ದು ನಕ್ಕಿದ್ದರು. ಶಾರಕ್ಕ ತುಪ್ಪ ಬಡಿಸಲಿಕ್ಕೆ ಬಂದಾಗ ರಾಮುನಾಥನು ಕೈಚಾಚಿದುದನ್ನು ಕಂಡು ಆಚೆಗೆ ತಮ್ಮವ್ವನ ಕಡೆಗೆ ಮುಖ ಮಾಡಿ ಮುಗುಳ್ನಗೆ ನಕ್ಕಳು. ರುಕ್ಮಿಣಿಬಾಯಿಗೆ ಜಾನಕಿಯ ಚೇಷ್ಟೆಯ ಮಾತು ಕಿವಿಯೊಳಗೆ ಸುತ್ತಾಡಿಹೋದಂತೆನಿಸಿತು. ಅಂತೂ ತಡೆಯಲಾರದೆ ಯಜಮಾನರಿಗೆ ಹೇಳುವ ನೆವದಿಂದ ರಾಮುನಾಥನಿಗೆ ತಿಳಿಯುವಂತೆ ' ನೋಡ್ರಿ ಶಾರಕ್ಕಗ ಯಾಕ ನಾಚಿಗಿ ಬಂತು

' ದುರ್ಪೈವಿ ರಂಡೇದು....ವೋನ್ಯಾ ದೊಡ್ಡಾವ ಆದ ವ್ಯಾಲೆ ಹಾಂಗ ಮಾಡತೀನಿ, ಹೀಂಗ ಮಾಡತೀನಿ ಅಂತ ಬರೇ ಬಡಬಡಸತಿದ್ದಳು....ಒಂದೂ ಕಾಣಲಿಲ್ಲ! '

ರುಕ್ಮಿಣಿಬಾಯರು ಜಾನಕಿಯ ನೆನಪು ತೆಗೆದಾಗೆಲ್ಲ ರಾಮನಾಥನಿಗೂ ಅಂಥವೇ ಮಾತುಗಳನ್ನಾಡಬೇಕು ಎನಿಸುತ್ತಿತ್ತು. ತಾನೂ ಮುಂದರಿಸಿ 'ನಮ್ಮ ನಶೀಬ. ಅದಕ್ಕ ಯಾರೇನು ಮಾಡೋದು. ಹಿಂದಕ ನಾ ಬಂದಾಗೆಲ್ಲಾ ಮನಿ ಎಷ್ಟು ತುಂಬಿರಬೇಕು! '

' ಅಯ್ಯೋಯ್ಯೋ. ಆಕಿ ಒಬ್ಬಾಕಿ ಮನ್ಯಾಗ ಇದ್ದರ ಹತ್ತುಮಂದಿ ಇದ್ಧಾಂಗ ಅನಿಸತಿತ್ತು. ದರವೊಂದಸಾರ್ತ್ಯಾ ಎಷ್ಟು ಉಮೇದಿ, ಎಷ್ಟು ಉತ್ಸಾಹಾ. ಒಂದು ಹಬ್ಬ ಬರಲಿ, ಒಂದು ಹುಣ್ಣಿವಿ ಬರಲಿ, ದೊಡ್ಡದೊಂದು ಮದಿವಿ ಮನಿ ಮಾಡಿಧಾಂಗ ಮಾಡಿಬಿಡುತಿದ್ದಳು........ಒಂದು ದೀಪಾವಳ್ಯಾಗ ನೋಡ-ತಿದ್ದಿರಲ್ಲೊ ಉಣಸೇನು, ತಿನಸೇನು ಥರಥರದ ಜೀನಸು ಮಾಡಿ ಫರಾಳಕ್ಕ ಕರೆಯೋದೇನು, ಬೆಳತನಕಾ ಪಗಡಿ ಆಡಿದರ ಬೆಳತನಕಾನು ಚಹಾ ಅವಲಕ್ಕಿ ತಯಾರ ಮಾಡಿದ್ಲು ಒಮ್ಮೆ ಅಂತೂ. '

' ಹೆಂಗಸರೊತ್ತಟ್ಟಿಗೆ ಗಂಡಸರೊತ್ತಟ್ಟಿಗೆ ಅಂತ ಆದಾಗ ' ನಾ ಎತ್ಲಾಗ ? ' ಅಂದರ 'ನೀಯೇನು ಎಣ್ಣಿಗುಂಡಿಗಿ' ಅಂತಿದ್ಲು ನನಗ........' ಶಾರದಾನೂ ತನಗೆನಿಸಿದ ಮಾತುಗಳನ್ನು ಹೇಳಿದಳು.

ರುಕ್ಮಿಣಿಬಾಯರ ಮಾತುಗಳು ರಾಮನಾಥನನ್ನು ಏಳು ವರುಷದ ಹಿಂದಿನ ಸ್ಮೃತಿಪಥಕ್ಕೆ ಎತ್ತಿಕೊಂಡೊಯ್ದು ಕಲ್ಪನೆಯ ಲೋಕದಲ್ಲಿ ಜಾನಕಿಯ ಬಳಿಯಲ್ಲಿಳಿಸಿದುವು................

ರಾಮನಾಥನಾಗ ಜ್ಯೂನಿಯರ ಬಿ. ಎ. ದಲ್ಲಿ ಅಭ್ಯಾಸಮಾಡುತ್ತಿದ್ದ. ದೀಪಾವಳಿಯ ಬಿಡುವಾಗಿತ್ತು. ಅತ್ತೆಮಾವಂದಿರ ಆಗ್ರಹಕ್ಕಾಗಿ ವಿಜಯ-ಪುರಕ್ಕೆ ವಿಜಯಸೈಯಡೆ ಅಲ್ಲಿಯೆ ಉಳಿದುಕೊಂಡ ಹಬ್ಬಕ್ಕಾಗಿ. ಗೋಪಾಳ ರಾಯರು ಮನೆಯಲ್ಲಿ ಅಳಿಯತನ ಹಬ್ಬಿಸಿಕೊಂಡಿದ್ದರು. ವಿಜಯಪುರಕ್ಕೂ ಆಮಂತ್ರಣ ಹೋಯಿತು. ಆದರೆ ಬಂದವರು ರಾಮನಾಥನ ಅತ್ತಿಗೆ ಹುಡುಗರು ಅಷ್ಟೆ. ಸರ್ಕೀಟಿನ ಮೇಲೆ ಹೋಗಿದ್ದ ರಾಮನಾಥನ ಅಣ್ಣ ಸರ್ಕಲ್ ಇನ್‌ಸ್ಪೆಕ್ಟರ ಬರುವುದಕ್ಕಾಗಲಿಲ್ಲ.

ಅಂದು ಅಮ್ಮನ ಚವತಿ. ಹಗಲೆಲ್ಲಾ ಸ್ವಾತಿಯ ಮಳೆ ಹೊಡೆದು

ರಾತ್ರಿ ಸ್ವಲ್ಪ ಹೊರಪಾಗಿತ್ತು. ಪಗಡೆಯಾಟ ಹೂಡಿದರು. ಗಂಡಸರೊಂದು ಪಕ್ಷ, ಹೆಂಗಸರೊಂದು ಪಕ್ಷ. ಗಂಡಸರಲ್ಲಿಯ ಜಾನಕಿ ಅಜ್ಜ, ರುಕ್ಮಿಣಿಬಾಯಿ ಯವರ ತಂದೆ ಸ್ವಾಮಿರಾಯರು ಎತ್ತಿದ ಕೈ. ಕಾಯಿ ಬಿಡುವುದಕ್ಕೆ ಎಷ್ಟು ಹುಷಾರಿಯೊ ಯಾರಾದರೂ ನಿರುಪಯೋಗಿ ಫಾಶಿ ಹಾಕಿದರೆ ಅವರನ್ನು ಛೀ ಹಾಕುವುದರೊಳಗೂ ಅಷ್ಟೆ ಚುರುಕು. ಹೆಂಗಸರಲ್ಲಿ ಜಾನಕಿಯ ಸೋದರತ್ತೆ ಸುಂದರಕ್ಕ ಹಿರಿಹುದ್ದರಿ. ಅಂದಿನಾಟ ಒಳ್ಳೇ ರಂಗಿಗೇರಿತ್ತು. ಸ್ವಾಮಿರಾಯರು ಒಳ್ಳೇ ರಾಜಕಾರಣಿಯಂತೆ ಐದ್ಕೈದು ತಾಸು ಮಿಜಿ ಮಿಜಿ ಮಾಡಿ ಕಾಯಿ ಬಿಡು ವರು. ಒಮ್ಮೆ ಕೆತ್ತಿಟ್ಟ ಕಾಯಿಯನ್ನು ಮತ್ತೊಮ್ಮೆ ಸರಿಪಡಿಸುತ್ತಲೆ ಸುಂದ ರಕ್ಕನ ರಂಭಾಟಕ್ಕೆ ಪ್ರಾರಂಭವಾಗಬೇಕು. 'ಹೀಂಗಾದರ ನಾ ಆಟಕ್ಕೆ ಒಲ್ಲೆ. ಇದೇನಿದು ಮೊದ್ಲ ಮೀನಾಮೇಷಾ ಮಾಡಿಕೋತ ಕಾಯಿ ಬಿಡೂದು, ಮತ್ತ ಕೆತ್ತೂದು.' ಸ್ವಾಮಿರಾಯರೂ ಅಷ್ಟೆ ಆರ್ಭಟೆಯಿಂದ 'ಅಂದರೆ? ನಮ್ಮ ಕಾಯಿ ನಾವು ಬೇಕಾಧಾಂಗ ಬೇಕಾದಷ್ಟು ಸಾರೆ ಹಚ್ಚತೀವಿ. ನೀವೇನು ಕೇಳತೀರಿ? ಹಿಂಗೆಲ್ಲ ರಂಟ್ಯಾ ತಗದರ ಪಟ್ಟಾ ಕಿತ್ತಿ ಒಗಿತೀನಿ!' ವಾತಾವರಣ ಬಿಸಿಯಾಗಲು ರುಕ್ಮಿಣಿಬಾಯಿ 'ಇರ್ಲಿ ಬಿಡ್ರೀ ಸುಂದರಕ್ಕ, ಕಾಯಿ ಸೋಲತಾವ ಕಾಯಿ ಗೆದೀತಾವ. ಅದಕ್ಯಾಕ ಬಡದಾಟ ಸುಡ್ಲಿ— ಕೌರವ ಪಾಂಡವರ್ಧಾಂಗ?' ರಾಮನಾಥ ಜಾನಕಿಯರಿಗೆ ಆಟದಲ್ಲಿ ವಿಶೇಷ ಆಸಕ್ತಿಯಿರದೆ ಒಬ್ಬರನ್ನೊಬ್ಬರು ಕದ್ದು ನೋಡುವುದು, ಆಟದಿಂದ ಹುಟ್ಟುವ ಹಾಸ್ಯವನ್ನೆ ಕಾರಣಮಾಕೊಂಡು ತಮ್ಮ ತಮ್ಮೊಳಗೆ ನಗೆಯ ಸಂದೇಶ ತಿಳಿಸುವುದು ಅವರ ಸುಖಸಂಕಥಾವಿನೋದವಾಗಿತ್ತು. ಅಂತೂ ಆಟ ತುರುಸಿನಿಂದ ಸಾಗಿ ಗಂಡಸರದೇ ಮೊದಲು ಕಷ್ತವಾಗಿ ಒಂದೋದೇ ಕಾಯಿ ಮಲಗಹತ್ತಿದುವು. ಹೆಂಗಸರ ಹಣೇಬರೆಹಕ್ಕೆ ಒಂದು ಕಷ್ತ ಸಹ ಆಗಿದ್ದಿಲ್ಲ. ಸುಂದರಕ್ಕನ ಕೆಟ್ಟ ಮೋರೆಯನ್ನು ನೋಡುವ ಹಾಗಿದ್ದಿಲ್ಲ. 'ಅತ್ಯಾ ಏನು ತೊಗೊಳ್ಳಿ?' ಎಂದು ಜಾನಕಿ ಕುಂಟ ಚೇಷ್ಟೆಯ ಪ್ರಶ್ನೆಮಾಡಿದಾಗ— 'ಏನು ತೊಗೋತಿ ನನ್ನ ಜೀವಾ ತೊಗೊ ಥಣ್ಣಗ....ದೋನಿ, ತೀನಿ ಒಗಿ ಸಾಕು' ಎಂದು ಗದ್ದರಿಸಿ ಬೈದಾಗ ಜಾನಕಿ ರಾಮನಾಥನನ್ನೊಮ್ಮೆ ಮುಗುಳ್ನಗೆ ನಕ್ಕು ನೋಡಿ ಕವಡಿ ಹಾಕಿದಾಗ ಪಂಚವೀಸ ಬಿದ್ದುಬಿಟ್ಟಿತು. 'ನಿನ್ನ ಧಾಡಿ ಬರ್ಲಿ' ಎಂದು ಸುಂದರಕ್ಕ ಸೋಟಿಯನ್ನೆ ಹಿಂಡಿಬಿಟ್ಟರು. ಜಾನಕಿಗೆ ನಗೆ ಬಂದರೂ

ಯಜಮಾನರ ಮುಂದೆ ಸ್ವಲ್ಪ ಅಪಮಾನವೆನಿಸಿ ಕಣ್ಣು ಕೆಂಪಗೆ ಮಾಡಿ-ಕೊಂಡು ಧಡಕ್ಕನೆ ಎದ್ದುಹೋಗಿ ಮುಸುಗು ಹಾಕಿಬಿಟ್ಟಳು. ಆಗ ರಾಮನಾಥನಿಗೆ ಒಳಗೊಳಗೇ ಚಡಪಡಿಕೆಯಾಗಿ ಕೊನೆಯ ಕಾಯಿಯೂ ಮಲಗುವ ಹೊತ್ತಿಗೆ ಸ್ವಾಮಿರಾಯರು ಹುರುಪಿನಿಂದ—' ರಾಮನಾಥರಾವ್ ಒಂದು ದೋನೀ ಹಾಕಿಬಿಡ್ರಿ ' ಎಂದು ಹೇಳುತ್ತಿದ್ದಾಗಲೆ ರಾಮನಾಥ ದಶ್ಯಾ ಒಗೆದು ಬಿಟ್ಟ. ಹೆಂಗಸರೆಲ್ಲಾ ಖೊಳ್ಳನೆ ನಕ್ಕುಬಿಟ್ಟರು. ಸ್ವಾಮಿರಾಯರು ಏನೂ ಮಾತಾಡಲು ಸಾಧ್ಯವಾಗದೆ ಸಿಟ್ಟಿನಿಂದ ಪೆಚ್ಚನಂತೆ ಮೌನ ತಾಳಿದರು. ಒಂದೆರಡು ಕೈಯೊಳಗೆ ಹೆಂಗಸರು ಕಡ್ತಕ್ಕೆ ಕಾಯಿ ಹಚ್ಚೇ ಬಿಟ್ಟರು. ಮುಸುಗು ಹಾಕಿ ಮಲಗಿದ್ದ ಜಾನಕಿಯನ್ನು ಒಳ್ಳೇ ಸಂಭ್ರಮದಿಂದ ಬಡಿದೆಬ್ಬಿಸಿ-' ಏಳವಾ ಕಡತದ ಕೈಯಾಕೇ' ಎಂದಳು ಅತ್ಯಾ.' ಸಾಕು ನೀನು ಇದ್ದೀಯಲ್ಲಾ ಕಡ್ತದ ಕೈಯಾಕಿ.' ಎಂದು ಉತ್ತರಿಸಿದಳು ಜಾನಕಿ. ಸುಂದರಕ್ಕ ' ಇರ್ಲಿ ಏಳು. ಯಜಮಾನ್ರಿಗೆ ಮತ್ತೆಲ್ಲೆ ತಲೀವ್ಯಾಲೆ ಬುಟ್ಟಿ ಬರತದೋ ಅಂತ ಆಂಜಿಕೆಯಿಂದ ತಪ್ಪು ಫಾಸಿ ಹಾಕಿಕೊಟ್ಟಾರ ಏಳು ಯಜಮಾನ್ರು ' ಎಂದಳು. ರುಕ್ಮಿಣಿ ಬಾಯಿ ' ಇರ್ಲಿ ಬಿಡ್ರೆ, ನೀವು' ಎಂದು ನಕ್ಕಳು. ಸ್ವಾಮಿರಾಯರು ಕೋಪ ತಡೆಯಲಾರದೆ ತಾಳ್ಮೆ ಕೈಮಿರಿ—' ಇರ್ಲಿ ನಿಮ್ಮಷ್ಟಕ್ಕ ನೀವು ಮುನ್ನೊಡಿ ಆಡ್ರಿ ' ಎಂದರು. ಜಾನಕಿ ಇನ್ನು ಎದ್ದು ಬಂದು ಕೈಯೊಳಗೆ ಕವಡಿ ಹಿಡಿಯುವವಳಿದ್ದಳು, ಸುಂದರಕ್ಕ ಹೇವದಿಂದ ' ಹಾಂಗಾರ ನೋಡ್ರಿ ಆಕಿ ಕೈನೂ ನಾನೇ ಆಡ್ತೀನಿ ' ಎಂದು ಕವಡಿಘುಲ್ಲಿಸಿದಳು. ದೋನಿಗೆ ಕಡ್ತವಿತ್ತು. ಹೆಂಗಸರೆಲ್ಲ ನೆಲ ಚಿವುಟುತ್ತ ಕುರಕುರ ದೋನಿ ಕುರಕುರ ದೋನಿ' ಎಂದು ಒದರುತ್ತಿರುವಾಗಲೆ ಸ ಂದರಕ್ಕ ಕವಡಿಗಳನ್ನುನಾಲ್ಕುಬೆರಳ ಮೇಲೆ ಇಟ್ಟು ಸರಕ್ಕನೆ ಕೈ ಸರಿಸಿಕೊಂಡರು. ' ಹೌದು ದೋನಿ ! ' ಎಂದು ಎಲ್ಲರೂ ಹುರುಪಿಗೆದ್ದು ಒದರಿದರು. ಕಡ್ತವಾಯಿತು. ಕಾಯಿ ಹಣಿದರು. ಆದರೆ ಸ್ವಾಮಿರಾಯರು ತಂಟೆ ತಗೆದರು, ' ಇಲ್ಲಾ ಜಾನಿ ಕೈ ಜಾನೀನು ಆಡ್ಲಿ. ನಾವು ಕೇಳೋದಿಲ್ಲ. ಏಳ ಜಾನಿ ಆಡೇಳು. ' ಎಂದು ಒದರಾಡಿ-ದರು. ಸುಂದರಕ್ಕನಿಗೂ ಸಹನೆ ಮೀರಿತು. ' ಥಣ್ಣಗ ಪಟ್ಟಾ ಕೆತ್ತಿ ಒಗೀರತ್ಲಾಗ. ಬಾಯಾಗ ಬಾಯಿ ಇಲ್ಲಲ್ಲ ನೀವು ! ಜಾನಿ ಕೈ ಆಡ್ರಿ ಅಂತ ನೀವು ಹೇಳಿ ಈಗ ಮತ್ತ ಬಾಯಿ ಬದಲಿ ಮಾಡತೀರೇನು ? ಹೋಗಿರತ್ಲಾಗ

ಎಂದು ಬದಿಗೆ ಸರಿದರು. ‘ ಹೂಂ ! ನಿಮಗ ಜೋಡಿಸಿಕೊಂಡು ಆಡೂದು ಬೇಕಾಗಿರತದ....ವಾಟಗದಾಗ ಕವಡಿ ಹಾಕಿ ಘಲ್ಲಿಸಿ ಆಡ್ರಿ ನೋಡೋಣು ’ ಎಂದು ಸ್ವಾಮಿರಾಯರು ಬಾಯಿಮಾಡಿದರು. ‘ ಹೋಗ್ಲಿ ಬಿಡೊ ಅಣ್ಣಾ, ಸುಮ್ಮನ ಯಾಕ ಅಷ್ಟು ಬಾಯಿ ಮಾಡ್ತೀ. ಕಾಯಿ ಸೋಲತಾವ ಕಾಯಿ ಗೆದೀತಾವ. ಅದೆಲ್ಲಾ ಬಿಟ್ಟು ಅದೇನೊ ಅಂತಾರಲ್ಲ.....ಬರ್ರಿ ಬರ್ರಿ ಸುಂದರಕ್ಕ ಇನ್ನೊಂದು ಆಟಾ ಹಚ್ಚೋಣು. ’ ಎಂದರು ರುಕ್ಮಿಣಿಬಾಯಿ. ‘ ಸಾಕು ನಿಮ್ಮ ಅನ್ಯಾರಂಟಾದಾಟ. ವಾಟ್ಯಾಗ ಕವಡಿ ಹಾಕಿ ಆಡೂಹಂಗಿದ್ದರ ಆಡೋಣು.’ ಸ್ವಾಮಿರಾಯರೆಂದರು. ‘ ಇರಲಿ ಇಲ್ಲಿಗೆ ಒಂದಂಕ ಆಗಲಿ.... ಜಾನಮ್ಮ ಏಳು ಲಕ್ಕ ಚಹಾ ಅವಲಕ್ಕಿ ಆಗಲಿ ’ ಎಂದು ಗೋಪಾಳರಾಯರು ಜಾನಮ್ಮನನ್ನೆಬ್ಬಿಸಿದರು. ಅಂತೂ ಜಾನಮ್ಮ ಮತ್ತೆ ಮೆಲ್ಲನೆ ಮುಸುಕು ತೆಗೆದು ಡಬರಿ ತುಂಬ ಚಹ, ಪಾತೇಲಿ ತುಂಬ ಅವಲಕ್ಕಿ ಹಚ್ಚಿದಳು. ಸುಂದರಕ್ಕ ವಾಟಿಯಲ್ಲಿ ಕವಡಿ ಹಾಕಿ ಆಡುವುದಕ್ಕೆ ಒಪ್ಪದ್ದರಿಂದ ಆಟವೇನೂ ಸಾಗಲಿಲ್ಲ.

ಮುಂದೆ ಎಷ್ಟೋ ದಿನಗಳ ವರೆಗೆ ತಾವಿಬ್ಬರೇ ಹರಟೆಗೆ ಕೂತಾಗೊಮ್ಮೆ ಸುಂದರಕ್ಕ ಸ್ವಾಮಿರಾಯರ ಪಗಡೆಯ ಉದ್ವೇಗವನ್ನೂ ತಮ್ಮ ಅನಾಸಕ್ತಿ ವಿನೋದವನ್ನೂ ನೆನೆನೆದು ನಗುತ್ತಿದ್ದರು........ ........

....ರಾಮನಾಥ ಮತ್ತೆ ಜಾನಕಿಯ ವಿಷಯಕವಾಗಿ ಆಸಕ್ತಿಯಿಂದ ಕೇಳತೊಡಗಿದ. ರುಕ್ಮಿಣಿಬಾಯಿ ಮುಂದರಿಸಿದರು :

‘ ಆಕಿ ಅಸ್ಥಾನಾರ ಎಷ್ಟೆಷ್ಟಿತ್ತು ಹೇಳತೀರದು.... ಅವ್ವಾ ನಮ್ಮ ಮೋನ್ಯಾನ ಜಾವಳಾ ಮಂತ್ರಾಲಯದೊಳಗ ಮಾಡೂಣಂತ. ನಾ ಹಾಂಗ ಬೇಡಿಕೊಂಡೀನಿ ಅನಬೇಕು. ಮುಂಜ್ವಿಗೆ ನಿನಗೊಂದು ಬನಾರಸಿ ಪತ್ಲಾ ಉಡಸತೀನಿ ಅಂತ ಅನಬೇಕು. ಮೋನ್ಯಾ ದೊಡ್ಡಾವಾಗಿ ಘಳಿಸಲಿಕ್ಕೆ ಹತ್ತಿದಾ ಅಂದರ ನಿನಗ ಕಾಶಿಯಾತ್ರಾ ಮಾಡಿಸಿಕೊಂಡು ಬರತಾನ ನೊಡವ್ವಾ ಅನಬೇಕು....ಏನು ಒಂದs....ಎರಡs....ಬರೇ ನೆನಸೂಹಾಂಗ ಮಾಡಿಟ್ಟು ಹೋದ್ಲು ಆತು...........’ ಊಟಕ್ಕೆ ಕೂತಿದ್ದುದು ಗೊತ್ತಿದ್ದರೂ ಅನಿವಾರ್ಯವಾಗಿ ಕಣ್ಣೀರು ಚಿಮ್ಮಿ ಬಂದುವು ರುಕ್ಮಿಣಿಬಾಯರಿಗೆ.

‘ ಹೋಗ್ಲಿ ಬಿಡು. ಬರೇ ನೆನಸಿದರ ಬರೋದೇನು. ಒಟ್ಟೇನು

ಭಂಗಾರದಂಥಾ ಅಳಿಯಾನ ಜೋಡಿ ಮತ್ತಷ್ಟು ದಿವಸ ಸಂಬಂಧ ಉಳಿಸ-ಲಿಲ್ಲಾ ಆತು ದೇವರು....' ರಾಯರೂ ಖಿನ್ನರಾಗಿ ಮಾತನಾಡಿದರು.

'ಸಂಬಂಧ ಏನು ಇಟಕೊಂಡರ ಅದ' ಯಜಮಾನತಿ ಎಂದರು' 'ಹಾಂಗಂದರ ಹೆಂಗ, ಅವರಿಗ್ಯಾರು ಸತ್ತಾ ಹ್ಯಾಂಗ ಬರಬೇಕು?........... ಆತು ಅವರಿಗೆ ಇನ್ನ ಮುಂದಾರ ಗೃಹಸೌಖ್ಯ ಅಂಬೂದು ಕೊಡು ದೇವರು ಅಂತೀನಿ, ನಮ್ಮ ಮಗಳೊಬ್ಬಳು ದುರ್ದೈವಿ ಆದರೇನಾತು'

'ಗೃಹಸೌಖ್ಯ ಸಿಗೂದಕ್ಕೇನು. ಏನು ಮುದುಕರು ತದಕರು, ಜೀಕಾ ಥಾಂಗ ಚಿಕ್ಕವರಿದ್ದಾರ. ನಾ ಮುಂದ ನೀ ಮುಂದ ಅಂತ ಬರತಾವ ಕನ್ಯಾ.'

'ಕನ್ಯಾ ಬರತಾವ. ಮೊದಲಿನ ಸ್ವಾರಸ್ಯ ಬರತದೇನು?' ರಾಯರು ರಾಮನಾಥನ ಕಡೆಗೆ ನೋಡುತ್ತ ಪ್ರಶ್ನೆ ಮಾಡಿದರು.

ರಾಮನಾಥ ಯಾವುದೇ ಮಾತನಾಡದೆ ಜಾನಕಿಯ ನೆನಪಿನ ಕಿಡಿಯಿಂದ ಅವನ ಪೂರ್ವಾನುಭವದ ಕಪ್ಪುರವು ಭಗ್ಗನೆ ಹೊತ್ತಿಕೊಳ್ಳಲು ಅದರ ಝಳದಲ್ಲಿ ರಾಮನಾಥನ ಕರುಳು ಕಮರಿಹೋಗುವಂತಾಯಿತು. ಅದೇ ಕ್ಷಣಕ್ಕೆ ವಿದ್ಯಾವತಿಯ ಉದ್ಧತಮನೋವೃತ್ತಿಯ ಪ್ರತೀಕವಾದ ಅವಳ ರೇಡಿಯೊ ಪ್ರಯೋಗವು ಉರಿಯೊಳಗೆ ಎಣ್ಣೆ ತೂರಿದಂತಾಯಿತು. ತಾನೆಲ್ಲಿ ಕೂತಿರುವೆ, ಏನು ನಡೆದಿದೆ ಎಂಬುದರ ಕಡೆಗೆ ಲಕ್ಷ್ಯವೇ ಇಲ್ಲದೆ ಶೂನ್ಯ ಮನಸ್ಕನಾಗಿ ಕೂತುಬಿಟ್ಟ.

'ಶಾರಿ ಮೊನ್ನೆ ಪೇಟೀಯೊಳಗ ಅವೆರಡು ಆರತಿಹಾಡು ಕೂಡಿಸಿದ್ದೆಲ್ಲಾ ಅವರು ಬರದುಕೊಟ್ಟದ್ದು' ಎಂದು ರಾಮನಾಥನನ್ನು ಕಣ್ಣಿನಿಂದಲೆ ತೋರಿಸುತ್ತ, 'ಬಾಯಿಲೆ ಹೇಳಿಕೋತ ಬಾರಿಸಿ ತೋರಸು ನೋಡೋಣು.' ಶಾರದಾ ತಾಯಿಯ ಕಡೆಗೊಮ್ಮೆ ರಾಮನಾಥನ ಕಡೆಗೊಮ್ಮೆ ನೋಡುತ್ತ ಅನುಮಾನಿಸಹತ್ತಿದಳು. ತನ್ನ ಮನಃಸ್ಥಿತಿಯನ್ನು ಮುಖದ ಮೇಲಿಂದಲೆ ಓದಿಕೊಂಡು ಬಾರದೆ ಈ ರೀತಿ ಅನುಮಾನಿಸುತ್ತಿರುವಳೆಂದು ರಾಮನಾಥ ಅನುಮಾನಿಸಿ 'ಹೇಳಲಾ ಕೇಳೂಣು' ಎಂದು ಹುರುಪನ್ನು ತೋರಿಸಲು ಹವಣಿಸಿದ.

ಶಾರಕ್ಕ ಪೇಟೀ ತಂದು ಹಾಡು ಪ್ರಾರಂಭಿಸಿದಳು.

"ಶ್ರೀರಾಮಗೆ ಆರುತಿಯನು ॥ ನೀರೆಯರೆಲ್ಲರು ಬೆಳಗುವೆವು"

ಎಂದು 'ನಾ ಪೇಳುವೆ ನಿನಗೊಂದುಪಾಯಾ' ಎಂಬ ನಾಟಕ ಪದದ ಚಾಲಿಯ ಮೇಲೆ ಹಾಡಿದಳು..................

....ಹೌದು ರಾಮನಾಥನಿಗಿನ್ನೂ ನೆನಪಿದೆ. ಜಾನಕಿಯ ಪ್ರೀತಿಯ ಹಾಡು ಅದಾಗಿತ್ತು. ಗ್ರಾಮೋಫೋನ್ ಮೇಲೆ ಯಾವಾಗಲೂ ಅದೇ ಹಾಡು ಹಚ್ಚಿ ಹಚ್ಚಿ ಅದರಂತೆಯೆ ಹಾಡಲು ಕಲಿತಿದ್ದಳು. ರಾಮನಾಥನಿಗೆ ಹೇಳಿ ಆ ಹಾಡಿನ ಚಾಲಿಯ ಮೇಲೆ ಮೇಲಿನ ಆರತಿಯ ಹಾಡು ಕಟ್ಟಿಸಿಕೊಂಡಿದ್ದಳು. ಆದರೆ ಶ್ರೀರಾಮಗೆ ಎಂದು ಪ್ರಾರಂಭವಾಗುತ್ತಿರುವುದರಿಂದ ಅದನ್ನು ಹೇಳುವುದಕ್ಕೇ ನಾಚಿಕೆ ಅವಳಿಗೆ. 'ದೇವರ ಹೆಸರಿಗೇನು ಹೇಳಬಾರದೆ? ಹಾಗೆಲ್ಲಾ ದೇವರ ಚೇಷ್ಟೆ ಮಾಡಬಾರದು' ಎಂದು ರುಕ್ಷ್ಮಿಣಿಬಾಯಿ ಬುದ್ಧಿ ಹೇಳಿದ ಮೇಲೆ ಯಾವಾಗಲಾದರೊಮ್ಮೆ ಆ ಹಾಡು ಹೇಳುವಳು. ಒಮ್ಮೆ ಮನೆಯಲ್ಲಿ ನೆರೆ ಮನೆಯ ಸಾಬಕ್ಕನಿಗೆ ಕುಪ್ಪುಸ ಮಾಡಿದಾಗ ಅರಿಷಿಣಕುಂಕುಮದ ಕಾಲಕ್ಕೆ ಆರತಿ ಹಾಡು ಹೇಳುವುದು ಜಾನಕಿಯ ಪಾಲಿಗೆ ಬಂದಿತ್ತು. ಜನರ ಜುಲುಮೆಗೆ ಜಾನಕಿ, 'ಶ್ರೀರಾಮಗೆ ಆರುತಿಯನು' ಎಂಬ ಹಾಡನ್ನೆ ಹಾಡಬೇಕಾಯಿತು. ಸುದೈವದಿಂದಲೊ ದುರ್ದೈವದಿಂದಲೊ ರಾಮನಾಥ ಅದೇ ಹೊತ್ತಿಗೆ ಬಂದುಬಿಟ್ಟ. ಆರತಿ ಅರ್ಧಕ್ಕೆ ಉಳಿಯಿತು. ಚಟ್ಟನೆ ಎದ್ದವಳೆ ಓಡಿಹೋದಳು. ರಾತ್ರಿ ರಾಮನಾಥ ಕೇಳಿದ ಜಾನಕಿಗೆ 'ಇದೇನು ಆರತಿ ಬಿಟ್ಟುಕೊಟ್ಟು ಅರ್ಧಕ್ಕೇ ಓಡಿಹೋಗುವುದೇನು ?'

'ಮತ್ತ ಬಂದಿರೆಲ್ಲಾ ನೀವು ನಮ್ಮ ಮಂಗಳಾರತಿ ಮಾಡಲಿಕ್ಕೆ.'

'ಈಗ ಆ ಹಾಡು ಹಾಡಿತೋರಿಸು.'

'ಸಾಕು ಹೋಗ್ರಿ, ಮಲಕೊಂಡವರೆಲ್ಲಾ ಗಾಬರಿ ಆದಾರು !'

'ಇಲ್ಲಾ ನನ್ನ ಕಿವಿಯೊಳಗs ಹೇಳು.'

ಅಂತೂ ಜಾನಕಿಯೇ ಸೋತಳು. ರಾಮನಾಥನಿಗೆ ಕಿವಿ-ಹಾಡು ಹೇಳಿದಳು. ರಾಮನಾಥನಿಗೆ ಜಾನಕಿ ಅವನ ಮುಖವನ್ನು ತೇಲುಗಣ್ಣಿನಿಂದ ನೋಡುತ್ತ 'ಶ್ರೀರಾಮಗೆ........' ಎನ್ನುತ್ತಿರುವಾಗ ಹೃದಯ ಹಿಗ್ಗಿನಿಂದ ಕುಣಿಯಿತು...............

ಶಾರದೆ ರಾಮನಾಥನ ಮುಖ ನೋಡಿ ಮೆಲ್ಲನೆ ಪೇಟೀ ಬಂದ್ ಮಾಡಿದಳು. ರುಕ್ಷ್ಮಿಣಿಬಾಯರು 'ಯಾಕ ಹೇಳಲ್ಲ........ರಾಮದೇವರ ಹೆಸರು

ತಗೊಳ್ಳಿಕ್ಕೆ ನಿನಗೂ ನಾಚಿಕೆ ಬರತದೇನು?' ಈ ಚೇಷ್ಟೆ ಮಾಡಲಿಕ್ಕೆ ದುಃಖವೆನಿಸಿದರೂ ಬಲವಂತದಿಂದ ಈ ಮಾತನ್ನಾಡಿ ಮೆಲ್ಲನೆ ರಾಮನಾಥನ ಮುಖ ನೋಡಿದರು ರುಕ್ಮಿಣಿಬಾಯಿ. ರಾಮನಾಥನ ಮುಖದ ಮೇಲೆ ಮುಗುಳ್ನಗೆಯಿದ್ದರೂ ಹೃದಯದೊಳಗೆ ಅದು ಅರಳಿರಲಿಲ್ಲ.

ಶಾರದಾ 'ದಶರಥನ ಪ್ರೇಮಪುತ್ರನಿಗೆ' ಎಂದು ಧ್ವನಿ ಏರಿಸುವಾಗ ಅಷ್ಟು ಏರದೆ ಅಪಸ್ವರವಾಗಿ ಧ್ವನಿ ಒಡೆಯಲು ಗೋಪಾಳರಾಯರು ನಗುತ್ತ, 'ಛಿ, ಹೋಗೋ ನಿನ. ಸಾಕ ತಗಿ ಮಾರಾಯ್ತಿ. ನೀಯೇನು ಕನ್ಯಾ ಪಾಸಲ್ಲ ತಗಿ. ದೇವರ ಹಾಡು ಹಾಡಬೇಕಿತ್ತು ನಮ್ಮ ಜಾನಮ್ಮನs' ಅದಕ್ಕೇ ದನಿಗೂಡಿಸಿ ರುಕ್ಮಿಣಿಬಾಯಿ 'ಒಂದು ಆರತಿ ಹಾಡs, ಒಂದು ದೇವರ ಹಾಡs, ಒಂದು ರಾಯರ ಹಾಡs!' ಸಂಪತ್‌ಸುಕ್ಕುರವಾರಂತೂ ಮೂಗಿನೊಳಗ ಗಾಡೆ ಇಟಗೊಂಡು ಕೊಯಿಮುತ್ತೂರ ಪತ್ಲಾ ಉಟಗೊಂಡು 'ಪೂಜಿ ಮಾಡುಣು ಬನ್ನೀರೆ' ಅಂತ ಹಾಡಿಕೋತ ನಿಂತಳಂದರ ಎಲ್ಲಿ ಹುಡಿಗ್ಗೆ ದೃಷ್ಟಿ ಆಗತದೊ ಅನಸಬೇಕು........ ಆಕೀನ ನಮ್ಮ ಮನೀ ಶುಕ್ರವಾರದ ಲಕ್ಷ್ಮಿ ಇದ್ದಾಂಗ ಇದ್ದಳು.'

ತನ್ನ ಈಗಿನ ಗೃಹಲಕ್ಷ್ಮಿಯನ್ನು ನೆನೆದು ಅವಳನ್ನು ಕಂಡರೆ ರುಕ್ಮಿಣಿಬಾಯಿಯಂಥವರು ಏನೆನ್ನಬಹುದೊ ಎಂಬ ಅರಿವಾಗಿ ರಾಮನಾಥ ಸುಮ್ಮನಿದ್ದನು.

'ಯಾಕ ನಾಳೆ ಮದಿವಿ ಆಗಿಂದ ನಮ್ಮ ಶಾರವ್ವನೂ ಹಾಂಗs ಕಾಣಸ್ತಾಳ' ರಾಯರೆಂದರು.

'ಈಗ ಏನು ಕಲೀತಾಳ ಶಾರಕ್ಕ?' ರಾಮನಾಥನೆಂದ.

'ಆಕಿನ್ನs ಕೇಳ್ರಿ.' ರುಕ್ಮಿಣಿಬಾಯಿ ಹೇಳಿದರು.

'ಏನು ಕಲೀತಿಯವಾ ಶಾರಕ್ಕ?'

ಶಾರಕ್ಕ ನಾಚಿ ನಾಲಗೆಯಿಂದ ತುಟಿ ಸವರುತ್ತ ಮುಖ ಕೆಳಗೆ ಹಾಕಿದಳು.

'ಯಾಕ ಹೇಳಲ್ಲ? ಈಗೇನು ಕನ್ಯಾಪರೀಕ್ಷ ನಡಧಾಂಗ ಮಾಡ್ತೀಯಲ್ಲ?'

'ಸಾಲಿಗೆ ಹೋಗೋದಿಲ್ಲ. ಹೊಲಿಗೆ ಕ್ಲಾಸಿಗೆ ಹೋಗತೀನಿ.'

‘ ಕಲೀ ಅಂದರ ಕಲೀಲಿಲ್ಲ ಖೋಡಿ. ಇಂಗ್ರೇಜಿ ಎರಡ್ನೇ ಎತ್ತಾಕ್ಕ ನಾಪಾಸಾಗಿ ಕೈ ಬಿಟ್ಟಬಿಟ್ಟಳು.’

‘ ಇರಲಿ. ಅಂತೂ ತಮ್ಮಕ್ಕನಕಿಂತಾ ಒಂದೆರಡಾರ ಎತ್ತಾ ಹೆಚ್ಚಿಗಿ ಕಲ್ತಾಳ. ’ ರುಕ್ಮಿಣಿಬಾಯರೆಂದರು.

‘ ಆತು. ಮದಿವಿ ಆದಮ್ಯಾಲೆ ಆಕಿ ಯಜಮಾನ್ರು ಕಲಿಸವಲ್ರ್ಯಾಕ.’ ರಾಯರೆಂದರು.

‘ ಮತ್ತ ನಮ್ಮ ಜಾನಕ್ಕ ಏ. ಬಿ. ಸಿ. ಡಿ ಸುದ್ಧಾ ಕಲ್ತಿದ್ದಳಲ್ಲ ಮದಿವಿ ಆದಮ್ಯಾಲೆ. ’ ಬಾಯಿಯವರೆಂದರು.

ರಾಮನಾಥನಿಗೆ ಈ ಪ್ರಶ್ನೋತ್ತರಗಳ ರೀತಿ ಎಲ್ಲಿಗೆ ಹೋಗಿ ಮುಟ್ಟು ವುದೊ ತಿಳಿಯದಂತಾಗಿ ದಿಗಿಲಾದಂತಾದ.

ಶಾರಕ್ಕ ಪೇಟಿ ಎತ್ತಿಟ್ಟುಬಿಟ್ಟಳು. ಸ್ವಲ್ಪ ಹೊತ್ತು ಮೌನ. ಮೌನವನ್ನು ಬಹಳ ಹೊತ್ತು ಬೆಳೆಯಗೊಡಬಾರದೆಂದು ಗೋಪಾಳರಾಯರು ‘ ಅಂತೂ ಮುಂಬಯಿಯೊಳಗ ಊಟಾ ಉಡಿಗಿ ಎಲ್ಲೆ ಹಾಂಗಾರ ? ’ ಕೇಳಿದರು.

‘ ಮನೇಗೆ ಡಬ್ಬಿ ತರಸ್ತೇನಿ. ’

‘ ಖೋಲಿಗೆ ಹೌದಲ್ಲೊ ? ’

‘ ಇಲ್ಲಾ ಖೋಲಿಕಿಂತಾ ಸ್ವಲ್ಪ ಸುಲಭದೊಳಗ ಕೆಲ ದಿನಗಳ ಮಟ್ಟಿಗೆ ಮನೆ ಸಿಕ್ಕಬದೊಂದು. ’

‘ ಅಂದರ ಸರಕಾರಿ ವತಿಯಿಂದನೆ ಸಿಕ್ಕಬದೇನೊ ? ’

‘ ಇಲ್ಲಾ ಆಫಸಾತಿನೊಳಗ. ’

‘ ಅಂದರ ? ’

‘ ನಮ್ಮ ಮಿತ್ರರೊಬ್ಬರು ವರ್ಗ ಆಗಿ ಹೋಗ್ಯಾರ. ಅವರ ಹೆಸರ್ಲಿನ ಇರತೀನಿ. ಪಾಗಡೀ ವಗೈರೆ ಏನೂ ಹತ್ತಲಿಲ್ಲ ಪುಣ್ಯಾಕ್ಕ. ’

‘ ಖಾನಾವಳಿ ಊಟಂದರೂ ಬ್ಯಾಸರಿಟ್ಟು ಹೋಗತದ. ’

‘ ಹೌದು ಆದೂ ಖರೆ. ’

‘ ಶಾರಕ್ಕಾ ನಡೀವಾ ಒಮ್ಮೆ ಮುಂಬಯಿಗೆ ಹೋಗಿ ಬರೋಣು, ಎಲ್ಲಾ ತೋರಿಸಿಕೊಂಡು ಬರತೀನಿ ನಿನಗ. ’

'ಥಣ್ಣಗ ಅಲ್ಲೆ ಒಂದು ವರಾ ನೋಡಿ ಕೊಟ್ಟು ಬಂದಬಿಡ್ರಿ. ಮುಂಬಯಿ ಮದಿವೇನು ಒಂದು ತಾಸಿನೊಳಗ ಮುಗೀಶಾವಂತ.'

'ಮತ್ತ ಮುಂಬಯಿ ವರಾ ಇಲ್ಲೇ ಅದಲ್ಲಾ, ಅಷ್ಟು ಧೂರಾರ ಯಾಕ?' ಜಾಲವನ್ನು ವಿಸ್ತಾರವಾಗಿ ಬೀಸಿ ಸುತ್ತುಗಟ್ಟಿ ಒಮ್ಮೆಲೆ ಬಲಿ ಹಾಕಿ ಸರಗುಣಿಕೆ ಎಳೆದಂತೆನಿಸಿತು ರಾಮನಾಥನಿಗೆ. ರುಕ್ಮಿಣಿಬಾಯರ ಈ ಮಾತು ಬಹಳ ವಿನಯಾತೀತವೆನಿಸಿತು ರಾಮನಾಥನಿಗೆ. ಅದನ್ನು ಹೇಗೆ ಸ್ವೀಕರಿಸಬೇಕೆಂಬುದೆ ಅವನಿಗೆ ತಿಳಿಯಲಿಲ್ಲ. ಈ ಪ್ರಸಂಗ ಸ್ವಲ್ಪ ಅಚಾತುರ್ಯದ್ದಾಯಿತೆಂದು ಸೂಕ್ಷ್ಮವಾಗಿ ಅರಿತುಕೊಂಡ ಗೋಪಾಳ ರಾಯರು ವಾತಾವರಣ ಎಲ್ಲಿ ಕೆಟ್ಟೀತೊ ಎಂಬ ಉತ್ಕಂಠೆಯಿಂದ ತಾವೇ ನೇರವಾಗಿ ವಿಷಯವನ್ನೆತ್ತಿಬಿಟ್ಟರು :

'ನೋಡ್ರಿ ರಾಮನಾಥರಾವ್, ಜಾನಮ್ಮನಿಲ್ಲದಂತಾದರೂ ನಮ್ಮ ಸಂಬಂಧ ನಮ್ಮ ಅಂತಃಕರಣ ಹಾಗೇ ಉಳಿಯಬೇಕು ಅಂತ ನಮ್ಮ ಆಶಾ.' ಎಂದು ಮಾತು ಮುಂದರಿಸಬೇಕೆನ್ನುವಷ್ಟರಲ್ಲೇ ರುಕ್ಮಿಣಿಬಾಯಿ ಬಾಯಿ ಹಾಕಿ 'ಜಾನಮ್ಮ ಸುದ್ಧಾ ಸಾಯೋ ಕಾಲಕ್ಕ ಮೋನ್ಯಾನ್ನ ನನ್ನ ಉಡಿಯೊಳಗ ಹಾಕಿ ಶಾರಿ ಕಡೇನ ಬಟ್ಟು ಮಾಡಿ ತೋರಿಸಿದ್ಲು.' ಎಂದರು.

'ಅದಕ್ಕಂತ ಎರಡನೆಯ ಸಂಬಂಧ ಆದರೂ ನಮಗೇನು ಎಗ್ಗನಿಸೋದಿಲ್ಲ,' ರಾಯರೆಂದರು. ಅದಕ್ಕೆ ರುಕ್ಮಿಣಿಬಾಯಿ ದನಿಗೂಡಿಸಿ 'ತುಪ್ಪ ಛಲ್ಲಿದರೂ ಪಾಯಸದೊಳಗ ಅಂಬೂ ಹಾಂಗ, ಎರಡನೇ ಸಮ್ಮಂಧ ಆದರೂ ಅಂಥ ಹರಣದೊಳಗs ಅಂಬೂ ಸಮಾಧಾನ ಹೆಚ್ಚಿನದು,' ಎಂದು ಹೇಳಿದರು.

'ಅದಕ್ಕಂತ ನಾವು ಎರಡನೇ ಕಡೆ ಎಲ್ಲೂ ವರಾ ಹುಡುಕಲಿಕ್ಕೆ ಹೋಗಿಲ್ಲಾ.' ರಾಯರೆಂದರು.

'ನಮ್ಮ ಶಾರಕ್ಕ ಸುದ್ಧಾ ಕಬೂಲಬಟ್ಟಾಳ. ಮತ್ಯಾವದಾರ ಇಮ್ಮನಿ ವರಾ ಆಗಿದ್ದರ ಮೂಗು ಮುರಿಯೂವಾಕೀs ಈಕೀನು.' ಬಾಯರೆಂದರು.

'ನಿಮ್ಮ ಕಥಿ, ನಿಮ್ಮ ಹಾಡು ಅಂದರ ತೀರಿಹೋಯಿತು ನಮ್ಮ ಶಾರಿಗೆ, ಜೀವಾನs ಕಳಕೋತಾಳ.'

ರಾಮನಾಥ ಯಾವುದಕ್ಕೂ ಉತ್ತರ ಕೊಡದೆ, ಒಳಗಿನ ಅಭಿಪ್ರಾಯವನ್ನು ವ್ಯಕ್ತಪಡಿಸದೆ ದಿಗಿಲಾಗಿ ಎರಡೂ ಮೊಳಕಾಲಿಗೆ ಎರಡೂ ಕೈ ಅಪ್ಪಿಗೆ

ಹಾಕಿಕೊಂಡು ಸುಮ್ಮನೆ ವಿಚಾರದ ಓಟಕ್ಕೆ ತಾಳ ಹಾಕುವಂತೆ ಬಲಗಾಲಿ ನಿಂದ ನೆಲ ಬಡಿಯುತ್ತ ಕೂತುಕೊಂಡ.

' ನೀವು ಹೂಂ ಅಂದುಬಿಟ್ಟರ ಮತ್ತ ನಿಶ್ಚಯ ಕಾರ್ಯಾನೂ ಮುಗಿಸಿ, ಮುಂದಿನ ಮುಹೂರ್ತಕ್ಕ ಅಕ್ಕಿಕಾಳು ಹಾಕಿಬಿಡಲಿಕ್ಕೆ ಆಗತದ, ' ರುಕ್ಮಿಣಿ ಬಾಯರೆಂದರು.

' ಅಕ್ಕಿಕಾಳು ಅಲ್ಲಿಕ್ಕೇನು ದೊಡ್ಡ ಸಂಭ್ರಮದಿಂದ ಮಾಡಲಿಕ್ಕೆ ಯಾರಿಗೆ ಉಮೇದಿ ಅದ. ಸುಮ್ಮನ ನುಗ್ಗಿಕೇರಿಗೆ ಹೋಗಿ ಒಂದಿತ್ತು ಒಂದಿ-ಲ್ಲಾಂತ ಮೂರು ತಾಸಿನ್ಯಾಗ ಮದಿವಿ ಮುಗಿಸಿಬಿಡೂದು. ' ರಾಯರು ಒಂದು ಹೆಜ್ಜೆ ಮುಂದೆ ಹೋದರು.

ರಾಮನಾಥ ಸುಮ್ಮನಿದ್ದ.

' ನೀವು ಹೂಂ ಅಂತಂದಬಿಟ್ಟರ ಮತ್ತ ತಯಾರಿ ಮಾಡಲಿಕ್ಕೂ ನೆಟ್ಟ ಗಾಗತದ. ನುಗ್ಗಿಕೇರಿಯೊಳಗ ಅಂದ ವ್ಯಾಲೆ ಮೂರ್ತಾ ಸುದ್ಧಾ ಕೇಳ-ಲಿಕ್ಕೆ ಬ್ಯಾಡಾ. '—ರುಕ್ಮಿಣಿಬಾಯಿ ರಾಮನಾಥನ ಬಾಯಿಂದ ಉತ್ತರ ಹೊರಡಿಸುವ ಯತ್ನ ಮಾಡಿದರು.

ರಾಮನಾಥ ಸುಮ್ಮನೆ ಇದ್ದ. ಅವನ ಒಳಗಿನ ಕೋಲಾಹಲದಿಂದ ಎದೆ ದಡದಡ ಹಾರಹತ್ತಿತು. ಹೊರಗಿನವರಿಗೆ ಅದರ ಕಲ್ಪನೆ ಬರುವಂತಿರ ಲಿಲ್ಲ. ಅವನ ದೀರ್ಘ ಮೌನ ರುಕ್ಮಿಣಿಬಾಯರ ಶೀಘ್ರ ತಾಳ್ಮೆಯನ್ನು ಕೆಣಕುವಂತೆ ತೋರಿತು.

' ಮನಸ್ಸಿರಲಿಕ್ಕಿಲ್ಲಾ.....ಸುಮ್ಮನೆ ಯಾಕೆ ಜುಲಿಮಿ ಮಾಡೋದು ? ' ರುಕ್ಮಿಣಿಬಾಯಿ ಯಜಮಾನರಿಗೆ ಹೇಳಿದರು.

ರಾಮನಾಥನಿಗೇನು ಹೇಳಬೇಕೊ ತಿಳಿಯಲಿಲ್ಲ.

' ಅದೂ ಖರೇ ಅದ. ನಾನು ಒಲ್ಲೆಂದರ ನಮ್ಮಪ್ಪ ಯಾರಿಗೆ ಮದ್ವಿ ಮಾಡತಾನ ಅಂತಾರಲ್ಲ ಹಾಂಗ....' ರಾಯರೆಂದರು.

' ನಾವೇನೊ ಹಚ್ಚಿಗೋಬೇಕು ಅಂತೀವಿ. ಹಾಂಗಂತ ತಿಳಕೊಂಡು ಹುಡುಗನ್ನ ಧೊಡ್ಡದ ಮಾಡಿದಿವಿ ....'

ಬಾಯರ ಮಾತು ರಾಮನಾಥನಿಗೆ ಬಾಣದಂತೆ ತಾಗಿತು. ' ಹುಡ-ಗನ್ನ ಜೋಪಾನ ಮಾಡಿದ್ದಕ್ಕ ನಾ ಸಾಯೂತನಕ ನಿಮ್ಮ ಋಣದೊಳಗ ಇರ-

ತೀನಿ........ಅದರ ಉಪಗಾರಾ ಹ್ಯಾಂಗಾರ ತೀರಸ್ತೀನಿ.' ರಾಮನಾಥನ ಮನಸ್ಸು ಮೊದಲೇ ತತ್ತರಿಸಿ ಹೋಗಿತ್ತು, ಏನು ಮಾತನಾಡಬೇಕೆಂದು ತಿಳಿಯದೆ ಏನೋ ಮಾತಾಡಿಬಿಟ್ಟ. ಕೊನೆಯ ಮಾತು ಹೇಳಹೇಳುವಷ್ಟ ರಲ್ಲಿ ಕಣ್ಣು ಕೆಂಪಗಾಗಿ ಕುತ್ತಿಗೆಯ ಸಿರವುಬ್ಬಿಬಂದುವು.

'ಛೆ. ಛೆ. ನೀವು ಹಾಂಗೇನೂ ತಪ್ಪು ತಿಳಕೋಬ್ಯಾಡ್ರಿ ರಾಮನಾಥ ರಾವ್. ನಾವು ಅಂದದ್ದು ಏನಾದರೂ ತಪ್ಪಿದ್ದರ ಕ್ಷಮಾ ಮಾಡ್ರಿ.' ರಾಯರೂ ಕಂಠ ಬಿಗಿದುಕೊಂಡು ಕೈಜೋಡಿಸಿದರು.

'ಮೊದ್ಲ ನನ್ನದೇ ತಪ್ಪಾತು. ಏನೋ ಸಥೀಲೆ ನಾ ಮಾತಾಡಲಿಕ್ಕೆ ಹೋದೆ:........ಒಲ್ಲೆ ಅನಲಿಕ್ಕಿಲ್ಲಾ ಅಂತ ನಮಗನಿಸಿತ್ತು. ನಮ್ಮಿಂದ ಮಾತು ಬರಲಿಲ್ಲಾ ಅಂತ ಹೀಂಗ ಆಗಬಾರದು ಅಂತ ನಾನೇ ತಗದೆ. ಮೊದಲನೆ ಫಾಯಾ ನಿಮಗೆಷ್ಟದನೊ ನಮಗೂ ಅಷ್ಟs ಅದ........ಯಾರಿಗ್ಗೊತ್ತು. ಎರಡನೇ ಸಂಬಂಧಾ ಅಂತ ವರದಕ್ಷಿಣೆ ಕೊಡತಾರೊ ಇಲ್ಲೊ ಅಂತ ಅನಿಸಿರಬೇಕು. ವರದಕ್ಷಿಣೇನೂ ಕೊಡಬಹುದಾಗಿತ್ತು. ಇನ್ನೇನು ಥೊಡ್ಡ ಸರಕಾರೀ ನೌಕರಿ ಹತ್ತೇದಂತ ಬಡವರಿಂದ ಅಷ್ಟು ವರದಕ್ಷಿಣೆ ಸಿಗತದೋ ಇಲ್ಲೊ ಅಂತ ಅನಿಸಿರಬಹುದು........' ಬಾಯರೆಂದರು.

'ಸುಮ್ಮನ ಕೂಡ ನೀನು. ಇಲ್ಲಿಲ್ಲದ್ದ ಅಧಿಕಪ್ರಸಂಗತನದ ಮಾತಾಡಿ ಮನಸ್ಸು ಕೆಡಿಸಬ್ಯಾಡಾ.'

ರಾಮನಾಥ ದುಡುದುಡು ಅಟ್ಟ ಏರಿ ಹೋದ. ರುಕ್ಮಿಣಿಬಾಯಿ ಕಣ್ಣೀರಧಾರೆ ಸುರಿಸಿದರು. ರಾಯರು ನಿಟ್ಟುಸಿರು ಬಿಟ್ಟು ಹಾಸಿಗೆ ಉರುಳಿಸಿ ದರು. ಶಾರದೆ ಮೋಹನನನ್ನು ಮಗ್ಗುಲಿಗೆ ಮಲಗಿಸಿಕೊಂಡು ಮುಸುಗಿನಲ್ಲೇ ದುಃಖಿಸುತ್ತಿದ್ದಳು.

ರಾಮನಾಥ ಹಾಸುಗೆಯ ಮೇಲೆ ಉರುಳಿದನಷ್ಟೆ. ನಿದ್ರೆಯೆಂಬುದೇ ಇಲ್ಲ. ಎಲ್ಲರಿಗೂ ಎಷ್ಟು ಸಂತಾಪ ಕೊಟ್ಟೆನಲ್ಲ! ಅವರನ್ನು ಎಷ್ಟೆಂದು ನಿರಾಶೆಪಡಿಸಿದೆನಲ್ಲ! ಕೆಳಗೆ ಹೋಗಿ ಇದ್ದ ಸಂಗತಿಯನ್ನು ಹೇಳಿಬಿಡಲೆ— ಜಾನಕಿಯ ತಂಗಿ ಪುಣ್ಯವಂತೆಯಾದ ಶಾರದೆಯ ಕೈಹಿಡಿಯುವ ಯೋಗ್ಯತೆ ತನಗಿಲ್ಲವೆಂದು? ಶಾರದೆ ಎಷ್ಟು ನೊಂದುಕೊಂಡಿದ್ದಾಳು! ತಮ್ಮ ಅಕ್ಕನ ಮೇಲಿನ ಅಕ್ಕರೆಯಿಂದ, ಮೋಹನನ ಮೇಲಿನ ಮಮತೆಯಿಂದ 'ಇಮ್ಮನೆ'ಯ

ವರನಾದರೂ ಕೈಹಿಡಿಯಲು ಕಬೂಲ ಆಗಿದ್ದಾಳೆ....ರುಕ್ಮಿಣಿಬಾಯಿಯರಿಂದ ಮಾತಿನ ಶಬ್ದಶಬ್ದವೂ, ಅಕ್ಷರಕ್ಷರವೂ ಸೂಜಿಯ ಮೊನೆಯಾಗಿ ಒಳಗಿನ ಕರುಳನ್ನು ಚುಚ್ಚಿದುವು. ರಾಮನಾಥನಿಗೆ ಸಂಕಟವಾಗಿ ಹೋಯಿತು..... ಇನ್ನು ಇವರೆಲ್ಲರ ಪ್ರೇಮಸಹಾನುಭೂತಿಗಳು ತನ್ನ ಮೇಲೆ ಉಳಿಯಬಹುದೆ? ....ಮುದ್ದುಮೋಹನನ ಗತಿಯೇನು ? ಅವರ ಮಾತು ಮನ್ನಿಸದೆ, ಅವರಿಗೆ ಉಪಯೋಗವಾಗದೆ ಅವರ ಉಡಿಯಲ್ಲಿ ಮಗುವನ್ನು ಹಾಕಿ ತಾನು ಮತ್ತೆ ಫಕೀರನಂತೆ ಹೋಗುವುದು ಒಳ್ಳೇದಾದೀತೆ ? ಅವರೇನೆಂದುಕೊಂಡಾರು? . ಹಾಗಾದರೆ ಮೋಹನನನ್ನು ಜೊತೆಗೆ ಕರೆದುಕೊಂಡು ಹೋಗುವುದೆ ? ಕರೆದು ಕೊಂಡು ಹೋದರೆ ಮುಂದೇನು ? ಮೋಹನನ ಹೊಟ್ಟೆ-ನೆತ್ತಿ ನೋಡುವವ ರಾರು ? ವಿದ್ಯಾ ಜೋಪಾನ ಮಾಡುವಳೆ ? ಉರಿದೇಳಬಹುದು ಮೋಹನನ ಮೋರೆ ನೋಡಿದರೆ. ಹಾಗಾದರೆ ?........ಹಾಗಾದರೆ ?........ಹೌದು. ಛಬೆ ನೋಡಿಕೊಂಡು ಹೋಗಬಹುದು. ಮೋಹನನು ಬಾಳನೊಂದಿಗೆ ಆಟ-ವಾಡುತ್ತ ಇರಬಹುದಲ್ಲ ? ಹೌದು. ಚಂದ್ರಹಾಸನಂತೆ ಮೋಹನನೂ ನೆರೆ-ಮನೆಯವರ ನೆರವಿನ ನೆಳಲಲ್ಲೇ ಬೆಳೆಯಲಿ !

........ಸರಿ ಮರುದಿನ ಮುಂಬಯಿಗೆ ಹೊರಡುವುದು. ಮೋಹನ-ನನ್ನು ಕರೆದೊಯ್ಯುವುದು. ಜಾನಕಿಯ ಮನೆಗೊಮ್ಮೆ ಕೊನೆಯ ಸಲ ನಮಸ್ಕಾರ ಹೇಳುವುದು. ಕ್ಷಮಾಯಾಚನೆ ಮಾಡಿ ಬೀಳ್ಕೊಂಡು ಬಿಡು-ವುದು. ಹೌದು ಇದರ ಹೊರತು ಬೇರೆ ಉಪಾಯವಿಲ್ಲ ! ಇದ್ದ ಸಂಗತಿ ಯನ್ನು ಹೇಳಿಬಿಟ್ಟರೆ ಮುಂದೇನು ಗತಿ ? ಶಾರದೆಯ ಕೈ ಹಿಡಿಯುವ ಮಾತಂತೂ ದೂರೇ ಉಳಿಯಿತು. ಸುದ್ದಿ ಅಣ್ಣ ಅತ್ತಿಗೆಯರಿಗೆ ತಿಳಿಯ-ಬಹುದು........ತಿಳಿದರೇನಾಯಿತು. ಛೆ. ಬೇಡ. ಸುದ್ದಿಯನ್ನು ಒಡೆಯ ತಕ್ಕದ್ದಲ್ಲ............

'....ಹೌದು. ನಾ ಅವ್ವನ ಕಡಿಂದ ವಚನ ತೊಗೊಂಡೀನಿ ಶಾರದಾನ್ನ ನಿಮಗs ಕೊಡಬೇಕು ಅಂತ. ಒಲ್ಲೆ ಅನಬ್ಯಾಡ್ರಿ. ನನಗ ಸವತಿ, ಬರೂದರ-ಕಿಂತಾ ತಂಗಿ ಬಂದಾಳ ಅಂಬೂ ಸಮಾಧಾನ ಇರತದ........ಜಾನಕಿ ಸ್ವತಃ ಮುಂದರಿದು ಮದುವೆ ನಡಸಿದ್ದಾಳೆ. ತಾನೇ ನಿಂತು ಉರುಟಣಿ ಮಾಡಿಸು ತ್ತಿದ್ದಾಳೆ ಶಾರದೆಯ ಕೈಯಿಂದ........ಎಂತಹ ಸಂಶಯವೃತ್ತಿಯ ಜಾನಕಿ

ತಾನೇ ನಿಂತು ಎರಡನೆಯ ಮದುವೆ ಮಾಡಿಸುತ್ತಿದ್ದಾಳಲ್ಲ ಎಂದು ರಾಮನಾಥನಿಗೆ ಆಶ್ಚರ್ಯ. ಶಾರದೆ ಜಾನಕಿಯ ಸಣ್ಣ ಆವೃತ್ತಿಯಾಗಿ ಮತ್ತೆ ಉರುಟಣೆ ಮಾಡುತ್ತಿರುವಂತೆ ಕಾಣುತ್ತದೆ. ಅದೇ ನಾಚಿಗೆ, ಅದೇ ಮಂದಸ್ಮಿತ, ಅವೇ ಕಣ್ಣು, ಅದೇ ಮೂಗು-ತದ್ರೂಪ ಜಾನಕಿಯೆ! ಹೀಗೆಂದರೂ ಜಾನಕಿಯೇ ಸಾಕ್ಷಾತ್ ಅಲ್ಲ ಸಾಕ್ಷಾತ್ ಜಾನಕಿ ಉರುಟಣೆ ಮಾಡಿಸಲಿಕ್ಕೆ ನಿಂತಿದ್ದಾಳೆ. ಜಾನಕಿಗೆ ಒಂದು ಕಣ್ಣಲ್ಲಿ ಆನಂದಾಶ್ರು, ಇನ್ನೊಂದು ಕಣ್ಣಲ್ಲಿ ದುಃಖಾಶ್ರು! ಎರಡೂ ಕಣ್ಣು ಒರಸಿಕೊಳ್ಳುತ್ತ ತಂಗಿಗೆ ಉಡಿ ತುಂಬುತ್ತಿದ್ದಾಳೆ; ಮನೆ ತುಂಬಿಸಿ ಕೊಡುತ್ತಿದ್ದಾಳೆ. ಶಾರದೆಯ ಕಣ್ಣಲ್ಲಿಯೂ ನೀರು!...............

ರಾಮನಾಥ ಫಕ್ಕನೆ ಗಾಬರಿಯಾಗಿ ಕಣ್ಣು ತೆರೆದ. ಶಾರದೆಯ ಕಣ್ಣಲ್ಲಿ ನೀರು! ಚಹದ ಕಪ್ಪನ್ನು ಟೇಬಲ್ ಮೇಲಿಟ್ಟು ಮೇಲೆ ಬಸಿ ಮುಚ್ಚಿ ಹೋಗುತ್ತಿದ್ದಳು. ಬಸಿಯ ಸಪ್ಪಳವಾಯ್ತು. ರಾಮನಾಥನಿಗೆ ಫಕ್ಕನೆ ಎಚ್ಚರವಾಯ್ತು. ಗಾಬರಿಗೊಂಡು ಎದ್ದವನೆ ಶಾರದೆಯ ಮುಖ ನೋಡಿ 'ಎಷ್ಟು ಹೊಡದದವ್ವಾ ಶಾರವ್ವಾ?' ಎಂದ.

'ಯೇಳೂವರಿ.' ಶಾರದಾ ಮೆಲ್ಲನೆ ಪಾವಟಿಗೆಯ ಬಾಗಿಲಕ್ಕೆ ಬಂದಳು.

'ಇಲ್ಲಿ ಬಾ ಶಾರದಾ,' ರಾಮನಾಥ ಮೆಲ್ಲನೆ ಕರೆದ.

ಶಾರದೆ ನಿಲ್ಲಲಿಕ್ಕೆ ಧೈರ್ಯವಿಲ್ಲ, ಹೋಗಲಿಕ್ಕೆ ಮನಸ್ಸಿಲ್ಲ.

'ಬಾ ಶಾರದಾ. ನಾಚಿಗೋಬೇಡ ಬಾ.'

ಕಣ್ಣೊರಸಿಕೊಳ್ಳುತ್ತ ಶಾರದಾ ಸುಮ್ಮನೆ ನಿಂತಳು. ರಾಮನಾಥನ ಹೃದಯದಲ್ಲಿ ಕಳವಳವಾಯಿತು.

'ಹೇಳು, ಕಣ್ಣಾಗ ನೀರು ಯಾಕ?'

'ಮೋನ್ಯಾಗ ಮತ್ತ ವೈ ಸ್ವಲ್ಪ ಬಿಸಿ ಆಗ್ಯಾವ. ಮ್ಯಾಲೆ ಸುದ್ಧಾ ಎದ್ದಿಲ್ಲಾ. ಅವ್ವ ಅತಗೋತ ಕೂತಾಳ.'

'ಆಂ?' ಗಡಬಡಿಸಿಕೊಂಡು ಎದ್ದು ನಿಂತ ರಾಮನಾಥ. ಮುಖ ತೊಳೆಯಲಿಲ್ಲ. ಚಹ ಕುಡಿಯಲಿಲ್ಲ ಶಾರದೆಯನ್ನು ಹೆಚ್ಚಿಗೆ ಮಾತಾಡಿಸದೆ ಧಡಧಡ ಪಾವಟಿಗೆಗಳನ್ನಿಳಿದು ಧಾವಿಸಿ ಬಂದ.

'ಮೋನೀಽಽ' ಮೋನಿಗೆ ಸ್ವಲ್ಪ ಹೆಚ್ಚಿನ ತಿಳಿವಳಿಕೆಯಿದ್ದರೆ ಕಣ್ಣೀರು

ಬರಬೇಕು, ಅಷ್ಟೊಂದು ದೈನ್ಯಾಸದಿಂದ ಮೋನಿಯನ್ನು ಮಾತನಾಡಿಸಿದ ರಾಮನಾಥ. ಮೋನಿ ರಾಮನಾಥನನ್ನು ನೋಡದೆ—'ಚಾಲಕ್ಕಾ' ಎಂದು ಶಾರಕ್ಕನನ್ನು ಅಂಗಲಾಚಿ ಕರೆಯಹತ್ತಿದನು.

'ಬಾರವಾ ಶಾರಕ್ಕಾ ನೀನೂ ಕೂಡ ಬಾ ಸ್ವಲ್ಪ ಹತ್ತೀಲೆ.' ಅಂತೂ ಶಾರಕ್ಕ ಬಂದು ಹತ್ತಿರ ಕೂತಳು. ಮೋಹನ 'ಕರಕೋ' ಎಂದು ಕೈ ಮೇಲೆ ಮಾಡಿದ. ಶಾರಕ್ಕ ಮೆಲ್ಲನೆ ಎತ್ತಿಕೊಂಡಳು

'ಯಾಕ ಅಜೀರ್ಣ ಏನಾರೆ ಆಗೇದೇನು? ಏನಾರ ತಿಂದಗಿಂದಾ-ನೇನು?' ರಾಮನಾಥ ರುಕ್ಮಿಣಿಬಾಯರನ್ನು ಕೇಳಿದ. ರುಕ್ಮಿಣಿಬಾಯಿ ಅಪರಿಚಿತರಂತೆ ಆಚೆಗೆ ಮುಖ ತಿರುವಿ, 'ಏನೋ ಎಂತೊ' ಎಂದರು. ಈ ಉದಾಸೀನ ಉತ್ತರದಿಂದ ರಾಮನಾಥ ಸಂಕಟವೆತ್ತು ಚೀರಿಕೊಳ್ಳುವಷ್ಟು ನೊಂದುಕೊಂಡ. ಯಾವ ಮಾತೂ ಆಡದೆ ಶಾರದೆಯ ಬಗಲೊಳಗಿಂದ ಮೋಹನನನ್ನು ಎತ್ತಿಕೊಂಡು ಬರಿ ಅಂಗಿಯ ಮೇಲೇ ಡಾಕ್ಟರರ ಕಡೆಗೆಂದು ನಡೆದ. ಶಾರದೆ 'ಅಂಗಿ-ಟೊಪ್ಪಿಗೆ ಹಾಕಿ ಕೊಡತೀನಿ ಮೋನ್ಯಾಗ' ಎಂದು ಮೆಲ್ಲಗೆ ನುಡಿದಳು.

'ಇರ್ಲಿ, ಇರ್ಲಿ....' ಉತ್ತರಕೊಡದೆ ಹೋಗುವುದು ತೀರ ಉದ್ಧಟ ಆತನವಾದೀತೆಂದು ರಾಮನಾಥ ಶಾರದೆಗೆ ಉತ್ತರ ಹೇಳಿ ಮೋಹನನನ್ನು ಎತ್ತಿಕೊಂಡು ಹೋದ. ಅಷ್ಟರೊಳಗೆ ಶಾರದೆ ಮೋಹನನ ತಲೆಯ ಮೇಲೆ ಒಂದು ಮಫ್ಲರ್ ಹೊಚ್ಚಿದ್ದಳು....ಹಾದಿಯೊಳಗೆಲ್ಲಾ ನಸುಕಿನ ಕನಸಿನದೇ ವಿಚಾರ. ವಿಚಿತ್ರವಾದ ಕನಸು..! ಜಾನಕಿಯೇ ನಿಂತುಕೊಂಡು ಶಾರದೆಯಿಂದ ಉರುಟಣೆ ಮಾಡಿಸುತ್ತಿದ್ದಳು! ಎಂತಹ ಔದಾರ್ಯ ಜಾನಕಿಯದು! ಜಾನಕಿ ಸತ್ತುಹೋಗಿರುವಳೆಂಬ ಕಲ್ಪನೆಯೇ ಆಗುವಂತಿಲ್ಲ ರಾಮನಾಥನಿಗೆ. ಇದೇ ಕನಸೇ ಕೊನೆವರೆಗೂ ಉಳಿಯಬಾರದಾಗಿತ್ತೆ ಎನಿಸಿತು ರಾಮನಾಥನಿಗೆ. ಶಾರದೆಯಿಂದ ಉರುಟಣೆ ಮಾಡಿಸಿಕೊಳ್ಳುತ್ತಿದ್ದವನು ಅದೇ ಸಕ್ಕರೆಯ ಸವಿಯಲ್ಲಿ ನಿದ್ರಿಸುತ್ತಿದ್ದಾಗ ಕಪ್ಪುಬಸಿಯ ಸಪ್ಪಳಕ್ಕೆ ಎದ್ದು ಕಣ್ತೆರೆದಾಗ ಶಾರದೆ ಎದುರಿಗೇ ಇದ್ದಾಳೆ, ಆದರೆ ಜಾನಕಿಯಲ್ಲ. ಶಾರದೆ ಕುಮಾರಿಯಾಗಿಯೇ ಇದ್ದಾಳೆ!....ಹೌದು ಜಾನಕಿಯ ಆತ್ಮ ತನ್ನನ್ನು ಸುತ್ತುತ್ತಿರಬಹುದೆ?.... ಇದೊಂದು ಜಾನಕಿಯ ವಾಸನೆ ಇದ್ದಿರಬಹುದೆ?....ಛೆ. ಜಾನಕಿ ವಾಸನಾ-

ಬದ್ಧ ಜೀವಿಯಾಗಿದ್ದಿರಲಾರಳು....ಆದರೆ ಗಂಡನ ಮೇಲಿನ ಮೋಹವೇನು ಅಲ್ಪವೆ ಜಾನಕಿಯದು ?....ರಾಮನಾಥ ಶಾರದೆಯ ಕೈಹಿಡಿಯಬೇಕೆಂದು ಜಾನಕಿ ಬಯಸಿರಬಾರದೇಕೆ ?....ಹೌದು ಬಯಸಿದ್ದಿರಬೇಕು, ಹಾಗೆ ರುಕ್ಮಿಣಿ ಬಾಯರಿಗೆ ವ್ಯಕ್ತಮಾಡಿಯೂ ತೋರಿಸಿದ್ದಾಳಲ್ಲ. ಇನ್ನು ಜಾನಕಿಯ ಇಚ್ಛೆಯನ್ನು ಹೇಗೆ ಪೂರೈಸುವುದು ?....ವಿದ್ಯಾವತಿಯನ್ನು ಹೃದಯಸಿಂಹಾಸನದಿಂದ ತಳ್ಳಿಬಿಡುವುದೆ ? ಛೆ ! ಅನ್ಯಾಯ. ಈ ಅನ್ಯಾಯಕ್ಕೆ ಅಂಜದಿದ್ದರೂ ದ್ವಿಪತ್ನೀ ಕಾಯಿದೆಯಿದೆಯಲ್ಲ !....ಇನ್ನು ಮುಂಬಯಿಗೆ ಹೋಗುವುದೆ ಬಿಟ್ಟುಕೊಟ್ಟು ಬಿಡಬಾರದೇಕೆ? ವಿದ್ಯಾವತಿಗಾದರೂ ಎಲ್ಲಿ ಬೇಕಾಗಿದೆ ರಾಮನಾಥನ ಸಂಬಂಧ ?....ರೇಡಿಯೋದಲ್ಲಿ ಮತ್ತೊಬ್ಬ ನಾಯಕನನ್ನು ಆರಿಸಿಕೊಳ್ಳಬಹುದಲ್ಲ ?....ಆದರೆ !....ಎಂತಹ ಧರ್ಮಸಂಕಟ !........ಶಾರದೆಯ ಮದುವೆಯನ್ನು ತಪ್ಪಿಸುವುದು ಹೇಗೆ ?....ಅಥವ ಶಾರದಾನಾಟಕವನ್ನು ಹೂಡಿಬಿಡುವುದೆ ?........ಹೂಂ ಎಂದುಬಿಟ್ಟರೆ ರುಕ್ಮಿಣಿಬಾಯರಿಗೂ ಎಷ್ಟು ಸಂತೋಷವಾಗಬೇಡ? ಗೋಪಾಳರಾಯರಿಗೆಷ್ಟು ಸಂತೋಷವಾಗಬೇಡ ?.... ಆದರೆ ತನ್ನ ನೈತಿಕ ನೆಲೆಗಟ್ಟೇನು ?....' ಏಕಲಜ್ಜಾಂಪರಿತ್ಯಜ್ಯ ಸರ್ವತ್ರ ವಿಜಯೀ ಭವ ' ಎನ್ನುವಂತಾಗಬಾರದಲ್ಲವೆ ?........

ಡಾಕ್ಟರರಿನ್ನೂ ಬಂದಿರಲಿಲ್ಲ. ಟೇಬಲ್‌ಮೇಲಿನ ವರ್ತಮಾನಪತ್ರ ನೋಡುತ್ತ ಕೂತ ರಾಮನಾಥ. ಹಿಂದಿನ ದಿನದ ಟಾಯಿಮ್ಸ್ ಪತ್ರಿಕೆ. ವಿಶೇಷ ಆಸಕ್ತಿಯಿಲ್ಲದೆ ಒಂದೊಂದೆ ಪುಟ ತೆರೆಯಹತ್ತಿದ........

'Let this white and pure soap with the lovely perfume keep your skin lovely.' ಲಕ್ಸ ಸಾಬಾಣದ ಜಾಹೀರಾತು. ಅದರ ಬೆನ್ನಿಗೇ ಒಂದೇ ಮುಖದ ಮೂರು ಚಿತ್ರಗಳು ಒಂದಕ್ಕಿಂತ ಒಂದು ಆಕಾರದಲ್ಲಿ ಕಿರಿದಾಗುತ್ತ ಹೆಚ್ಚೆಚ್ಚು ಮಸುಕಾದಂತೆ ತೋರುತ್ತಿತ್ತು. ಎಲ್ಲಕ್ಕೂ ಮುಂದಿನ ಮುಖವೇ ' ಲಕ್ಸ ' ದ ಧವಲಕಾಂತಿಯಿಂದ ಕಂಗೊಳಿಸುತ್ತಿತ್ತು. ಹೌದು ವಿದ್ಯಾವತಿಯದೆ ಆ ಮುಖ !........ಹುಂ ! ಮುಖವನ್ನು ಮಾರಿಕೊಂಡಳೆ ವಿದ್ಯಾ?....ಮುಖದೊಂದಿಗೆ ಮರ್ಯಾದೆಯನ್ನೂ ಮಾರಿಕೊಂಡು ಬಿಟ್ಟಳೆ ?.. ಆ ದಿನ ವೇಶ್ಯೆಯಾಗಿ ರೇಡಿಯೋದಲ್ಲಿ ಪಾತ್ರಮಾಡಿದಳು ! ಮನೆತನಸ್ಥರ ಇರುವಿಕೆಯೇ ಇದು ?....ಆ ದಿನ ವಿದ್ಯಾ ಆಡಿದ ಮಾತುಗಳು ಮತ್ತೆ ಮುಳ್ಳಾಗಿ

ಚುಚ್ಚಿದುವು ರಾಮನಾಥನ ಅಂತಃಕರಣದಲ್ಲಿ. ಕಲೆಯ ಭಕ್ತಳಾದ ವಿದ್ಯಾ ಚಿತ್ರಕಾರನೊಬ್ಬನಿಗೆ 'ಪೋಜ್' ಕೊಡಲು ಪ್ರಯತ್ನಿಸುತ್ತಿದ್ದಳು !....ಚಿತ್ರ ಕಾರನು ಅವಳ ಅಂಗಾಂಗಗಳನ್ನು ಚಿತ್ರಿಸಿದರೂ ಅದು ಕಲೋಪಾಸನೆ ಯಂತೆ! ಇಂಥ ಕಲೋಪಾಸನೆ ರಾಮನಾಥನಿಗೆ ವ್ಯಭಿಚಾರವಲ್ಲದೆ ಇನ್ನೇನೂ ಅಲ್ಲ ಎನಿಸಿತು.........

ಡಾಕ್ಟರರು ಬಂದರು.

'ಏನು ಮತ್ತ ಜ್ವರಾ ಬಂದಾವೇನು?' ಡಾಕ್ಟರರು ಕೋಟು ತೆಗೆ-ದಿಡುತ್ತಲೆ ಮಾತನಾಡಿದರು. 'ಯಾಕಪಾ ಮೋಹನ್ ?....ಆಂ? ನಗತಾನ ನೋಡೋ....' ಎಂದು ಮೋಹನನನ್ನು ರಮಿಸಿದರು. ಫ್ಯಾಮಿಲಿ ಡಾಕ್ಟರ ರಿದ್ದುದರಿಂದ ಮೋಹನನ ಪರಿಸ್ಥಿತಿ ಅವರಿಗೆ ಗೊತ್ತಿತ್ತು. ಟೆಂಪರೇಚರ ನೋಡಿದರು. 'ವಿಶೇಷವೇನೂ ಜ್ವರವಿಲ್ಲ. ತೊಂಬತ್ತೊಂಬತ್ತೂವರಿ....' ಎಂದು ಪ್ರಿಸ್ಕ್ರಿಪ್ಶನ್ ಬರೆದು ಕೊಟ್ಟರು.

'ಡಾಕ್ಟರ್, ಈ ಸಲ ಹುಡುಗನನ್ನು ಮುಂಬಯಿಗೆ ಕರೆದುಕೊಂಡು ಹೋಗಬೇಕೆಂದಿದ್ದೇನೆ.'

ಡಾಕ್ಟರರಿಗೆ ಸ್ವಲ್ಪ ಆಶ್ಚರ್ಯವಾಯಿತು. 'ಆದರ ನೋಡಿಕೊಂಬುವವ ರ್‍ಯಾರು ಮೋಹನನ್ನ? ನಿಮ್ಮMother-in-law(ಅತ್ತೆಯವರು) ಬರ್‍ತಾರೇನು?'

'ಇಲ್ಲಾ. ಅಲ್ಲೇ ಬಾಜೂದ ಮನೆಯೊಳಗ ಜೋಡಿಹುಡುಗರು ಇದ್ದಾರ. ಅವರೂ ಬಹಾಳ ಹಚಿಗೊಂಡು ಹೋಗ್ತಾರ.!'

'ಆದರ ಮಿಸ್ಟರ ರಾಮನಾಥ್, ಹೀಂಗ ಎಷ್ಟು ದಿವಸ ಇರುವವರು ನೀವು?....ಮತ್ತೊಂದು ಯಾಕ ಮದಿವ್ಯಾಗಬಾರದು ?....ಏನು, ಮತ್ತ ಮುಂಬಯಿಯೊಳಗ ಎಲ್ಲ್ಯಾರ ನೋಡಿಕೊಂಡೀರೊ? ಅಲ್ಲೇನು 'ಜುಹುದ' ಮ್ಯಾಲೆ, ಬಸ್ಸಿನೊಳಗ, ಮದವಿ ಆಗತಾವಂತ' ಡಾಕ್ಟರರು ತಮ್ಮ ವಿನೋ ದಕ್ಕೆ ತಾವೇ ನಗಹತ್ತಿದರು. ರಾಮನಾಥ ಯಾವುದೂ ಮಾತಾಡದೆ ಸುಮ್ಮನೇ ಇದ್ದ. ಸಹಾನುಭೂತಿಗಾಗಿ ಡಾಕ್ಟರರೊಡನೆ ತಾನೂ ನಗೆಯಲ್ಲಿ ಬೆರೆತ. ರಾಮನಾಥನ ನಗೆಯಿಂದ ಅವನನ್ನು 'Innocent' ಆಗಿ ಭಾವಿಸಿದರು ಡಾಕ್ಟರರು.

ಔಷಧ ತೆಗೆದುಕೊಂಡು 'ಘಾಬರ್‍ಯಾಗೂದೇನು ಕಾರಣಿಲ್ಲ ಹೌದಲ್ಲೊ?' ಎಂದು ಕೇಳಿದ ರಾಮನಾಥ.

'ಕಾರಣಿಲ್ಲ ಖರೆ. ಆದರ ಘಾಬರಿ ಆಗೂದು ನಿಮ್ಮ ಸ್ವಭಾವನs ಅದ.'

' ಅಂದರ ಊರಿಗೆ ಕರಕೊಂಡು ಹೋಗಲಿಕ್ಕೆ ಕೇಳಿದೆ. '

' ಒಂದೆರಡು ದಿವಸ ಔಷಧ ನಡೀಲಿ. ಆವ್ಯಾಲೆ ಕರಕೊಂಡು ಹೋಗಲಿಕ್ಕೆ ಏನೂ ಹರಕತ್ತಿಲ್ಲಾ,—ಅಂದರ ಡಾಕ್ಟರನಾತೇದ್ಲೆ ಹೇಳಬೇಕಾದರ. ' ಫ್ರೆಂಡ್ ' ನಾತೇದಿಂದ ಅಲ್ಲಿ ಕರಕೊಂಡು ಹೋಗಿ ಹ್ಯಾಂಗ ಮಾಡ್ತೀರಿ ಅಂತ ಕೇಳ್ತೇನಿ ?'

' ನೋಡೂಣು, ನೋಡೂಣು ದೇವರಿದ್ದಾನ ! '

ರಾಮನಾಥ ಮೋಹನನನ್ನು ಎತ್ತಿಕೊಂಡು ಕೈಯೊಳಗೆ ಔಷಧದ ಬಾಟಲಿ ತೆಗೆದುಕೊಂಡು ಹೊರಟ. ಡಾಕ್ಟರರ ' ಟಾಯಿಮ್ಸ್ ' ಪತ್ರಿಕೆ ಬಗಲೊಳಗೇ ಇತ್ತು. ಮತ್ತೆ ತಿರುಗಿ ಬಂದು ' ಡಾಕ್ಟರ್ ಕ್ಷಮಿಸಿರಿ, ಪೇಪರು ಮರೆತು ಹಾಂಗs ತೊಗೊಂಡು ನಡದೀನಿ. '

' ಏನು ಇರವಲ್ದ್ಯಾಕ, ಹಳೇದು. ನಿಮಗೇನಾರ ಮಹತ್ವದ ವಿಷಯ ಅದರೊಳಗಿದ್ದರ ಒಯ್ಯಬಹುದು. '

' ಹಾಂಗೇನಿಲ್ಲ. '

ಪೇಪರ ತಿರುಗಿ ಕೊಟ್ಟು ಮನೆಗೆ ಹೋದ.

ರಾತ್ರಿ ಊಟವಾದ ಮೇಲೆ ರಾಮನಾಥ ಮತ್ತೆ ಮಾತೆತ್ತಿದ: ' ನಾಳೆ ನಾ ಹೊರಡಬೇಕು ಮೇಲಿಗೆ. '

' ನಾಳಿಗೇ ಹೋಗಬೇಕೇನು ? ' ಗೋಪಾಳರಾಯರೆಂದರು.

' ಹೌದು. ನಾಡದ ನಾ ಕೆಲಸಕ್ಕ ಹಾಜರ ಆಗಲಿಕ್ಕೆಬೇಕು. ನಾಡದ ಅಂದರೂ ಎರಡು ತಾಸು ತಡಾ ಆಗೇ ಹೋಗಬೇಕಾಗತದ. '

' ಹೌದು. ಆದರ ಮುಂಜಾನಿ ಊಟದ್ದು ತ್ರಾಸ ಆಗತದ. '

' ಏನಿಲ್ಲಾ. ಲಂಚ್ ಟಾಯಿಮ್‌ನೊಳಗ ಅಲ್ಲೆ 'ಛಾಯಾ' ದೊಳಗ ತೊಗೋತೇನಿ.'

' ಬರೇ ಚಹಾ ಯಾಕ, ಚಪಾತಿನಾರ ಒಂದಿಷ್ಟು ಹಾಕತೀನಿ ! ' ರುಕ್ಮಿಣಿಬಾಯಿ ಗಂಭೀರವಾಗಿ ಮಾತನಾಡಿದರೂ ಅದರೊಳಗೆ ಕಳಕಳಿಯ ಧ್ವನಿಯಿತ್ತು.

' ಇಲ್ಲಾ ' ಛಾಯಾ ' ಅಂದರ ಅಲ್ಲೆ ಊಟಾನೂ ಸಿಗತದ. '

‘ ಅಂತೂ ನಾಳೆ ರಾತ್ರಿ, ಗಾಡಿಯೊಳಗಾರೆ ಬೇಕಲ್ಲಾ ?’ ಗೋಪಾಳ ರಾಯರು ನುಡಿದರು.

‘ ಮೋನ್ಯಾನ್ನ ಕರಕೊಂಡು ಹೋಗಬೇಕಂತೀನಿ. ’

ರುಕ್ಮಿಣಿಬಾಯರಿಗೆ ಈ ಮಾತು ಕೇಳಿ ಗುಂಡು ಬಡಿದಂತಾಯಿತು. ‘ ಏನು ಹೇಳೋಣು ಹೀಂಗಂದರ? ಹುಡುಗನ್ನ ನಾವು ಜ್ವಾಪಾನಾ ಮಾಡೋದಿಲ್ಲಾಂತ ನಿಮಗ ಅವಿಶ್ವಾಸ ಇದ್ದರ ಕರಕೊಂಡು ಹೋಗರಿ………… ಮೊದಲ ನಿಮಗs ವನವಾಸ, ಅದರೊಳಗ ಮೂರು ನಾಕು ವರುಷದ ಬತ್ತಿನ್ನ ಕಟಗೊಂಡು. ಅದನ್ನೂ ಇನ್ನ ನಂಬ ಮನಿ ಪಾಲ ಮಾಡೂದಂದರ……..’ ರುಕ್ಮಿಣಿಬಾಯಿ ಬಹಳೇ ಕೆಡುಕೆನಿಸಿಕೊಂಡರು. ಹೆಚ್ಚು ಸಥಿಯಿಂದ ಸಲುಗೆಯಿಂದ ಹೇಳುವುದಕ್ಕೂ ಅನುಮಾನಿಸಿ ‘ ನಮಗೂ ಹೆಚ್ಚಾಗಿ ಹೇಳೋದಕ್ಕ ಸಥಿಯಿಲ್ಲಾ. ನಮ್ಮ ವಸ್ತೂನ ಇಲ್ಲಾ ಅಂದ ಮ್ಯಾಲೆ ನಮ್ಮದಾರೆ ಹ್ಯಾಂಗ ನಡೀಬೇಕು….ಆದರೇನು ಮಾಡೋದು….ಅಂಗಾಲಿಗೆ ಹೇಸಿಗಿಲ್ಲ, ಅತಃಕರಣಕ್ಕ ನಾಚಿಗಿಲ್ಲಾಂತ ತಡೀಲಾರದ ಮಾತಾಡಬೇಕಾಗತದ…..’

ಶಾರದಾ ಗಾಬರಿಗೊಂಡು ತಾಯಿಯ ಕಡೆಗೊಮ್ಮೆ ರಾಮನಾಥನ ಕಡೆಗೊಮ್ಮೆ ನೋಡುತ್ತ, ಬಗಲೊಳಗೆತ್ತಿಕೊಂಡಿದ್ದ ಮೋಹನನನ್ನು ಗಟ್ಟಿಯಾಗಿ ಅಮುಚಿಕೊಂಡಳು- ಮೋಹನನನ್ನು ತನ್ನ ಬಗಲೊಳಗಿಂದ ಯಾರೂ ಬಿಡಿಸಿಕೊಳ್ಳಬಾರದೆಂದೇನೊ.

‘ ನೀವು ಹಾಂಗೇನೂ ತಪ್ಪು ತಿಳಕೋಬ್ಯಾಡಿರಿ. ಅಂತಃಕರಣ ಎಲ್ಲಿ ಹೋಗತದ ? ಮಗಳು ಇಲ್ಲಾಂತ ಮೊಮ್ಮಗ ಸುಳ್ಳಾದಾನೇನು ?’ ರಾಮನಾಥ ಅತ್ತೆಯವರಿಗೆ ತಿಳಿಸಿ ಹೇಳಲು ಪ್ರಯತ್ನಿಸಿದ.

ಇದೇ ಮಾತನ್ನೆ ಎತ್ತಿಕೊಂಡು ಗೋಪಾಳರಾಯರೆಂದರು:

‘ ರಾಮನಾಥರಾವ್, ಮುದುಕಾಗಿ ನನಗ ನಾಚಿಗಿಲ್ಲಾಂತ ನೀವಂದರೂ ಚಿಂತಿಲ್ಲಾ. ಹೆಣ್ಣುಮಕ್ಕಳ್ನ ಹಡೆದ ತಪ್ಪಿಗೆ ನಾಚಿಗಿ ಬಿಟ್ಟ ಮಾತಾಡಬೇಕಾಗತದ. ಅದರೊಳಗೂ ಅಂತಃಕರಣದ ವಿಷಯಾ ಅಂದಮ್ಯಾಲೆ ಮತ್ತೂ ಮತ್ತೂ ಹೇಳಬೇಕಾಗತದ. ಆದಕ್ಕಂತ ಇನ್ನೂ ಒಮ್ಮೆ ಹೇಳತೀನಿ. ನಾ ಕೇವಲ ಹುಡುಗಿ ಬೆಳದಾಳ ಹ್ಯಾಂಗಾರ ನಿಮ್ಮ ಕೊಳ್ಳಾಗ ಕಟ್ಟಬೇಕೂ ಅಂತ ಹೇಳೋದಿಲ್ಲ ನಮ್ಮ ನಿಮ್ಮ ಸಂಬಂಧ ಮತ್ತ ಬೆಳಿಸಿಕೊಂಢಾಂಗ ಆಗತದ,

ಮುಖ್ಯ ಅಂದರ ನಮ್ಮ ಮೋನ್ಯಾಗ ಪರದೇಶಿತನಾ ಅಂಬೂದು ತಪ್ಪತದ ಅಂತ ನಮ್ಮ ಅಂಜೋಣಾ....'

'ಮೋನ್ಯಾಗ ಪರದೇಶಿತನಾ ತಪ್ಪತದ'–ಎಂಬ ಮಾತು ರಾಮನಾಥನ ಅಂತರಂಗವನ್ನೂ ತಲ್ಪಿ ಮನಸ್ಸನ್ನು ಬಡಿದೆಬ್ಬಿಸಿತು. ಬಹಳ ವಿಚಾರಕ್ಕೊಳಗಾದ. ಕಾಸಿದ ತುಪ್ಪದ ಪರಿಸ್ಥಿತಿಯಾಯಿತು. ಅವನ ಮೌನಮುದ್ರೆಯನ್ನೆ ಕುತೂಹಲದಿಂದ ನೋಡುತ್ತ ಉತ್ತರವನ್ನು ಕಾಯ ತೊಡಗಿದರು ರುಕ್ಮಿಣಿಬಾಯಿ. ಶಾರದೆ ಅವರ ಕಣ್ಣು ತಪ್ಪಿಸಿ ತಲೆಬಾಗಿಲ ಹಾಕುವ ನೆವ ಮಾಡಿಕೊಂಡು ಪಡಸಾಲೆಗೆ ನಡೆದಳು. ರಾಯರೂ ರಾಮನಾಥನ ಮುಖವನ್ನೆ ನೋಡುತ್ತಲಿದ್ದರು. ಎಷ್ಟೋ ಹೊತ್ತಾದ ಮೇಲೆ ರಾಮನಾಥ ಏನೂ ಹೇಳಲಿಕ್ಕೆ ಸಮರ್ಥನಾಗದೆ 'ಒಳ್ಳೇದು, ವಿಚಾರ ಮಾಡಿ ತಿಳಸ್ತೇನಿ.' ಎಂದುಬಿಟ್ಟ. ಸದ್ಯಕ್ಕಂತೂ ಬಿಕ್ಕಟ್ಟಿನಿಂದ ವಚನಬದ್ಧನಾಗದೆ ಪಾರಾಗುವುದಕ್ಕೆ ಇದರ ಹೊರತು ಇನ್ನೇನೂ ಉಪಾಯ ತೋರಲಿಲ್ಲ.

ರಾಯರಿಗೆ, ಅವರ ಹೆಂಡತಿಗೆ ಅಷ್ಟೆ ಹಗುರೆನಿಸಿತು. ಕತ್ತಲೆಯಲ್ಲಿ ಒಂದು ಬೆಳಕಿನ ಕಿರಣ ಹೊಳೆದಂತಾಯಿತು. ಇದನ್ನೆ ಹೆಚ್ಚಿಗೆ ಕೆಣಕಿ ಉಪಯೋಗವಿಲ್ಲವೆಂದು ಗಂಡಹೆಂಡಿರು ಮತ್ತೆಲ್ಲಿ ನಿರಾಶೆಯ ಕಾವಳ ಕವಿದೀತೊ ಎಂದು ಅಂಜಿ ಅಷ್ಟಕ್ಕೆ ಸುಮ್ಮನಾದರು. ವಿಷಯವನ್ನೆ ಬದಲಿಸಿ 'ಮೋನ್ಯಾನ್ನ ಈಗೇನು ಕಳಿಸೋದು ಬ್ಯಾಡ. ಸುಳ್ಳ ಹುಚ್ಚುಸ್ಥಾಂಗ ಅವನ ಕರಕೊಂಡು ಹೋಗೋ ಗೋಜಿಗೆ ಹೋಗಬ್ಯಾಡ್ರಿ.'

'ಇಲ್ಲಾ, ಅಲ್ಲೆಲ್ಲಾ ಮಾಂಟೆಸರಿ ಸ್ಕೂಲ್ ಅವ. ಯಾವದೇ ಕಾಳಜಿ ಮಾಡಧಾಂಗ ಹುಡಗರ್ನ ಜೋಪಾನ ಮಾಡತಾರ ಅವರು. ಊಟ, ಉಡಿಗಿ, ಅವಕ್ಕ ಹಾಸಿಗಿ-ಹುಪ್ಪಡಿ ಯಚ್ಚ್ಯಾವತ್ತೂ ನೋಡಿಕೋತಾರ....ಇಲ್ಲದಿದ್ದರ ನನ್ನ ರೂಢೀನ ತಪ್ಪಿ ಹೋಗತದ ಅವಗ....ಹಿಂದಾಗಡೆ ಸೋರಾಬ್ ರುಸ್ತುಂರ ಹಾಂಗ ತಂದಿ ಮಗನ ದರ್ಶನಾನೆ ಇಲ್ಲಧಾಂಗ ಆದೀತು....ಇದಕ್ಕ ನೀವು ಸುಳ್ಳೇ ಅಡ್ಡ ಬರಬ್ಯಾಡ್ರಿ. ಯಾವುದೇ ರೀತಿ ನಿಮ್ಮ ಮ್ಯಾಲೆ ಬ್ಯಾಸರ ಮಾಡಿಕೊಂಡು ನಾ ಕರಕೊಂಡು ಹೋಗೋದಿಲ್ಲ ಹುಡುಗನ್ನ. ಆದರ ನನ್ನ ಅಭ್ಯಾಸ ಆಗಲಿ, ಮುಂಬಯಿಯಂಥಾ ಜಾತ್ರಿಯೊಳಗ ತಪ್ಪಿಸಿಗೊಂಡ ಬಂದಾಪ್ರ ಹಾಂಗ ಇರೋದಕ್ಕಿಂತ ಹುಡುಗನ ಮಾರ್ಯಾರ ನೋಡಲಿಕೆ

ಸಿಗತದ.....' ರಾಮನಾಥನಿಗೂ ಹೆಚ್ಚಿಗೆ ಹೇಳುವುದು ಅಸಾಧ್ಯವೆನಿಸಹತ್ತಿ ಅಷ್ಟಕ್ಕೆ ಮಾತು ಮುಗಿಸಿಬಿಟ್ಟ.

ಮರುದಿನವೆಲ್ಲಾ ಶಾರದೆಗೆ ಎಲ್ಲಾ ಬರಿದು, ಬರಿದು ಎನಿಸತೊಡಗಿತು. ಮೋಹನನನ್ನು ಎತ್ತಿಕೊಂಡ ಗೊಮ್ಮೆ 'ಮೋಹನನನ್ನು ಎತ್ತಿಕೊಳ್ಳುವುದು ಇನ್ನು ಆರೇ ತಾಸು' 'ಮೋಹನನನ್ನು ಎತ್ತಿಕೊಳ್ಳುವದು ಇನ್ನು ನಾಲ್ಕೇ ತಾಸು....' ಎನ್ನುತ್ತ ಹುಚ್ಚಳಂತಾಗಿಹೋದಳು.

'ಮೋನ್ಯಾನ ಅರಿವಿ ಎಲ್ಲಾ ನನ್ನ ಬ್ಯಾಗಿನೊಳಗ ಹಾಕಿಬಿಡವಾ ಶಾರದಾ' ಊಟಕ್ಕೆ ಕೂಡುವ ಮುಂದೆ ಹೇಳಿದ ರಾಮನಾಥ. ಶಾರದೆಗೆಷ್ಟು ದುಃಖ! ತಟ್ಟನೆ ಕಣ್ಣೊಳಗಿನಿಂದ ಒಂದೆರಡು ಹನಿ ಪಳಕ್ಕನೆ ಉದುರಿದುವು. ರಾಮನಾಥ ಊಟಕ್ಕೆ ಕೂತಾಗ ಮೋಹನನ ಅರಿವೆಗಳನ್ನು ಕೂಡಿಸಹತ್ತಿದಳು ಶಾರದೆ. ಆಡಿತೋರಿಸದಂತಹ ಕೆಟ್ಟ ವಿಚಾರಗಳು ಅವಳ ತಲೆಯಲ್ಲಿ ಸುಳಿಯ ಹತ್ತಿದುವು. ರುಕ್ಮಿಣಿಬಾಯರೇಕೊ ಹೊರಗೆ ಬಂದಾಗ ಮೋಹನನ ಅರಿವೆಗಳನ್ನೆಲ್ಲಾ ಕೂಡಿಡುತ್ತ ಶಾರದಾ 'ನಮ್ಮ ಮೋನೀ ಕಡೀ ಸೇವಾ ಇದು!' ಎಂದಳು. ರುಕ್ಮಿಣಿಬಾಯರ ಎದೆಗೆ ಬರೆ ಕೊಟ್ಟಂತಾಯಿತು. ಮೆಲ್ಲಗೆ ನುಡಿದರು :

'ಸಾಕು ತಗಿ. ಏನಂತ ಹಾಂಗ ಹುಚ್ಚುಚ್ಚಾರ ಮಾತಾಡಿದರ. !'

'ಮತ್ತೇನು? ಇನ್ನ ಯಾರ ಉಡ್ಯಾಗ ಬೀಳತಾನೊ ಏನೋ!' ದುಃಖ ಒತ್ತರಿಸಿ ಬಂದು ಶಾರದೆ ಅಲ್ಲಿ ನಿಲ್ಲಲಾರದೆ ಗೋಡೆಗೇರಿಸಿದ ಹಾಸಿಗೆ ಸುರುಳಿಗಳಿಗೆ ಆತು ನಿಂತು ಬಿಕ್ಕಿಬಿಕ್ಕಿ ಅಳಹತ್ತಿದಳು. ರುಕ್ಮಿಣಿಬಾಯರಿಗೂ ವಿಲಕ್ಷಣ ಸಂಕಟವಾಯಿತು.

'ಇನ್ನೊಂದು ಮಾತು ಹೇಳಿ ನೋಡವ್ವ?' ಶಾರದೆ ಬಹಳ ಧಿಟ್ಟಳಾಗಿ ಮಾತಾಡಿದಳು. ರುಕ್ಮಿಣಿಬಾಯಿ ದಿಗಿಲಾಗಿ ಸುಮ್ಮನೆ ಇದ್ದರು. ಶಾರದೆ ತನ್ನ ಕೊನೆಯ ಸಮಾಧಾನದ ಸಾಧನವೆಂದು ಜಾನಕಿ ಅತ್ಯಂತ ಸಂಭ್ರಮದಿಂದ ಹೊಲಿಸಿಟ್ಟಿದ್ದ ಮೋಹನನ ಮಖಮಲ್ಲಿನ ಕೋಟನ್ನು ತೆಗೆದಿಟ್ಟುಕೊಂಡಳು. ಅದು ಆಗಲೆ ಮೋಹನನಿಗೆ ಬಹಳ ಲಂಡವಾಗತೊಡಗಿತ್ತು. ತಾಯಿ-ಮಗನ ಗುರುತು ಅದೊಂದರಲ್ಲೇ ಇರಲೆಂದು ಆ ಕೋಟನ್ನು ತನ್ನ ಟ್ರಂಕಿನೊಳಗಿಟ್ಟುಕೊಂಡಳು.,.......... ಅಥವ ಊರಿಗೆ ಹೋಗುವ ಹೊತ್ತಿಗೆ ಮೋಹನನನ್ನು

ಎಲ್ಲಿಯಾದರೂ ಗುಡಿಗುಂಡಾರಕ್ಕೆ ಎತ್ತಿಕೊಂಡು ಹೋಗಿಬಿಟ್ಟರೆ ಹೇಗೆ ? ರಾಮನಾಥ ಹೇಗಾದರೂ ಮೇಲಿಗೆ ತಪ್ಪದೆ ಹೋಗಲೇಬೇಕು. ಝುಕ್ಕಿಸದೆ ಹೋಗುತ್ತಾರೆ. ನಾಲ್ಕು ಬೈದರೂ ಅಡ್ಡಿಯಿಲ್ಲ ತನ್ನ ಮೋಹನ ತನಗುಳಿಯುವನಲ್ಲಾ ಎಂಬ ಹುಚ್ಚುಭಾವನೆಯೂ ಬಂದು ಹೋಯಿತು. ಆದರೆ ಅಷ್ಟು ಸಾಹಸ ಅವಳಿಂದ ಸಾಧ್ಯವಾಗಿ ತೋರಲಿಲ್ಲ.

ಹೊರಗೆ ಟಾಂಗಾ ಬಂದು ನಿಂತಿತ್ತು. ಶಾರದಾ ಮೋಹನನ ಮೋರೆ ತೊಳಿಸಿ, ತಲೆಗೆ ವಾಸನೆಯ ಎಣ್ಣೆ ಹಚ್ಚಿ ಕ್ರಾಫ್ ಹಿಕ್ಕಿದಳು. ಮೇಲೆ 'ನೇವ್ಹಿ ಹ್ಯಾಟ' ಹಾಕಿದಳು. ಹೊಸ ಜೆಚ್ಚನ್ನ ಕೋಟು ಚೆಣ್ಣ ಹಾಕಿದಳು. 'ಅವ್ವಗ ಹೋಗಿಬರ್ತೀನಂತ ನಮಸ್ಕಾರ ಮಾಡಪಾ ಮೋಹನಾ ?' ಎಂದು ಬಗಲೊಳಗಿಂದ ಕೆಳಗಿಳಿಸಿ ಅಜ್ಜಿಯ ಕಾಲಿಗೆರಗಿಸುವ ಮುಂದೆ ಶಾರದೆಯ ಹೃದಯದೊಳಗಿಂದ ಜೀವವೇ ಕೆಳಗಿಳಿದ ಹಾಗಾಯಿತು.

' ಮೋನೀ ನಡೀಪಾ ಟಾಂಗಾದಾಗ. ' ಎಂದು ಎಲ್ಲಾ ಸಿದ್ಧತೆ ಮಾಡಿಕೊಂಡು ರಾಮನಾಥ ಮೋಹನನನ್ನೆತ್ತಿಕೊಳ್ಳಲಿಕ್ಕೆ ಹೋದರೆ, ಮೋಹನನಿಗೆ ಏನೆನಿಸಿತೋ ಏನೋ, ಎಲ್ಲಿಲ್ಲೂ ಶಾರದೆಯ ಬಗಲೊಳಗಿಂದಿಳಿಯದೆ ಅಪ್ಪನ ಕೈ ಕೊಸರಿಕೊಳ್ಳುತ್ತ ಶಾರದೆಯನ್ನು ಅಮುಚಿಕೊಳ್ಳುತ್ತ ಒಲ್ಲೆನೆಂದು ಚೀರಹತ್ತಿದನು. ಶಾರದೆ ಒಳಗೊಳಗೆ ಬಿಕ್ಕುತ್ತ ತಡೆಯಲಾರದೆ ಕೊನೆಗೆ ದನಿ ತೆಗೆದು ದುಃಖಿಸುತ್ತ ಮಾತಾಡದೆ ಮೋಹನನನ್ನು ಜುಲುಮೆಯಿಂದ ತಂದೆಯ ಸ್ವಾಧೀನ ಪಡಿಸಿದಳು....ಸಂಕಟ ತಡೆಯಲಾರದೆ 'ಮೋನೀ, ಇನ್ನ ಖಾನಾವಳಿಯವರ ಕೈಯಿಂದ ಉಣಿಸಿಗೋಬೇಕಪಾ ನೀನು' ಎಂದಳು. ರಾಮನಾಥನಿಗೂ ದುಃಖವಾಯಿತು. ಹೋಗಿಬರುತ್ತೇನೆಂದು ಹೇಳುವುದಕ್ಕೂ ಬಾಯ್ ಬರದೆ, ಮೂಕರೀತಿಯಿಂದ ಅತ್ತಿಮಾವಂದಿರಿಗೆ ನಮಸ್ಕರಿಸಿ ಟಾಂಗಾ ಹತ್ತಿದ.

ಟಾಂಗಾ ಮೆಲ್ಲನೆ ಚಲಿಸಿತು ಕಣ್ಣೊಳಗೆ ನೀರು ಧಾರೆಗಟ್ಟಿ ಸುರಿಯುತ್ತಿದ್ದರೂ ಶಾರದೆ ಟಾಂಗಾ ಕಣ್ಮರೆಯಾಗುವವರೆಗೂ ಅಂಗಳದ ಹೊಸ್ತಿಲದ ಮೇಲೆ ನಿಂತು ಮೋಹನನನ್ನು ನೋಡುತ್ತ ನಿಂತಳು. ಟಾಂಗಾ ಸಂದಿಗೆ ಹೊರಳಿತು.

* * * *

'ಮೋನ್ಯಾನ ಪಾಲಿಗೆ ತಾಯೇ ಇಲ್ಲಧಾಂಗಾತು. ನನ್ನ ಪಾಲಿಗೆ ಮೋನ್ಯಾ ಇಲ್ಲಧಾಂಗ ಆತು' ಶಾರದಾ ಬಿಕ್ಕಿಬಿಕ್ಕಿ ಅಳುತ್ತ ಹಾಸುಗೆಯ ಸುರುಳಿಯ ಮೇಲೆ ತಲೆ ಅಪ್ಪಳಿಸುವಾಗ 'ಸಾಕ ತಗೀ ಏನಂತ ಹಾಂಗ ಇಲ್ಲಿಲ್ಲದ್ದ ಅವಲಕ್ಷಣದ ಮಾತಾಡಿದರ!' ಎಂದು ತಮ್ಮ ವೇದನೆಯನ್ನು ಹತ್ತಿಕ್ಕಿಕೊಂಡು ರುಕ್ಮಿಣಿಬಾಯಿ ಮಗಳಿಗೆ ಬುದ್ಧಿ, ಸಮಾಧಾನ ಹೇಳಿದರು.

'ನೋಡೂಣಂತಲ್ಲಾ, ಈಗೇನೂ ಸಂಬಂಧ ಬ್ಯಾರೆ ಕಡಕೊಂಢಾಂಗ ಆಗಲಿಲ್ಲ. ವಿಚಾರಂತೂ ಮಾಡತೀನಿ ಅಂದಾರಲ್ಲಾ!' ಶಾರದೆಗೆ ಏನೂ ಉತ್ತರ ಕೊಡುವ ಮನಸ್ಸಾಗಲಿಲ್ಲ.

'ನೋಡೂಣಂತ....' ಇನ್ನೇನೊ ಹೇಳಬೇಕೆನಿಸಿದ್ದವಳು ಹೇಗೊ ಮಾತು ಬಿಗಿಹಿಡಿದಳು ಶಾರದೆ.

ೞ ೞ ೞ ೞ

ಗಾಡಿಯೊಳಗೆ ಕುಳಿತಾಗ ರಾಮನಾಥ ಹತ್ತಿರಿದ್ದ ಹಣ ಎಣಿಸಿ ನೋಡಲು ಪರ್ಸ ತೆಗೆದ. ಪರ್ಸಿನೊಳಗೊಂದು ಮಡಚಿದ ಕಾಗದ. ಮೆಲ್ಲಗೆ ಬಿಚ್ಚಿ ನೋಡಿದ. ಜಾನಕಿಯ ಹಾಗೇ ಕೈಬರಹ! ಹುಚ್ಚು ಹಿಡಿದಂತಾಯಿತು ರಾಮನಾಥನಿಗೆ. ಬಹಳ ಎಚ್ಚರಿಕೆಯಿಂದ ಕೆಳಗಿನ ಸಹಿ ನೋಡಿದ. 'ಶಾರದಾ' ಎಂದಿತ್ತು........

ಧಾರವಾಡ

..........

ರಾ| ರಾ| ರಾಮನಾಥರಾಯರಿಗೆ,

ಮಾಡುವ ಶಿ. ಸಾ. ನಮಸ್ಕಾರಗಳು. ತರುವಾಯ ವಿಶೇಷ. ಈ ಪತ್ರ ಓದಿ ನಿಮಗ ಆಶ್ಚರ್ಯ ಅನಿಸಬಹುದು. ಆದರೂ ಈ ಪತ್ರ ಬರೆಯೋ ಧೈರ್ಯ ಮಾಡೀನಿ. ತಪ್ಪಿದ್ದರ ಕ್ಷಮಿಸಬೇಕು.

ಜಾನಕ್ಕ ನಿಮ್ಮ ಪತ್ರಾ ಎಲ್ಲಾ ನನಗ ತೋರಿಸತಿದ್ದಳು. ಪರಕರ ಪೋಲಕಾ ಹಾಕಿಕೊಂಡ ಪ್ರಿಯಂವದಾನ ಬಗ್ಗೆ ಬರೆದಾಗ, 'ನಿನ್ನಷ್ಟ ಇದ್ದಿ-

ದ್ದಾಳು ನೋಡು ಶಾರಿ ಆಕೀನು. ಸುಳ್ಳ ನಾಯಿಷ್ಟು ತಪ್ಪುತಿಳಕೊಂಡಿದ್ದೆ!' ಅಂತ ನನ್ನ ಮುಂದೆ ಹೇಳಿ ಚಡಪಡಿಸಿದ್ದಳು.

ನಿಮ್ಮಿಬ್ಬರ ರಸಿಕತನ ನಾನು ಸಣ್ಣಂದಿರುತ್ತ ನೋಡೀನಿ. ಜಾನಕ್ಕ ಸಾಯೋ ಮುಂದ ಮೋನ್ಯಾನ್ನ ನಮಗ ಒಪ್ಪಿಸಿದ್ದಲ್ಲದ ನನ್ನ ಕಡೀಗೆ ಬಟ್ಟು ಮಾಡಿ ಮಂಗಳಸೂತ್ರ ಹಿಡಿದುಕೊಂಡಳು. ಇವತ್ತಿಗೂ ಹಗಲೆಲ್ಲಾ ಜಾನಕ್ಕ ನನ್ನ ಕನಸಿನೊಳಗ ಬಂದು ಒಮ್ಮೊಮ್ಮೆ ತನ್ನ ಮಂಗಳಸೂತ್ರ ನನ್ನ ಕೊರಳೊಳಗ ಕಟ್ಟಿಧಾಂಗ ಆಗಿ ವ್ಯೆ ಮ್ಯಾಲೆ ಮುಳ್ಳು ಬಂಧಾಂಗ ಆಗತದ. ಆಕಿ ವಾಸನಾ ಅದು ಅಂತ ಅನಿಸತದ.

ಮೋನ್ಯಾ ಅಂತೂ ನನ್ನ ಮಗ್ಗುಲಾ ಬಿಟ್ಟು ಮಲಗಿಕೊಂಬೋದಿಲ್ಲಾ. ಶ್ರೀರಾಮಚಂದ್ರಗ ಥೊಡ್ಡಾವ ಆದವ್ಯಾಲೆ ವನವಾಸ ಬಂದರ ನಮ್ಮ ನೋನ್ಯಾಗ ಚಿಕ್ಕಂದಿರತ ವನವಾಸ ಬಂತಲ್ಲಾ ಅಂತದುಃಖ ಅನಿಸತದ. ಮೋನ್ಯಾನ್ನ ಇವೊತ್ತು ನೀವು ಕರಕೊಂಡು ಹೋದ ಮ್ಯಾಲೆ ನನಗ ಪರದೇಶಿತನ ಬಂಧಾಂಗ ಅನಿಸತದ.

ಎಲ್ಲೆ ಇರಲಿ. ಹುಡುಗ್ಗ ದೀರ್ಘಾಯುಷ್ಯ ಹಾಕು ದೇವರು ಅಂತ ಬೇಡಿಕೊಂಡು ಈ ಪತ್ರ ಮುಗಿಸುತೀನಿ.

ನಿಮ್ಮ ಕ್ಷಮೆ ಬೇಡುವ
ಶಾರದಾ............

ಓಲೆ ಜಾನಕಿಯು ಸುಧಾರಿಸಿದ ಆವೃತ್ತಿಯಾಗಿತ್ತು.

ೲ ೲ ೲ ೲ

ರಾವ್ ದಂಪತಿಗಳ ದಾಂಪತ್ಯಜೀವನ ವಿದ್ಯಾವತಿಗೆ ಒಂದು ಬಗೆಯಲ್ಲಿ ಆದರ್ಶಪ್ರಾಯವಾಗಿ ಕಾಣುತ್ತಿತ್ತು. ಇಬ್ಬರ ಮನಸ್ಸೂ ಅಷ್ಟೆ ಪ್ರಗತಿಪರ. ಮುಂಬಯಿಯಂತಹ ಊರಲ್ಲಿ ಬೇಕಾದಷ್ಟು ಕನ್ನಡ ಚಟುವಟಿಕೆ ಮಾಡಬಹುದೆಂದು ಅವರ ಮತ. ವರುಷಕ್ಕೆ ಒಂದೆರಡು ಕನ್ನಡ ನಾಟಕಗಳನ್ನು ಅವರು ರಂಗಭೂಮಿಯ ಮೇಲೆ ತರಲೇಬೇಕು. ' ಕನ್ನಡ ಮಾತಾಡುವ ಮಂಗಳೂರು ಮತ್ತು ಉಡಿಪಿ ಹೋಟೆಲುಗಳಿಗೊಂದೊಂದು ತಿಕೇಟ ಹಾಕಿ ಧರೂ ಸಾವಿರ ತಿಕೀಟು ಖರ್ಚಾಗಬಹುದು ಎಂದವರ ಅಂದಾಜು. ಅದೇ

ತರಹ ಮುಂಬಯಿ ನಗರದಲ್ಲೊಂದು ಕನ್ನಡ ದಿನಪತ್ರಿಕೆಯನ್ನು ಪ್ರಾರಂಭಿಸಬೇಕೆಂಬ ಹವಣಿಕೆ ಅವರದಾಗಿತ್ತು. ಮುಂಬಯಿಯಲ್ಲಿ ಗುಜರಾತಿ, ಮರಾಠಿ ಜನಸಂಖ್ಯೆ ಪ್ರಬಲವಾಗಿತ್ತೆಂದರೂ ಅಲ್ಲಿರುವ ಎರಡು ಲಕ್ಷಕ್ಕೆ ಮಿಕ್ಕಿ ಸುಶಿಕ್ಷಿತ ಕನ್ನಡ ಜನಸಂಖ್ಯೆ ಕರ್ನಾಟಕದಲ್ಲಿ ಯಾವುದೇ ದೊಡ್ಡ ಪಟ್ಟಣದಲ್ಲಿ ಸಿಗಲಾರದು ಎಂದವರು ಸಾಧಿಸುವಲ್ಲಿ ಸತ್ಯಾಂಶವಿತ್ತು. ಮುಂಬಯಿಯಂತಹ ದೊಡ್ಡ ಪಟ್ಟಣದಲ್ಲಿ ಹೊರಡುತ್ತಿರುವ ಇತರ ಪತ್ರಿಕೆಗಳ ಸೌಕರ್ಯಗಳೆಲ್ಲಾ ಸುಲಭದಲ್ಲಿ ದೊರೆತು ಧಾರವಾಡ, ಬೆಂಗಳೂರು, ಮಂಗಳೂರುಗಳಲ್ಲಿ ಹೊರಡುತ್ತಿರುವ ಯಾವುದೆ ಕನ್ನಡ ಪತ್ರಿಕೆಗಿಂತ ಉಚ್ಚಮಟ್ಟದಲ್ಲಿ ಹೊರಡಿಸಬಹುದು ಎಂದು ಹೇಳುತ್ತಿದ್ದರು. ಅಲ್ಲಿಯ ಟಾಯಿಮ್ಸ್, ಫ್ರೀ ಪ್ರೆಸ್ ಪ್ರುತ್ರಿಕೆಗಳ ಮುಖಾಂತರ ಉಪಯುಕ್ತ ಚಿತ್ರ, ಪಡಿಯಚ್ಚುಗಳನ್ನು ದೊರಕಿಸಬಹುದು. ಹಾಗೆಂದು ಎಲ್ಲ ಪತ್ರಿಕೆಗಳೊಂದಿಗೆ ತಮ್ಮ ಸಂಬಂಧವಿಟ್ಟುಕೊಂಡು ಮುಂಬಯಿಯಲ್ಲಿ ಒಂದು ಕನ್ನಡ ದಿನಪತ್ರಿಕೆಯನ್ನು ಹೊರಡಿಸಬೇಕೆಂದು ಬಹಳ ಹವಣಿಸುತ್ತಿದ್ದರು. ಯಾವುದೆ ಇಂಗ್ಲಿಷ್ ಪತ್ರಿಕೆಯ ಅಂಗವಾಗಿ ಒಂದು ಕನ್ನಡ ವಾರಪತ್ರಿಕೆಯಾದರೂ ಶೀಘ್ರದಲ್ಲಿ ಹೊರಡುವ ಯೋಜನೆ ನಡಸಿದ್ದರು. ಇಂಗ್ಲಿಷಿನಲ್ಲಿ ಬೆಳಗಿನ ಪತ್ರಿಕೆಗಳು, ಸಾಯಂಕಾಲದ ಪತ್ರಿಕೆಗಳು ಹೀಗಿರುವಾಗ ಕನ್ನಡದಲ್ಲಿ ಏಕೆ ಅಂತಹ ಪತ್ರಿಕೆ ಹುಟ್ಟಬಾರದು ಎಂದು ಅವರ ಹಟ.

ರಾವ್ ಅವರು ಪತ್ರಿಕಾವ್ಯವಸಾಯದಲ್ಲಿ ಅಭಿರುಚಿಯುಳ್ಳವರಾಗಿದ್ದರೂ ಅವರ ಮುಖ್ಯ ಉಪಜೀವನವೃತ್ತಿ ಒಂದು ಗುಜರಾತಿ ಖಾಸಿಗೆ ಇಂಪೋರ್ಟ-ಎಕ್ಸಪೋರ್ಟ ಎಜನ್ಸಿ ಕಚೇರಿಯಲ್ಲಿ. ಅವರ ಕಚೇರಿ ಇರುವುದು ಬೆಲಾರ್ಡ ಈಸ್ಟೇಟಿನಲ್ಲಿ. ಕಚೇರಿಯೆಂದರೇನು ಬೆಲಾರ್ಡಪಿಯರ ಬಳಿಯಲ್ಲಿಯೆ ನ್ಯೂ ಕಸ್ಟಂ ಹೌಸಿಗೆ ಹೊಂದಿಕೊಂಡು ಒಂದು ಮೇಲಂತಸ್ತಿನ ಒಂದೆರಡು ಕೋಣೆಗಳಲ್ಲಿ. ಕಚೇರಿಯಲ್ಲಿ ತಾವೇ ತಾವು, ಒಬ್ಬ ಚಪ್ರಾಸಿ, ತಮ್ಮ ಒಬ್ಬ ಅಸಿಸ್ಟಂಟ. ಇವರ ಸಾಹುಕಾರ ಕಚೇರಿಗೆ ಬಂದರೆ ಬಂದ, ಇಲ್ಲದಿದ್ದರೆ ಇಲ್ಲ. ಕಾಳಬಾದೇವಿಯಲ್ಲಿ ಎರಡು ದೊಡ್ಡ ಅಂಗಡಿಗಳಲ್ಲದೆ ಕ್ರಾಫೋರ್ಡ ಮಾರ್ಕೆಟಿನಲ್ಲೂ ದೊಡ್ಡದೊಂದು ಅರಿವೆಯ ಅಂಗಡಿ. ರಾವ್ ಅವರು ತಮ್ಮ ಸಾಹುಕಾರನಿಗೆ ಟೈಪಿಸ್ಟ, ಸ್ಟೆನೊ ಮೊದಲುಮಾಡಿಕೊಂಡು

' ಅಂಡರಟೇಕರ 'ನ ವರೆಗೆ ಕೆಲಸ ಮಾಡುತ್ತಿದ್ದರು. ರಾವ್ ಎಂದರೆ ಸಾಹುಕಾರನಿಗೂ ಸಂಪೂರ್ಣ ವಿಶ್ವಾಸ. ಸಾವಿರಾರುಗಟ್ಟಲೆ ಹಣ ರಾವ್ ಅವರ ಕೈಯಲ್ಲಿ ಓಡಾಡುತ್ತಿದ್ದರೂ ಬೇಕಾದ ಹಾಗೆ ಏನಾದರೊಂದು ನೆವ ಹೇಳಿ ದುಡ್ಡನ್ನು ತಿನ್ನಬಹುದಾಗಿದ್ದರೂ ಅನ್ಯಾಯಕ್ಕೆ ಅವ್ಯಾಪಾರಕ್ಕೆ ಅಂಜುತ್ತಿದ್ದ ರಾವ್ ಅವರು ಪ್ರಾಮಾಣಿಕವಾಗಿ ಎಷ್ಟು ಗಳಿಸುವರೊ ಅದರಲ್ಲೇ ತೃಪ್ತಿ ಹೊಂದುತ್ತಿದ್ದರು. ಒಮ್ಮೆ ಸಾಹುಕಾರರು ಸಾವಿರ ರೂಪಾಯಿಯ ಹತ್ತು ನೋಟುಗಳನ್ನು ತಮ್ಮ ಕೂಡುವ ಗಾದಿಯ ಬುಡಕ್ಕೆ ಮರೆತು ಹೋಗಿ ಅದರ ನೆನಪೇ ಇಲ್ಲದಾಗ ರಾವ್ ಅವರು ಆ ನೋಟುಗಳನ್ನು ನೋಡಿದವರೆ ತಕ್ಷಣ ಕಾಳಬಾದೇವಿಗೂ ಕ್ರಾಫರ್ಡ ಮಾರ್ಕೆಟ್ಟಿಗೂ ಫೋನ್‌ಮಾಡಿ ತಿಳಿಸಿ ಮುಂದೆ ಒಂದು ತಾಸಿನೊಳಗೆ ಆ ನೋಟುಗಳನ್ನು ಒಯ್ದು ಸಾವುಕಾರನಿಗೆ ಕೊಟ್ಟು ಬಂದರು. ಎರಡು ತಿಂಗಳ ನಂತರ ರಾವ್ ಅವರ ಮಗಳು ಶಶಿರೇಖೆಯ ಮೊದಲನೆಯ ಹುಟ್ಟುಹಬ್ಬಕ್ಕೆ ಸಾಹುಕಾರರು ನಾಲ್ಕುತೊಲಿ ಬಂಗಾರದ ಬಿಲ್ವಾರಗಳನ್ನು ಮಾಡಿಸಿ ಕಾಣಿಕೆ ಕೊಟ್ಟರು.

' ನಾನು ಹುಚ್ಚಿಗೆ ಕಲಿಯಲಿಲ್ಲ. ಪ್ರಾಮಾಣಿಕತನವೊಂದೇ ಮುಂಬಯಿಯಲ್ಲಿ ನನ್ನ ಕೈ ಹಿಡಿದಿದೆ. ' ಎಂದೆನ್ನುತ್ತಿದ್ದರು ರಾವ್. ಯಾವುದೇ ಪದವೀಧರರವರಲ್ಲವಾಗಿದ್ದರೂ ಅವರ ಇಂಗ್ಲಿಷ್ ಪತ್ರವ್ಯವಹಾರದ ಚೊಕ್ಕಟತನ ಚುರುಕುತನಗಳು ಎಂತೆಂತಹ ಪದವೀಧರರಿಗೂ ಸಾಧಿಸಲಿಕ್ಕಿಲ್ಲ.

' ನಾನು ಕಾಸರುಕೋಡಿನಿಂದ ಇಲ್ಲಗೆ ಬಂದವನು. ಒಂದು ಇಗ್ಲಿಷ್ ಫರ್ಮಿನಲ್ಲಿ ಡಿಸ್ಪ್ಯಾಚ್ ಕ್ಲಾರ್ಕ್ ಎಂದು ಕೆಲಸ ಮಾಡತೊಡಗಿದೆ. ನನ್ನ ಕೈಬರೆಹದ ಮೇಲೆ ಅವರು ನನಗೆ ಈ ನೌಕರಿ ಕೊಟ್ಟರು. ನನ್ನ ಕರ್ತವ್ಯದಕ್ಷತೆಯೊಂದರಿಂದಲೆ ಇಂದು ನಾನು ತಿಂಗಳಿಗೆ ಐದು ನೂರು ರೂಪಾಯಿ ಸಂಬಳ ತರುತ್ತಿದ್ದೇನೆ. ' ಎಂದು ರಾವ್ ನುಡಿಯುವಾಗ ಅಹಂಕಾರವೇನೂ ಕಂಡು ಬರದೆ ಅವರ ಸರಳ ಜೀವನ ಪ್ರಾಮಾಣಿಕ ಮನೋವೃತ್ತಿಗಳೆ ಅಲ್ಲಿ ಎದ್ದು ಕಾಣುತ್ತಿದ್ದುವು.

ದೈವ, ದೇವರಲ್ಲಿ ರಾವ್ ಅವರಿಗೆ ನಂಬುಗೆ ಇರಲಿಲ್ಲ. ಕುಬೇರನಾಗುವುದು, ಭಿಕಾರಿಯಾಗುವುದು ಮನುಷ್ಯನ ಕೈಯಲ್ಲೇ ಇದೆ ಎಂದು ಅವರೆನ್ನುತ್ತಿದ್ದರು. ಮುಂಬಯಿಯಲ್ಲಿ ಸಾಹಸ ಯೋಗ್ಯತೆಗಳಿದ್ದರೆ ಭಿಕಾರಿ

ಕುಬೇರನಾಗಬಹುದು ಎಂದು ಅವರ ಮತ. ಗ್ರ್ಯಾಂಟ ರೋಡಿನಲ್ಲಿ ಒಬ್ಬ ಪಾನವಾಲಾ ಮಲಬಾರ ಹಿಲ್ ಮೇಲೆ ಒಂದು ಫ್ಲ್ಯಾಟ್ ಖರೀದಿ ಮಾಡಿದ್ದು, ಚೌಪಾಟಿಯ ಮೇಲೆ ಹಾದಿ-ಹೋಕರ ಬೂಟ್ ಪಾಲಿಶ್ ಮಾಡುತ್ತಿದ್ದ ದರಿದ್ರನೊಬ್ಬ ಜೆಕಬ್ ಸರ್ಕಲ್‌ನಲ್ಲಿ ಲಕ್ಷ 'ಬಾಟಾ' ಅಂಗಡಿಯ ಒಡೆಯನಾದ ಉದಾಹರಣೆಗಳನ್ನವರು ಯಾವಾಗಲೂ ಕೊಡುತ್ತಿದ್ದರು. ಅವರು ನಶೀಬದಿಂದ ಕುಬೇರರಾಗಿಲ್ಲ, ತಮ್ಮ ಬೆವರಿನಿಂದ ಎಂದೇ ರಾವ್ ಅವರ ಅಭಿಪ್ರಾಯ.

ತಮ್ಮ ಹೆಂಡತಿಯ ಮನೋವೃತ್ತಿಯನ್ನೂ ತಮ್ಮ ಅಭಿಪ್ರಾಯದತ್ತಲೆ ಹೊರಳಿಸಿದ್ದರು. ಮೊದಮೊದಲು ದೈವ, ದೇವರು ಎಂದು ಹೆಜ್ಜೆ ಹೆಜ್ಜೆ ಭಾವಿಕರಾಗಿ ಧರ್ಮನಿಷ್ಠರ ಮನೆತನದಲ್ಲೇ ಹುಟ್ಟಿ ಬೆಳೆದ ಅವರ ಹೆಂಡತಿ ರಾವ್ ಅವರ ಸಂಪರ್ಕದಿಂದ ಕೈಯಲ್ಲಿ ಬಳೆ ಇಡುತ್ತಿರಲಿಲ್ಲ, ಹಣೆಯ ಮೇಲೆ ಕುಂಕುಮವಿಡುತ್ತಿರಲಿಲ್ಲ. ಗಂಡನೊಂದಿಗೆ ಬೇಕಾದ ಇಂಗ್ಲಿಷ್ ಪದ್ಧತಿಯ ಹೋಟ್ಲುಗಳಿಗೆ ಹೋಗಿ ಮಾಂಸಾಹಾರ ಕೂಡ ತಿಂದು ಬರುತ್ತಿದ್ದರು.

'ನಿಮ್ಮದು ರಜಿಸ್ಟರ ಮದುವೆಯೇನು ?', ಎಂದು ವಿದ್ಯಾ ಮಿಸೆಸ್ ರಾವ್ ಅವರನ್ನೊಮ್ಮೆ ಕೇಳಿದಳು.

'ಇಲ್ಲ. ಧಾರ್ಮಿಕ ವಿಧಿಯಲ್ಲೆ ನಮ್ಮ ವಿವಾಹವಾಗಿದ್ದರೂ ನಾವು ಗಂಡ-ಹೆಂಡಿರಾಗಿ ಉಳಿದಿದ್ದುದು ಧಾರ್ಮಿಕ ಬಂಧನದಿಂದಲ್ಲ, ಪ್ರೇಮ ಬಂಧನದಿಂದ.' ಎಂದವರು ಉತ್ತರವಿತ್ತರು.

'ಪ್ರೇಮಬಂಧನವಿರದಿದ್ದರೆ ನೀವು ನಿಮ್ಮ ಧಾರ್ಮಿಕ ಬಂಧನವನ್ನು ಕಿತ್ತೊಗೆಯುತ್ತಿದ್ದಿರಾ ?

'ಕಿತ್ತೊಗೆಯಬಹುದಿತ್ತು. ದಾಂಪತ್ಯವೆಂದರೆ ಒಂದು ವ್ಯಾಪಾರ. ಒಳ್ಳೇ ಪತ್ತುಳ್ಳ ವ್ಯಾಪಾರಿಗಳು ಯಾವುದೇ ವಸ್ತು ಚೆನ್ನಾಗಿ ಉಪಯೋಗ ಕೊಡದಿದ್ದರೆ ವಾಪಸ್ ತೆಗೆದುಕೊಳ್ಳುವುದಿಲ್ಲವೆ ?'

'ಸೋಡಚೀಟಿ ಕೊಡಬೇಕೆಂದು ನಿಮ್ಮ ಅಭಿಪ್ರಾಯವೆ ?'

'ಮದುವೆಯು ಪ್ರೇಮಜೀವನವೆನಿಸಬೇಕೆಂದು ನನ್ನ ಅಭಿಪ್ರಾಯ.'

ರಾವ್ ದಂಪತಿಗಳ ಈ ಜೊಸ್ಕಟ ಮತಾಭಿಪ್ರಾಯಗಳಿಗಾಗಿ ವಿದ್ಯಾವತಿಗೆ ಅವರನ್ನು ಕಂಡರೆ ವಿಶೇಷ ಆಸಕ್ತಿ.

'ಸುರಾಸುರೀ' ರೇಡಿಯೊ ನಾಟಕವು ಯಶಸ್ವಿಯಾಗಿ ಬಿತ್ತರಿಸಲ್ಪಟ್ಟ್ಟು-ದರಿಂದ ಮದ್ಯಪಾನ-ಪ್ರಚಾರ-ಶಾಖೆಯುವರು ಅದನ್ನು ತಮ್ಮ ಪ್ರಚಾರಕ್ಕೂ ಗ್ರಾಮೊಫೋನ್ ಕಂಪನಿಯಿಂದ ಧ್ವನಿಮುದ್ರಣ ಮಾಡಿಸಬೇಕೆಂದರು. ಅದರ ಸಿದ್ಧತೆಯೀಗ ರಾವ್ ಅವರ ಮನೆಯಲ್ಲೇ ನಡೆದಿತ್ತು. ಅದಕ್ಕಾಗಿ ವಿದ್ಯಾ ದಿನಕ್ಕೊಮ್ಮೆ ಎರಡು ದಿನಕ್ಕೊಮ್ಮೆ 'ಸಾಂತಾಕ್ರೂಜ' ನಲ್ಲಿ ರಾವ್ ಅವರ ಮನೆಗೆ ಹೋಗಬೇಕಾಗಿತ್ತು. ಗ್ರಾಮೋಫೋನ್ ರೆಕಾರ್ಡ ಮಾಡುವುದಕ್ಕೆ ಬೇಕಾದ ಸ್ಥಿತ್ಯಂತರಗಳನ್ನೆಲ್ಲಾ ಮೂಲದ ಹಸ್ತಪ್ರತಿಯಲ್ಲಿ ರಾವ್ ಅವರೇ ಮಾಡಿದ್ದರು.

ಈ ದಿನ ಸಂಜೆ ಐದು ಗಂಟೆಗೆ ಬರುವುದರ ಬದಲಾಗಿ ವಿದ್ಯಾ ಐದೂವರೆಗೆ ಬಂದಳು. ರಾವ್ ದಂಪತಿಗಳು ದಾರಿ ಕಾಯುತ್ತಿದ್ದರು. ವಿದ್ಯಾ ಬಂದ ಕೂಡಲೆ 'ವ್ಯವಹಾರದಲ್ಲಿ ಪ್ರಾಮಾಣಿಕತೆಗಿರುವಷ್ಟೆ ಮಹತ್ವ ನಿಯ-ಮಿತತನಕ್ಕೂ ಇದೆ.' ಎಂದರು ಮಿಸ್ಟರ್ ರಾವ್.

'ಒಂದು ಗಾಡಿ ತಪ್ಪಿತು.' ವಿದ್ಯಾ ಕ್ಷಮಾಯಾಚನೆಯ ಮುಖದಿಂದ ಹೇಳಿದಳು.

'ತಪ್ಪಿಸಿಕೊಳ್ಳಬಾರದಿತ್ತು. ಎರಡು ಗಾಡಿಗೆ ಮುಂಚಿತವೇ ಬಂದಿದ್ದರೆ-'

'ಹೌದು. ಕೈಮೀರಿತು. ಕ್ಷಮಿಸಬೇಕು.' ವಿದ್ಯಾ ನುಡಿದಳು. ಮಿಸೆಸ್ ರಾವ್ ನಸುನಗುತ್ತ ಒಳಗೆ ಕಾಫಿ ಮಾಡಲಿಕ್ಕೆ ಹೋದರು. ವಿದ್ಯಾ ಸೋಫಾದ ಮೇಲೇ ಅಡ್ಡಾಗಿ ಆ ತಿಂಗಳದ 'ಫಿಲ್ಮ ಇಂಡಿಯಾ' ದಲ್ಲಿಯ ಚಿತ್ರಗಳನ್ನೂ ಪ್ರಶ್ನೋತ್ತರ ಕಾಲಂಗಳನ್ನೂ ಓದೋದುತ್ತ ಒಂದು ಸಿನೇಮಾ ನಕ್ಷತ್ರದ ಫೋಟೊ ನೋಡಿ 'ಈಕೆ ಈ ಚಿತ್ರಪಟದ ಮುಖ್ಯನಾಯಕನನ್ನೆ ಮದುವೆಯಾಗುವವಳಿದ್ದಳೆಂಬ ಸುದ್ದಿ ಇತ್ತಲ್ಲ ?' ಎಂದು ರಾವ್‌ರನ್ನು ಕೇಳಿದಳು.

'ಹಾಗೇನೂ ಇಲ್ಲ. ಆದರೂ ಆಕೆಯದು ಇದು ಎರಡನೆಯದೊ ಮೂರನೆಯದೋ ಸಂಬಂಧ!'

'ಅರೆ! ಅಂದರೆ ಈಗ ಕಾಯಿದೆ ಆಗಿಲ್ಲವೇನು ?'

'ಮಿಸೆಸ್ ವಿದ್ಯಾ, ಕಾಯಿದೆ ಇರುವುದು ಪ್ರಾಮಾಣಿಕರಿಗಾಗಿ. ಹೌಸಿಂಗ ಕಾಯಿದೆ ಇದ್ದರೂ 'ಪಾಗಡಿ' ಕೊಟ್ಟ ಮನೆಗಳು ಎಷ್ಟು ಸಿಕ್ಕುವುದಿಲ್ಲ ?'

‘ ಅಂದರೆ ಕಾಯಿದೆ ವಿರುದ್ಧ ಮದುವೆಯಾಗುವರೇನು ? ’

‘ ಮದುವೆಯಾಗದೆ ಹಾಗೇ ಇರಲಿಕ್ಕೆ ಬರುತ್ತದಲ್ಲ ? ಎಷ್ಟನೆಯ ಸಂಬಂಧವಾದರೇನು ? ಅದೂ ಹೋಗಲಿ, ಸೋಡಚೀಟಿ ತೆಗೆದುಕೊಂಡ ಮೇಲಾಯಿತಲ್ಲ....’

‘ ಎಲ್ಲರಿಗೂ ಅದನ್ನು ತೆಗೆದುಕೊಳ್ಳಲಿಕ್ಕೆ ಬರುತ್ತದೇನು ? ’

‘ ಸಕಾರಣವೆಂದು ತೋರಿಸುವ ಎಲ್ಲರಿಗೂ ವಿವಾಹವಿಚ್ಛೇದ ಮಾಡಲು ಬರುತ್ತದೆ. ’

‘ ಪುನರ್ಮಿಲನ ’ದ ನಾಯಿಕೆಯೂ ಗಂಡನನ್ನು ಬಿಟ್ಟುಬಿಡಲಿಲ್ಲವೆ ?

‘ ಹೌದು. ಅದು ದ್ವಿಪತ್ನಿ ಕಾಯಿದೆಗೆ ಮೊದಲೆ ನಡೆದುದು. ’

‘ ನಮ್ಮ ಸೋಶಿಯಾಲಿಸ್ಟ ಪಂಗಡದ ವೀರ ಮಹಿಳೆಯದೂ ಹಾಗೇ ಎಂದು ತೋರುತ್ತದೆ. ’

‘ ಹೌದು. ’

‘ ಸಕಾರಣ ವಿವಾಹವಿಚ್ಛೇದ ಎಂದರೇನು ? ’

‘ ಸರಿ, ಅದೆಲ್ಲಾ ಕಾಯದೆಯ ವಿಚಾರ ನಮಗೇನು ತಿಳಿಯಬೇಕು ? ಇಷ್ಟಾಗಿ ನಮಗದು ಬೇಕಾದರೂ ಯಾತಕ್ಕೆ ? ನಾನಂತೂ ನನ್ನ ಹೆಂಡತಿಯನ್ನು ಬಿಡುವ ಹಾಗಿಲ್ಲ. ನನ್ನ ಹೆಂಡತಿಯೂ ನನ್ನನ್ನು ಬಿಡುವ ಹಾಗಿಲ್ಲ. ’

ಅಷ್ಟರೊಳಗೆ ಮಿಸೆಸ್ ರಾವ್ ಟ್ರೇದಲ್ಲಿ ಮೂರು ಕಪ್ ಕಾಫಿ ಮತ್ತು ಒಂದು ಬಸಿಯಲ್ಲಿ ನಾಲ್ಕಾರು ‘ಸಾಮೂಸಾ’ ತಂದಿಟ್ಟರು. ವಿದ್ಯಾ ಬರಿ ಕಾಫಿ ತೆಗೆದುಕೊಂಡಳು.

‘ಸಾಮೂಸಾ ತಕ್ಕೊಳ್ಳಿ. ’ ಮಿಸೆಸ್ ರಾವ್ ಕೊಡಲಿಕ್ಕೆ ಹೋದರು.

‘ನಾನೊಲ್ಲೆ.’

‘ ಅವೂ ‘ವ್ಹೆಜಿಟೇರಿಯನ್’ ಇವೆ, ತಕ್ಕೊಳ್ಳಿ. ’

‘ಇಷ್ಟೆಲ್ಲಾ ವಿವಾಹವಿಚ್ಛೇದದ ಬಗ್ಗೆ ಮುಂದರಿದು ವಿಚಾರ ಮಾಡುತ್ತೀರಿ, ಸಾಮೂಸಾ ತಿನ್ನುವಷ್ಟು ಮುಂದರಿದಿಲ್ಲವೆ ನಿಮ್ಮ ನಾಲಗೆ ? ’

‘ಅವರ ನಾಲಗೆ ಬೇರೆ ರೀತಿಯಲ್ಲಿ ಮುಂದರಿದಿರಬಹುದು. ’ ಮಿಸೆಸ್ ರಾವ್ ಹೇಳಿದರು.

ವಿದ್ಯಾವತಿಗೆ ಮಾತಿನ ಅರ್ಥವಾದರೂ ಸುಮ್ಮನೆ ಇದ್ದಳು.

'ನಿಮ್ಮ ಯಜಮಾನರು ಬಂದರೇ?'

ಇಲ್ಲವೆಂದು ಬಿಳಿ ಕೆಳದುಟಿಯನ್ನು ಮುಂದೆ ಚಾಚಿ ಮೇಲ್ದುಟಿಯ ಮೇಲಿಟ್ಟು, ಗೋಣು ಅಲ್ಲಾಡಿಸಿದಳು ವಿದ್ಯಾ.

'ರಿಹರ್ಸಲ್ ಹಾಗಾದರೆ ನಾಳೆ ಬೆಳಿಗ್ಗೆ ೧೦ ಗಂಟೆಗೆ ಎಚ್. ಎಂ. ವಿ. ಕಂಪನಿಯಲ್ಲೇ ಮಾಡೋಣ?' ರಾವ್ ಕೇಳಿದರು.

'ಹಾಗೇ ಆಗಬಹುದು.' ವಿದ್ಯಾ ಉತ್ತರ ಕೊಟ್ಟಳು.

ವಿದ್ಯಾ ಮರುದಿನ ಬೆಳಿಗ್ಗೆ ಒಂಬತ್ತುವರೆಗೇ ಎಚ್. ಎಂ. ವಿ. ಕಂಪನಿಗೆ ಹಾಜರ ಇದ್ದಳು. ಹತ್ತು ಗಂಟೆಗೆ ಎರಡು ನಿಮಿಷಗಳಿದ್ದಾಗ ಲಿಫ್ಟ ಬಂದು ಮೂರನೆಯ ಮಹಡಿಗೆ ನಿಂತಿತು. ಬಂದವರು ರಾವ್ ದಂಪತಿಗಳು. ಅವರು ಹೊರಬರುತ್ತಲೆ ವಿದ್ಯಾ ತನ್ನ ಕೈಯೊಳಗಿನ ಗಡಿಯಾರ ನೋಡಿ ಮುಗಳ್ನಗೆಯಿಂದ ಕೈ ಮುಗಿದು ಅವರನ್ನು ಸ್ವಾಗತಿಸಿದಳು.

'ಹಾಗಾದರೆ ನಾವು ಗೊತ್ತಾದ ಹೊತ್ತಿಗೆ ಮೊದಲೇ ಬಂದಂತಾಯಿತು. ಅದೂ ಅನಿಯಮಿತತನವೇ ಕಾಣುತ್ತದೆ!' ವಿನೋದ ಮಾಡಿದಳು ವಿದ್ಯಾ.

'ಹೌದು, ನಿಶ್ಚಿತ ವೇಳೆಗೆ ಸರಿಯಾಗಿ ಬರುವುದಕ್ಕೆ ಮಾತ್ರ ನಿಯಮಿತ ಎನ್ನುತ್ತಾರೆ. ಎಂದ ಮೇಲೆ........'

ವಿದ್ಯಾ ನಕ್ಕುಬಿಟ್ಟಳು. ರಾವ್ ದಂಪತಿಗಳೂ ನಕ್ಕರು.

'ಆದರೆ ಇಷ್ಟೆ, ತಡ ಮಾಡಿದರೆ ಇನ್ನೊಬ್ಬರಿಗೆ ತೊಂದರೆಯಾಗುವ ಹಾಗೆ ಮುಂಚಿತ ಬಂದರೆ ಇನ್ನೊಬ್ಬರಿಗೆ ತೊಂದರೆಯಾಗುವ ಪ್ರಶ್ನೆಯಿಲ್ಲ. ಆದರೆ ಸ್ವಂತಕ್ಕೇ ಹೊತ್ತು ಹಾಳು ಇಷ್ಟೆ.'

ಎಲ್ಲರೂ ನಗುತ್ತ ಒಳಗೆ ಹೋದರು. ಶ್ರೀಧರರಾವ್ ಮತ್ತು ರೇಡಿಯೊ ಕಲಾವಿದರು ಇನ್ನೂ ಬಂದಿರಲಿಲ್ಲ. ವ್ಯವಸ್ಥಾಪಕರು ಅವರನ್ನು 'ರಿಹರ್ಸಲ್ ರೂಮಿ'ಗೆ ಕರೆದೊಯ್ದರು. ಉಳಿದ ಸಾಥಿದಾರರೂ ಇನ್ನೂ ಬಂದಿರಲಿಲ್ಲ.

'ಸ್ಟುಡಿಯೊ ಇನ್ನೂ ಖಾಲಿ ಇದ್ದಂತೆ ಕಾಣುವುದಿಲ್ಲ........ಸರಿ ನಿತ್ಯದ ಹಣೇಬರೆಹವೆ ಇದು.....' ಮಿಷ್ಟರ ರಾವ್ ತಮ್ಮ ಶ್ರೀಮತಿಗೆ ಹೇಳಿದರು.

'ಇಲ್ಲ, ಇನ್ನೊಂಪೈದು ನಿಮಿಷ, ಅಷ್ಟೆ.' ವ್ಯವಸ್ಥಾಪಕರು ರಾವ್ ಅವರು ಬೇಸರಬಟ್ಟುದನ್ನು ಕಂಡು ನುಡಿದರು. ಒಳಗೆ ಒಂದು ಫಿಲ್ಮ ಸಂಗೀತದ ಧ್ವನಿಮುದ್ರಣ ನಡೆದಿತ್ತು. ಅಮೀರಬಾಯಿ ಕರ್ನಾಟಕಿ ಅವರ

'play-back' (ತರೆಮರೆಯ) ಹಾಡೊಂದು. ವ್ಯವಸ್ಥಾಪಕರು ರಾವ್ ಮತ್ತು ಸಂಗಡಿಗರನ್ನೆಲ್ಲ ಒಳಗೆ ಕರೆದೊಯ್ದರು. ಸ್ಟುಡಿಯೊಕ್ಕೆ ಹೊಂದಿದ ಒಂದು 'ಲಿಸ್ನಿಂಗ್‌ರೂಮಿ'ನಲ್ಲಿ(ಶ್ರವಣಗ್ರಹ)ಕೂಡಿಸಿದರು. ಐವತ್ತು ತರಹದ ವಾದ್ಯಗಳು. ಒಬ್ಬೊಬ್ಬ ವಾದ್ಯಕಾರನ ಮುಂದೆ ರಾಗದ ಸ್ವರವಿವರಣೆಯ ಪತ್ರಿಕೆ. ಮೈಕಿನ ಎದುರಿಗೆ ಸಂಗೀತ ದಿಗ್ದರ್ಶಕರು ಹಸ್ತವಿನ್ಯಾಸಗಳಿಂದ ಸೂಚನೆ ಕೊಡುತ್ತಿದ್ದರು.

'ಧ್ವನಿಗ್ರಹಣಕ್ಕೆ ಎಲ್ಲ ಸಿದ್ಧವಾಗಿದೆ.' ಎಂಜಿನಿಯರು ಎಂದರು. ಕಂಪನಿ ವ್ಯವಸ್ಥಾಪಕರು ಮತ್ತೆ ಒಬ್ಬಿಬ್ಬರ ಸ್ಥಾನಗಳನ್ನು ಸ್ವಲ್ಪ ಬದಲಿಸಿದರು. ಕೆಂಪು ದೀಪ ಬಂತು. ದಿಗ್ದರ್ಶಕರು ಬಾಯಿ ತೆರೆದು ಮಾತಾಡದೆ 'ಒನ್, ಟು, ಥ್ರಿ,' ಎಂದು ವಾದ್ಯಕಾರರಿಗೆ ಲಯವನ್ನು ಎತ್ತಿಕೊಟ್ಟರು. ಮೊದಲಿಗೆ ಟ್ರಂಪೆಟ್ ವಾದ್ಯವಷ್ಟೆ ನುಡಿಯಿತು. ಆಮೇಲೆ ಎಲ್ಲ ವಾದ್ಯಗಳೂ ಕೂದಲೆಳೆಯಷ್ಟು ಹೆಚ್ಚುಕಡಿಮೆಯಾಗದೆ ಪ್ರಾರಂಭವಾದುವು. ವಾದ್ಯಗಳು ಮುಗಿದು ಧ್ವನಿ ಪ್ರಾರಂಭವಾಗುವ ಹೊತ್ತಿಗೆ ದಿಗ್ದರ್ಶಕರು ಗಾಯಕಿಗೆ ಕೈ ಮಾಡಿದರು. ಖಣ ಖಣ ಆವಾಜಿನಿಂದ ಪಂಚಮದ ವರೆಗೂ ಒಂದು ತಾನ ಹೊಡೆದು ಆಮೇಲೆ ಮೆಲ್ಲನೆ ಗೀತ ಪ್ರಾರಂಭವಾಯಿತು. ನಡುವೆ ಯಾವುದೋ ಒಂದು ಕೋಣೆಯಿಂದ ಧಡಲ್ ಎಂದು ಏನೋ ಸಾಮಾನು ಬಿದ್ದ ಸಪ್ಪಳವಾಯಿತು. ಧ್ವನಿಗ್ರಹಣ ಅರ್ಧಕ್ಕೇ ತಡೆಯಿತು. ಕೆಂಪು ದೀಪ ಮಾಯವಾಯಿತು. ಎಲ್ಲರೂ ಬೇಸರಗೊಂಡು 'ಉಶ್' ಎಂದರು. ಎಂಜನಿಯರು 'ವ್ಯಾಕ್ಸ' ಬದಲಿಸುವಷ್ಟರೊಳಗೆ ಚಹಾ ಬಂತು. ಅದೇ ಚಹಾ ಲಿಸ್ನಿಂಗ್ ರೂಮಿನ ವರೆಗೂ ಬಂತು.

'ಅಮೀರಬಾಯಿಯೆಂದರೆ ಕನ್ನಡಿತಿ ಅಲ್ಲವೆ?' ವಿದ್ಯಾ ಕೇಳಿದಳು.

'ಓಹೋ, ಯಥೇಷ್ಟವಾಗಿ.'

'ಇಷ್ಟು ಜನ ಕನ್ನಡಿಗರಿದ್ದೂ ಒಂದು ಯಶಸ್ವಿ ಕನ್ನಡ ಚಿತ್ರಪಟ-ಇಲ್ಲಿ ತಯಾರಾಗಲೊಲ್ಲದು!' ರಾವ್ ಎಂದರು.

'ಏಕೆ ನಾವೇ ಒಂದು ಕಂಪನಿ ಪ್ರಾರಂಭಿಸೋಣಲ್ಲ?' ವಿದ್ಯಾ ಹುರುಪಿನಿಂದ ಮಾತನಾಡಿದಳು.

'ಕುಬೇರನಂಥ ಧನವಂತರು ಒಬ್ಬರು ಬೇಕಲ್ಲ?'

'ಮುಂಬಯಿಯಲ್ಲಿ ಶ್ರೀಮಂತ ಕನ್ನಡಿಗರಿಲ್ಲವೇನು?'

'ಏಕೆ 'ಪಂಪಾ ಪಿಕ್ಚರ್ಸ' ಈಗ ಉದಯವಾಗಿದೆಯಲ್ಲ?' ಮಿಸೆಸ್ ರಾವ್ ಧ್ವನಿಗೂಡಿಸಿದರು.

'ನೋಡೋಣ, ಕರ್ನಾಟಕದ ಮಾರ್ಕೆಟ್ಟಿನ ಕಲ್ಪನೆ ಬಂದರೆ ಶಾಂತಾರಾವ್ ಅಂತಹರೇ ತಮ್ಮ ಚಿತ್ರಪಟಗಳ ಕನ್ನಡ ಪ್ರತಿ ಸಹ 'ಡಬ್' ಮಾಡ ಬಹುದು.' ರಾವ್ ಎಂದರು.

ಧ್ವನಿಗ್ರಹಣ ಮತ್ತೆ ಪ್ರಾರಂಭವಾಯಿತು. ಮೊದಲಿಗೆ ಕೆಟ್ಟುಹೋಗಿದ್ದ 'ಧ್ವನಿಮುದ್ರಿಕೆಯನ್ನು' ಆಗಿಂದಾಗಲೆ ಹಚ್ಚಿ ತೋರಿಸಿದರು. ಅಮೀರಬಾಯಿ ತನ್ನ ಧ್ವನಿಮುದ್ರಿಕೆಯನ್ನು ತಾನೇ ಕೇಳುತ್ತಿರುವುದು ವಿದ್ಯಾವತಿಗೆ ಮೋಜು ಎನಿಸಿತು.

'ತಮ್ಮ ಧ್ವನಿಗೆ ತಾವೇ ಮೆಚ್ಚುತ್ತಿದ್ದಾರೆ!' ಉದ್ಗಾರವೆತ್ತಿದಳು ವಿದ್ಯಾ.

'ಹೌದು. ಫಿಲ್ಮ ಶೂಟಿಂಗ್ ಆದಾದಂತೆಲ್ಲಾ ಅದನ್ನು ಸ್ಟುಡಿಯೊ ಥಿಯೆಟರಿನಲ್ಲೇ ಪ್ರೊಜೆಕ್ಟ ಮಾಡಿ ತೋರಿಸುತ್ತಾರೆ. ಆಗ ನಾಯಕ-ನಾಯಕಿಯರು ತಮ್ಮ ಅಭಿನಯಕ್ಕೆ ತಾವೇ ಮೆಚ್ಚಿ ಕೌತುಕಪಡುತ್ತಿರುವುದು ಇದಕ್ಕೂ ಚೆನ್ನಾಗಿರುತ್ತದೆ.' ಮಿಸ್ಟರ ರಾವ್ ಎಂದರು.

'ನಾವು ಯಾವುದೋ ಒಂದು ಪಿಕ್ಚರಿಗೆ ಹೋಗಿದ್ದೆವು. ಅದಕ್ಕೆ ಪೃಥ್ವಿರಾಜನೂ ಬಂದಿದ್ದ!' ವಿದ್ಯಾ ಕೌತುಕ ಬೆರಸಿ ಹೇಳಿದಳು.

'ಪೃಥ್ವಿರಾಜನನ್ನು ನೋಡದವರಾರು ? 'ದಿವಾರ್' ನೋಡಿಬಿಟ್ಟೆ ರಾಯ್ತು.' ಮಿಸೆಸ್ ರಾವ್ ವಿಶೇಷ ಆಶ್ಚರ್ಯಗೊಳ್ಳದೆ ಮಾತಾಡಿದಳು.

'ಪಿಕ್ಚರಿನೊಳಗಿನ ಕಥಾನಾಯಕ ಕಥಾನಾಯಕಿಯರು ಜೀವನದೊಳಗೂ ಹಾಗೇ ಆದದ್ದುಂಟೇನು?' ವಿದ್ಯಾ ಕೇಳಿದ ಪ್ರಶ್ನೆ ಅರ್ಥಪೂರ್ಣವಾಗಿತ್ತು.

'ಶಕುಂತಲಾ'ದ ದಿಗ್ದರ್ಶಕ ಮತ್ತು ಅವರಲ್ಲಿಯ ನಾಯಕಿ ಇದ್ದಾರಲ್ಲ.' ಶ್ರೀಮತಿ ರಾವ್ ಎಂದರು.

'ಛೆ. ಛೆ. ಅದು ಬರಿ ದಿಗ್ದರ್ಶಕ ಮತ್ತು ನಾಯಕಿಯ ಜೋಡಿ........ ಇನ್ನೇನು ಮುಂದಿನ ಪಿಕ್ಚರನಲ್ಲಿ ಅವರೇ ನಾಯಕ-ನಾಯಕಿ ಆಗುವವರಿದ್ದಾರಂತೆ.'

‘ ಮೊದಲನೆಯ ಸಲ ‘ಡಾಕ್ಟರ ಕೋಟ್ನಿಸ್’ ’ವಲ್ಲಿ ಶಾಂತಾರಾಂ ಪಾತ್ರ ವಹಿಸಿದ್ದಾರಲ್ಲವೆ?’ ಮಿಸೆಸ್ ರಾವ್ ಎಂದರು.

‘ ಹೂಂ, ನಾಯಕನ ಪಾತ್ರ.’ ರಾವ್ ಉತ್ತರ ಕೊಟ್ಟರು.

‘ ಇದೇನು ಇಷ್ಟೆಲ್ಲಾ ಸಮಾಚಾರ ನಿಮಗೆ ಹೇಗೆ ಗೊತ್ತು ?’ ವಿದ್ಯಾ ಕೇಳಿದಳು.

‘ ಓಹೋ ಅದಕ್ಕೇನು, ಫಿಲ್ಮ ಸಮಾಚಾರವುಳ್ಳ ಯಾವುದೇ ಪೇಪರ ಓದಿದರೂ ಇದ್ದೇ ಇರುತ್ತದೆ. ‘ಫಿಲ್ಮ ಇಂಡಿಯಾ’ ಅಂತೂ ಸರಿಯೆ.’

‘ ಹಾಗಾದರೆ ನಾಯಕ-ನಾಯಕಿಯರಿಗಿಂತಲೂ ದಿಗ್ದರ್ಶಕ-ನಾಯಕಿಯರದೇ ಹೆಚ್ಚು ಸಂಬಂಧ ಬರುತ್ತದೆ ಅನ್ನಿ.’ ವಿದ್ಯಾ ಕೇಳಿದಳು.

‘ ಅರ್ಥಾತ್. ಕಾಂಟ್ರ್ಯಾಕ್ಟ ನಿರ್ಮಾತೃವಿನೊಂದಿಗೆ ಇರುತ್ತದಲ್ಲವೆ?’ ಎಂದರು ರಾವ್.

‘ ಮತ್ತೆ ನಿರ್ಮಾತೃಗಳೇ ದಿಗ್ದರ್ಶಕರಿರುತ್ತಾರೆಂದು ಹೇಳತೀರದು,’ ಮಿಸೆಸ್ ರಾವ್ ವಿವರಿಸಿದರು.

‘ ಸವಿತಾ, ಮದ್ರಾಸ್ ಸ್ಟುಡಿಯೊ ಒಂದರಲ್ಲಿ ನಡೆದ ಸಂಗತಿ ಕೇಳಿದ್ದೀಯಾ?’ ರಾವ್ ತಮ್ಮ ಶ್ರೀಮತಿಗೇ ವಿಶೇಷವಾಗಿ ಉದ್ದೇಶಿಸಿ ನುಡಿದರು. ‘ದಿಗ್ದರ್ಶಕರಿಗೂ ನಾಯಕಿಗೂ ಶೂಟಿಂಗ್ ಕಾಲಕ್ಕೆ ಏನೋ ವೈಮನಸ್ಯ ಸುರುವಾಯಿತಂತೆ. ನಾಯಕಿ ದಿಗ್ದರ್ಶಕರನ್ನು ಆರೋಪಿಸಿ ಏನೇನೋ ಆಕ್ಷೇಪಾರ್ಹವಾಗಿ ಮಾತಾಡಹತ್ತಿದ್ದಳಂತೆ. ದಿಗ್ದರ್ಶಕರೇ ಕರಾರು ಮುರಿದರು ಎಂದು ಆಪಾದನೆ ಮಾಡಿದಳು...........ಮುಂದೆ ಮೋಜೇನಾಯಿತೆಂದರೆ ದಿಗ್ದರ್ಶಕರು ಒಳಗಿಂದೊಳಗೆ, ಧ್ವನಿಮುದ್ರಕರಿಗೆ ಅವಳು ಮಾತಾಡುತ್ತಿದ್ದುದನ್ನೆಲ್ಲಾ ರೆಕಾರ್ಡ ಮಾಡಲು ಸೂಚಿಸಿದ್ದರಂತೆ. ಪಾತ್ರ ಅಭಿನಯಿಸುವ ಮುಂಚೆ ನಾಯಕಿನ ಎದುರಿಗೇ ನಿಂತು ಹುಚ್ಚುಚ್ಚಾರ ಮಾತಾಡಹತ್ತಿದಳಂತೆ! ಸರಿ, ಮುಂಚೆ ಅವಳಿಗೆ ಗೊತ್ತಾಯಿತು ದಿಗ್ದರ್ಶಕರ ಸವಾಲು. ಅಸಹಾಯಳಾಗಿ ಸುಮ್ಮನಾಗಿಬಿಟ್ಟಳು. ಬೇಟೆ ಬಲಿಯಲ್ಲಿ ಬಿದ್ದಿತೆಂದು ದಿಗ್ದರ್ಶಕರು........’

ಅದಕ್ಕೆ ಮಿಸೆಸ್ ರಾವ್ ಕೂಡ ಮತ್ತೊಂದು ವಿಷಯ ಹೇಳಿದರು:

‘ ಮೊನ್ನೆ ರೇಡಿಯೋದಲ್ಲು ಹೀಗೇ ನಡೆಯಿತಂತೆ. ರಿಹರ್ಸಲ್

ಮಾಡೋವಾಗ ಏನೊ ಒಂದು ವಿಷಯ ಬಂದು ಒಬ್ಬಿಬ್ಬರ ನಡುವೆ ವಾಗ್ಯುದ್ಧ ಪ್ರಾರಂಭವಾಯಿತಂತೆ. ಮಾಯಿಕ್ರೊಫೋನ್ ಬಂದು ಮಾಡದೆ ಹಾಗೇ ಜಗಳಾಡಹತ್ತಿದ್ದರಂತೆ. ಮೇಲಧಿಕಾರಿಗಳ ಕೋಣೆಯಲ್ಲಿ ಲೌಡಸ್ಪೀಕರ ಮೇಲೆ ಇದೆಲ್ಲಾ ನಡೆದಾಗ—ಇವೇನು ನಾಟಕದೊಳಗಿನ ಮಾತು ಹೌದೋ ಅಲ್ಲವೋ ಎಂಬ ಸಂಶಯ ಬಂದು ಹಸ್ತಪ್ರತಿ ನೋಡೋಣ ಎಂದು ಮೇಲಿನಿಂದ ಸಂಬಂಧಿಸಿದವರನ್ನು ಕರೆಯಿಸಲಾಗಿ ಅದು ಹಸ್ತಪ್ರತಿಯಲ್ಲಿದ್ದದ್ದು ಅಲ್ಲ ಆಶು-ಸಂಭಾಷಣೆಯೆಂದರಂತೆ ಅವರು........' ಎಂದು ನಗಹತ್ತಿದಳು.

'ಈ ಮೈಕ್ರೋಫೋನ್ ಸಂಗತಿಗಳು ಬಹಳ ಮೋಜಾಗಿರುತ್ತವೆ!' ವಿದ್ಯಾ ನುಡಿದಳು.

ಅಂತೂ ಧ್ವನಿಗ್ರಹಣ ಮುಗಿದು 'ಸುರಾಸುರೀ'ಗೆ ಪ್ರಾರಂಭವಾಗಬೇಕಾದರೆ ಹನ್ನೆರಡು ಹೊಡೆಯಲಿಕ್ಕೆ ಬಂತು. ಮತ್ತೊಮ್ಮೆ ಎಲ್ಲರೂ ಗಟ್ಟಿಮುಟ್ಟಾಗಿ ಉಪಹಾರ-ಪಾನ ಮಾಡಿ ರೆಕಾರ್ಡಿಂಗ್ ತಯಾರಿ ನಡಸಿದರು.

'ಸವಿತಾ, ಮಧ್ಯಾಹ್ನದ ಊಟದ ಸಿದ್ಧತೆಯೇನು ಮಾಡೋಣ?' ರಾವ್ ಕೇಳಿದರು.

'ಸಾಂತಾಕ್ರೂಜಿಗೆ ಹೋಗಿ ಬರುವುದು ಬಹಳ ತಡವಾಗುತ್ತದೆ.'

'ಮನೆಯೊಳಗೆ ಅಡಿಗೆ ಮಾಡಿಟ್ಟು ಬಂದಿದ್ದೀರಾ?' ವಿದ್ಯಾ ಕೇಳಿದಳು.

'ಇಲ್ಲ, ಕುಕ್ಕರ ಮೇಲಿಟ್ಟು ಬಂದಿದ್ದೇನೆ. ಅನ್ನವಾಗಿ, ಬೇಳೆ ಪಲ್ಯೆ ಬೆಂದಿರುತ್ತದೆ. ಹೋದ ಮೇಲೆ ಕಾರಾ ಹುಳಿ ಹಾಕುವುದಿಷ್ಟೇ.'

'ನಿಮ್ಮ ಶಶಿರೇಖಾ ಇಷ್ಟು ಹೊತ್ತು ನಿಮ್ಮನ್ನು ಬಿಟ್ಟು ಇರುತ್ತಾಳೆಯೆ? ಪಾಪ, ಅವಳೂ ರೆಕಾರ್ಡಿಂಗ್ ನೋಡುತ್ತಿದ್ದಳಲ್ಲ?' ವಿದ್ಯಾ ನುಡಿದಳು.

'ಇಲ್ಲ ಅವಳಿಗೆ ನಮ್ಮ ಕೆಲಸದವಳ ಅಭ್ಯಾಸವೇ ಹೆಚ್ಚು. ಸಿನೇಮಾಕ್ಕೆ ಹೋದರೂ ನಾವು ಅವಳನ್ನು ಕರೆದೊಯ್ಯುವುದಿಲ್ಲ.'

'ನಿಮಗೆ ಚಡಪಡಿಕೆ ಆಗುವುದಿಲ್ಲವೆ?'

'ಅದೇಕಾಗಬೇಕು? ಅವಳಿಗಾಗಿ ನಾವು ಒಂದೂ ಕಡಿಮೆ ಮಾಡಿರುವುದಿಲ್ಲ. ಸಿನೇಮಾಕ್ಕೆ, ಸಭೆಗಳಿಗೆ ಕರೆದುಕೊಂಡು ಹೋದರೆ ಅಲ್ಲಿ ಅವಳು ಹಟ ತೆಗೆದುಬಿಟ್ಟರೆ ಇದಕ್ಕೂ ಹೆಚ್ಚಿನ ಚಡಪಡಿಕೆ ಆದೀತಲ್ಲ!......... ಮೊನ್ನೆ, ನೀವಿದ್ದಿರೊ ಇಲ್ಲವೊ ಕರ್ನಾಟಕ ಸಂಘದ ನಾಟಕದಲ್ಲಿ ಒಂದು

ಮಗು ಅಳಹತ್ತಿತು. ಆ ತಾಯಿಯನ್ನು ಎಲ್ಲರೂ ಬಾಯಿಗೆ ಬಂದಂತೆ ಅಂದು ಕಣ್ಣೊಳಗೆ ನೀರು ತರಿಸಿದರು.'

'ಇದರಿಂದ ಸಾರ್ವಜನಿಕರಿಗೆ ಎಷ್ಟು ತೊಂದರೆ. ತನಗೆಷ್ಟು ನೋವು.... ಮಕ್ಕಳ ಪ್ರೀತಿ ಮನೆಯಲ್ಲಿರಬೇಕು.' ರಾವ್ ತಮ್ಮ ಹೆಂಡತಿಯ ಮಾತಿಗೆ ಅರ್ಥ ಜೋಡಿಸಿ ಹೇಳಿದರು.

'ಅಂತೂ ನಿಮ್ಮ ಜೀವನದ ರೀತಿ ಸುವ್ಯವಸ್ಥಿತವೂ ಅರ್ಥವತ್ತಾದದ್ದೂ ಇದೆ!' ವಿದ್ಯಾ ಬಹಳ ಮೆಚ್ಚುಗೆಯಿಂದ ಮಾತಾಡಿದಳು.

'ಇಲ್ಲದಿದ್ದರೆ ಜೀವನದಲ್ಲಿ ಸ್ವಾರಸ್ಯವೆ ಉಳಿಯುವುದಿಲ್ಲ. ಜೀವನವನ್ನು ಸರಸವಾಗಿ ಮಾಡಿಕೊಳ್ಳುವ ಕಲೆ ನಮ್ಮಲ್ಲಿದೆ.' ರಾವ್ ಎಂದರು.

'ಊಟದ ವ್ಯವಸ್ಥೆ ಹೇಗೆ ಮಾಡಿದಂತಾಯಿತು? ಎಲ್ಲರೂ ಛಾಯಾಕ್ಕೆ ಹೋಗೋಣ.' ವಿದ್ಯಾ ನುಡಿದಳು.

'ಸರಿ, ಎರಡು' ಸಾಯ್ದು 'ಆದರೂ ರೆಕಾರ್ಡಿಂಗ್ ಮುಗಿಸಿ ಹೋಗೋಣ.'

ಅಂತೂ ಎರಡು ಸಾಯ್ದು ರೆಕಾರ್ಡಿಂಗ್ ಮುಗಿಸಿ ಏಳಬೇಕಾದರೆ ಎರಡು ಹೊಡೆಯಲು ಬಂತು. ಆಮೇಲೆ ಎಲ್ಲರೂ ಕಾಲ್ನಡಿಗೆಯಿಂದಲೆ 'ಛಾಯಾ'ದ ಕಡೆಗೆ ಹೊರಟರು.

'ನನ್ನ ರಜೆಯ ಸಾರ್ಥಕತೆಯ ದಿನವಿದು.' ವಿದ್ಯಾ ಮಾತೆತ್ತಿದಳು.

'ಯಾವ ರಜೆ?'

'ಕಚೇರಿಯ ರಜೆ–ಕ್ಯಾಜುಅಲ್ ಲೀವ್ಹ್' ವಿದ್ಯಾ ನಗುತ್ತ ಹೇಳಿದಳು.

'ನಿಮ್ಮ ಮನೆಯವರು ಇನ್ನೂ ಬರಲಿಲ್ಲವೆಂದು ಕಾಣುತ್ತದೆ.'

'ಸವಿತಾ, ಅವರ ಮನೆಯವರು ಬಂದ ಮೇಲೆ ಇಬ್ಬರನ್ನೂ ಒಮ್ಮೆ ಊಟಕ್ಕೆ ಕರೆಯೋಣ.'

'ಯಾಕೆ ಸವಿತಾದೇವಿಯವರ ಒಪ್ಪಿಗೆ ಇಲ್ಲದೆ ನೀವು ಅತಿಥಿಗಳಿಗೆ ಆಮಂತ್ರಣ ಕೊಡುವುದಿಲ್ಲವೇನು?'

'ಮತ್ತೆ ಅದು ಅವ್ಯವಸ್ಥೆಯ ಲಕ್ಷಣವಾಗುತ್ತದೆ. ಮನೆಯಲ್ಲಿಯ ಅಧಿಕಾರ, ಮೇಲ್ವಿಚಾರಣೆ ಎಲ್ಲಾ ಸವಿತಾನವಲ್ಲವೆ?'

'ನೀವಿಬ್ಬರೂ ಎಷ್ಟೊಂದು ತಿಳುವಳಿಕೆಯಿಂದ ಇದ್ದೀರಲ್ಲ!'

ತಮ್ಮನ್ನು ಮೆಚ್ಚಿನುಡಿದದ್ದಕ್ಕಾಗಿ ಸವಿತಾ ಕೃತಜ್ಞತೆಯ ನಗೆ ನಕ್ಕಳು.

' ನೀವು ಬಿ. ಎ. ಕ್ಕೆ ಯಾವ ವಿಷಯ ತೆಗೆದುಕೊಂಡಿದ್ದಿರಿ ಮಿಸೆಸ್ ರಾವ್ ? ' ಹಾದಿ ಸಾಗುತ್ತಿರುವಾಗ ವಿದ್ಯಾ ಕೇಳಿದಳು.

ಮಿಸೆಸ್ ರಾವ್ ನಗುತ್ತ—' ನಾನೂ ಗ್ರಾಜ್ಯುಯೇಟ್ ಅಲ್ಲ, ನಮ್ಮವರೂ ಗ್ರ್ಯಾಜ್ಯುಯೆಟ್ ಅಲ್ಲ. ನನ್ನ ಅಭ್ಯಾಸವೆಲ್ಲಾ ಮನೆಯಲ್ಲೇ ಆಗಿದೆ. ನಮ್ಮವರೆ ನನ್ನ ಗುರುಗಳು.........ಇನ್ನೂ ಅನೇಕ ವಿಷಯಗಳಲ್ಲಿ ವಿಚಾರಗಳಲ್ಲಿ ಅವರು ನನ್ನ ಗುರುಗಳಾಗಿದ್ದಾರೆ. ' ಎಂದು ಬಹಳ ಭಾವನಾಪೂರ್ಣವಾಗಿ ಹೇಳಿದರು.

' ಅದರ ಅರ್ಥ ಎಂದರೆ ಗುರುವಾಗಿ ನಾನು ಬಹಳ ಹಿಂಸಿಸಿದ್ದೇನೆ ಅಂತ. ನಿಜವಾಗಿಯೂ ಟಾಯಿಮ್ಸ್ ಓದಿಸುವಾಗ ನಾನು ಕೊಟ್ಟ ಹಿಂಸೆ ಅಷ್ಟಿಷ್ಟಲ್ಲ. ' ರಾವ್ ಎಂದರು.

' ಆದರೆ ಅದರ ಫಲವಾಗಿ ನಾನು ಟಾಯಿಮ್ಸ್‌ನಲ್ಲಿ ' ರೀಡರ್ಸವ್ಯ್ಹೂಜ' ಕಾಲಂನಲ್ಲಿ ಒಂದು ತಿಂಗಳ ವರೆಗೆ ಒಂದು ವಾದವಿವಾದ ಬೆಳೆಯಿಸಿದೆ.... ಅಂತೂ ಒಳ್ಳೇ ಚಳವಳಿ ಎಬ್ಬಿಸಿತು ಆ ವಾದವಿವಾದ. '

' ಆ ಮೇಲೆ ನಿನ್ನ ಬೆಂಬಲಕ್ಕೆ ಮೂವರು ವಿಮರ್ಶಕರು ಬಂದರಲ್ಲವೆ ಸವಿತಾ ? ' ರಾವ್ ಕೇಳಿದರು

' ಅಂತೂ ಮುಖಪರಿಚಯ ಸಹ ಇಲ್ಲದೆ ಅವರು ನಮ್ಮ ಉತ್ತಮ ಗೆಳೆಯರಾಗಿದ್ದಾರೆ. ' ಸವಿತಾ ಹೇಳಿದಳು.

' ಯಾವ ವಿಷಯ ಕುರಿತು ವಾದ ಬೆಳಸಿದ್ದಿರಿ ? ' ವಿದ್ಯಾ ಕೇಳಿದಳು.

' ಇದೇ ' Abduction of women ' (ಸ್ತ್ರೀಯರ ಅಪಹರಣ)

' ಅವೆಲ್ಲಾ ಕಟಿಂಗ್ಸ್ ಇದ್ದರೆ ನನಗೊಮ್ಮೆ ಕೊಡಿರಿ. ನಾನು ಓದಿ ಕೊಡುತ್ತೇನೆ. '

' ಓದಿ ನಿಮ್ಮ ಅಭಿಪ್ರಾಯವನ್ನೂ ಕೊಡಬೇಕು, ಕಟಿಂಗ್ಸ ಅಷ್ಟೆ ಅಲ್ಲ.'

' ಅವಶ್ಯವಾಗಿ....ಕೊಡಬೇಕೆನಿಸಿದರೆ. '

' ಎಷ್ಟೋ ಸಲ ' ರೀಡರ್ಸವ್ಯ್ಹೂಜ ' ಬಹಳ ಮೋಜು ಇರುತ್ತದೆ. ' ರಾವ್ ಮಾತು ಮುಂದರಿಸಿದರು.

' ಸಂತತಿ ನಿಯಮನದ ಮೇಲೇನಾದರೂ ಚರ್ಚೆಬೆಳೆದದ್ದುಂಟೇನು?,

' ಏಕೆ ನೀವು ಬೆಳೆಯಿಸಬೇಕೆನ್ನುತ್ತೀರೇನು ? '

' ಸಂತತಿನಿಯಮನವು ಅಧರ್ಮವಿಚಾರ ಎನ್ನುತ್ತಾರಲ್ಲ, ನಿಮ್ಮ ಅಭಿಪ್ರಾಯವೇನು ? ' ವಿದ್ಯಾ ಮಿಸೆಸ್ ರಾವ್ ಅವರಿಗೆ ಕೇಳಿದಳು.

' ನಾವು ಬಹಳಷ್ಟು ನಮ್ಮ ಮೂಢಭಾವನೆಗಳನ್ನು ಬಿಟ್ಟುಕೊಡದಿದ್ದರೆ ನಮ್ಮ ಜೀವನ ಇನ್ನೂ ಕಷ್ಟಮಯ ಆಗುತ್ತದೆ. ' ಮಿಸೆಸ್ ರಾವ್ ಎಂದರು.

' ಭಾವನೆ ಬಿಟ್ಟು ಕೊಡುವುದೆಂದರೆ ಹಡೆದ ಮಕ್ಕಳನ್ನೂ ಕೈ ಹಿಡಿದ ಗಂಡನನ್ನೂ ದ್ವೇಷಿಸಬೇಕೆಂದಲ್ಲ. ' ರಾವ್ ಎಂದರು.

' ಕೈ ಹಿಡಿದ ಹೆಂಡತಿಯನ್ನೂ ಎಂದು ಹೇಳಿ ' ಮಿಸೆಸ್ ರಾವ್ ಸಮರ್ಪಕವಾಗಿ ಪೂರೈಸಿದರು ಮಾತು.

ವಿದ್ಯಾ ಗೆಲುವಿನ ನಗೆ ನಕ್ಕು—' ಬಹಳ ಸರಿಯಾದ ಮಾತು. ' ಎಂದಳು.

ಫ್ಯಾಮಿಲಿ ರೂಂ ಯಾವೂ ಖಾಲಿ ಇಲ್ಲದೆ ಸ್ವಲ್ಪಹೊತ್ತು ಕಾಯಬೇಕಾಯಿತು. ಒಂದು ರೂಮಿನಿಂದ ಮಾಣಿ ತಾಟು ತೆಗೆದುಕೊಂಡು ಬರುತ್ತಲೆ,

' ಮೂರು ತಾಟು ' ರಾವ್ ಕನ್ನಡದಲ್ಲಿ ಹೇಳಿದರು ಮಾಲಕರಿಗೆ.

' ಏನು ಇವರಿಗೂ ಕನ್ನಡ ಬರುತ್ತದೆಯೆ ? '

' ಮುಂಬಯಿಯಲ್ಲಿ ಮಂಗಳೂರ ಹೋಟ್ಲುಗಳೆ ಬಹಳ. '

' ಹೌದೆ ? ನಮ್ಮೂರವರೆ ಆದರಲ್ಲ ! '

' ನಿಮ್ಮದೂ ಮಂಗಳೂರೆ ? ' ಮಿಸೆಸ್ ರಾವ್ ಒಳ್ಳೆ ಆತುರದಿಂದ ಕೇಳಿದರು.

' ನಿಮ್ಮದು ? '

' ನನ್ನದು ಕುಂದಾಪುರ. ಇವರದು ಕಾಸರಕೋಡು. '

' ನಿಮ್ಮ ಮನೆಯವರದು ? '

' ಧಾರವಾಡ. '

ಧಾರವಾಡ ಎಂಬ ಶಬ್ದ ಒಳಗೆ ಊಟಕ್ಕೆ ಕುಳಿತ ವ್ಯಕ್ತಿಯೊಂದನ್ನು ಆಕರ್ಷಿಸಿದಂತೆ ತೋರಿತು.

ಅದೇ ಕೋಣೆಯಿಂದ ಮೂವರು ಹೊರಬಂದರು.

' ಮೂರು ಸ್ಥಳ ಖಾಲಿ ಇವೆ ' ಮಾಲಕರು ತಿಳಿಸಿದರು ಮೂವರೂ ಕೋಣೆಯೊಳಗೆ ಹೋದರು.

' ನಿಮ್ಮದು ಪ್ರೇಮವಿವಾಹ ಏನು ? ' ಮಿಸೆಸ್‌ರಾವ್ ಕೇಳಿದರು ವಿದ್ಯಾವತಿಗೆ. ವಿದ್ಯಾಪತಿ ಸುಮ್ಮನಿದ್ದಳು. ರಾವ್ ತಮ್ಮ ಹೆಂಡತಿಯನ್ನು ನೋಡಿದರು. ಪರಕೀಯರು ಕೂತಿದ್ದಾರೆಂಬುದನ್ನು ಮಿಸೆಸ್‌ರಾವ್ ಗ್ರಹಿಸಿ ಕೊಂಡರು. ಮೂರೂ ತಾಟು ಬಂದುವು.

' ನಿಮಗೆ ಭಕ್ರಿ ಅಭ್ಯಾಸ ಆಗಿದೆಯೇ ಹಾಗಾದರೆ ? ' ಮಿಸೆಸ್‌ರಾವ್ ಕೇಳಿದರು.

' ಇಲ್ಲ ' ವಿದ್ಯಾ ಹೇಳಿದಳು.

' ಏಕೆ ? ' ಮಿಸೆಸ್‌ರಾವ ಕೇಳಿದರು.

' ಏಕೆಂದರೇನು. ಲೋಕವು ಭಿನ್ನರುಚಿಯಾಗಿಲ್ಲವೆ ? '

ರಾಮನಾಥ ಮುಖ ಮೇಲಕೆತ್ತಿದ.

' ಇವರೇ ನಮ್ಮ ಮನೆಯವರು ಮಿಸ್ಟರ ರಾಮನಾಥ ! ' ವಿದ್ಯಾ ಪರಿಚಯಮಾಡಿಕೊಟ್ಟಳು. ರಾವ್ ದಂಪತಿಗಳಿಗೆ ಅತ್ಯಂತ ಆಶ್ಚರ್ಯ! ಒಬ್ಬರನ್ನೊಬ್ಬರು ದಂಗುಬಡೆದು ನೋಡಹತ್ತಿದರು.

' ಎಲ್ಲಾ ಸೌಖ್ಯವೇ ಮಿಸ್ಟರ ರಾಮನಾಥ ? ' ಎಂದು ಬಹಳ ನಯವಾಗಿ ರಾವ್ ರಾಮನಾಥನನ್ನು ಸ್ವಾಗತಿಸಿದರು.

' ಇದೇನು ? ಊರಲಿಲ್ಲ ಎನ್ನುತ್ತಿದ್ದಿರಲ್ಲ ? ' ಮಿಸೆಸ್‌ರಾವ್ ವಿದ್ಯಾವತಿಯನ್ನು ಕೇಳಿದರು.

' ಹೌದು. ನಾನೂ ಇವೊತ್ತೇ ವೇಳೆಗೆ ಬಂದೆ ! '

' ಇದೇನು ವಿದ್ಯಾವತಿ ? ಒಳಗೆ ಬಂದು ಎಷ್ಟೊತ್ತಾದರೂ ಸುಮ್ಮನೆ ಇದ್ದೀರಲ್ಲ ? '

' ಇನ್ನೇನು ಮಾಡಬೇಕು ನಿನ್ನ ಎದುರಿಗೆ ?....ಪಾಪ, ವಿದ್ಯಾವತಿ ಬಹಳ ಲಜ್ಜಾವತಿಯೆಂದು ಕಾಣುತ್ತದೆ. '

ರಾಮನಾಥನು ರಾವ್ ಅವರ ಮಾತಿಗೆ ಮುಗುಳ್ನಗೆ ನಕ್ಕ.

' ಧಾರವಾಡದಿಂದ ಬಂದಿರಾ ಮಿಸ್ಟರ ರಾಮನಾಥ್ ?....ನೋಡಿ ನಿಮ್ಮ ಮಿಸೆಸ್ ನಮಗೆ ರೇಡಿಯೋದಲ್ಲಿ ಸಿಕ್ಕಿದ್ದರು. ಆವೊತ್ತಿನಿಂದ ನಿಮ್ಮನ್ನು ವಿಚಾರಿಸುತ್ತಲೆ ಇದ್ದೇವೆ. ಆಲ್ವೇನು ಸವಿತಾ ? ' ಎಂದು ಹೆಂಡತಿಯತ್ತ ಹೊರಳಿದರು.

ರಾವ್ ದಂಪತಿಗಳ ಸರಳ ಸ್ವಭಾವ ಒಮ್ಮೆಲೆ ರಾಮನಾಥನ ಮೇಲೆ

ಪರಿಣಾಮವನ್ನುಂಟುಮಾಡಿತು. ‘ ನಾನು ಧಾರವಾಡದಲ್ಲೇ ಕೇಳಿದೆ ನಿಮ್ಮ ರೇಡಿಯೋ ಕಾರ್ಯಕ್ರಮ ’ ಎಂದ.

‘ ನಿಮ್ಮ ಶ್ರೀಮತಿಯವರ ಪಾತ್ರ ಹೇಗಾಯಿತು ?....ಏಕೆಂದರೆ ಅದೇ ದಿವಸ ಸವಿತಾನೊಂದಿಗೆ ತಮ್ಮ ಪಾತ್ರವನ್ನು ಅದಲುಬದಲು ಮಾಡಿದ್ದರು. ’

‘ ನನಗೆ ಸಹ ಅಷ್ಟು ಸಾಧಿಸುತ್ತಿರಲಿಲ್ಲ. ಆ ಪಾತ್ರ ! ’

‘ ಹೌದು ಬಹಳ ಸಹಜವಾಗಿ ಬಂತು.’ ರಾಮನಾಥನೆಂದ.

‘ ಅಂದು ವಿದ್ಯಾವತಿ ಕೂಡ ಅದೇ ಅಭಿಪ್ರಾಯ ಪಟ್ಟಿರಲ್ಲ. ಪತಿ ಪ್ರತೆಯ ಪಾತ್ರ ತಮ್ಮ ಮನೋವೃತ್ತಿಗೆ ಸರಿಹೋಗದ ಕಲ್ಪನೆ ಅಂತ! ’

ರಾಮನಾಥನ ಊಟ ಬೇಗ ಮುಗಿದರೂ ಬಡೇಸೋಪು ಬಾಯಾಡಿ-ಸುತ್ತ ಅವರೊಂದಿಗೆ ಹರಟೆ ಹೊಡೆಯುತ್ತ ಕೂತ. ಹೊರಗೆ ಬಂದು ಬಿಲ್ ಕೊಡುವ ಮುಂದೆ ರಾವ್ ರಾಮನಾಥನ ನಡುವೆ ದೊಡ್ಡ ಕುಸ್ತಿಯೇ ಆಯಿತು. ಕೊನೆಗೆ ರಾಮನಾಥನೇ ಯಶಸ್ವಿಯಾದ ಬಿಲ್ ಕೊಡುವಲ್ಲಿ.

‘ ಹಾಗಾದರೆ ಭಾನುವಾರ ಬೆಳಿಗ್ಗೆ ಇಬ್ಬರೂ ನಮ್ಮಲ್ಲೇ ಬಂದುಬಿಡಿರಿ. ’ ಮಿಸೆಸ್ ರಾವ್ ಎಂದರು.

‘ ಇಲ್ಲ, ಇನ್ನೊಮ್ಮೆ ಬರುತ್ತೇನೆ; ಈ ಸಲ ಕ್ಷಮಿಸಿರಿ. ’

‘ ಏಕೆ ಬೇರೆ ‘ ಎಂಗೇಜಮೆಂಟ್ಸ ’ ಉಂಟೇನು ? ’

‘ ಇಲ್ಲಾ ಮನೆಯಲ್ಲಿ ಹುಡುಗನಿಗೆ ಮೈಯಲ್ಲಿ ಅಷ್ಟು ಸರಿಯಿಲ್ಲ. ’ ರಾವ್ ದಂಪತಿಗಳು ಆಶ್ಚರ್ಯದಿಂದ ವಿದ್ಯಾವತಿಯ ಕಡೆಗೆ ನೋಡಿದರು. ವಿದ್ಯಾವತಿ ಮುಖ ಕೆಳಗೆ ಹಾಕಿದಳು.

‘ ನಿಮ್ಮ ಮಗುವನ್ನು ನಾವು ನೋಡಿಯೆ ಇಲ್ಲವಲ್ಲ ?........’ ರಾವ್ ಕೇಳಿದರು ವಿದ್ಯಾವತಿಗೆ.

‘ ಮತ್ತೆ ನಿಯಂತ್ರಣದ ಮಾತು ಹೇಳುತ್ತಿದ್ದಿರಲ್ವೆ? ’ ಮಿಸೆಸ್ ರಾವ್ ಚೇಷ್ಟೆಯಿಂದ ವಿದ್ಯಾವತಿಯ ಡುಬ್ಬ ಚಪ್ಪರಿಸಿದರು.

‘ ನೀವೂ ಬನ್ರಿ ಗ್ರಾಮ್ಯೊಫೋನ್ ಕಂಪನಿಗೆ ಹೋಗೋಣ. ಧ್ವನಿ ಮುದ್ರಣ ಇದೆ. ’

‘ ಕ್ಷಮಿಸಿರಿ. ಇವೊತ್ತೆ ನಾನು ಕೆಲಸಕ್ಕೆ ಹಾಜರಆಗಿದ್ದೇನೆ. ಇನ್ನೊಮ್ಮೆ ಬರುತ್ತೇನೆ. ’

ರಾಮನಾಥ ಕಚೇರಿಗೆ ಹೊರಟುಹೋದ. ವಿದ್ಯಾವತಿ ರಾಮನಾಥನೊಂದಿಗೆ ವಿಶೇಷ ಮಾತಾಡದೆ ರಾವ್ ದಂಪತಿಗಳೊಡನೆ ಫಿರೋಜಶಹಾ-ಮೆಹತಾ ರೋಡಿಗೆ ನಡೆದಳು.

'ಇದೇನು ಮಗುವಿಗೆ ಮೈಯಲ್ಲಿ ಸರಿಯಿಲ್ಲವೆ?' ಮಿಸೆಸ್ ರಾವ್ ಕೇಳಿದರು.

'ಏನೊ!'

'ಆ ದಿನ ನಿಮ್ಮನ್ನು ಕಳಿಸಲಿಕ್ಕೆ ಬಂದಾಗ ನಿಮ್ಮ ಮಗುವನ್ನು ತೋರಿಸಲಿಲ್ಲವಲ್ಲ?'

'ನಾನೇ ನೊಡಿಲ್ಲ ಇನ್ನೂ!'

'ಅರೆ?'—ಮಿಸೆಸ್ ರಾವ್ ಬಹಳ ಚಕಿತರಾದರು.

'ಮಿಸೆಸ್ ರಾವ್, ಇದು ನನ್ನ ಎರಡನೆಯ ಸಂಬಂಧ.'

'ಏನಂತೀರಿ ವಿದ್ಯಾ?'

'ನಾನವರಿಗೆ ಎರಡನೆಯ ಹೆಂಡತಿ.'

'ಓಹೋ! ಮಗೂ ಮೊದಲಿನವರದೆ?' ಮಿಸೆಸ್ ರಾವ್ ಕೇಳಿದರು.

'ಹೌದಂತೆ.'

ರಾವ್ ದಂಪತಿಗಳು ಅಷ್ಟಕ್ಕೆ ಸುಮ್ಮನಾದರು. ಗಂಡನಿಗಿಂತ ಹೆಂಡತಿ ಸೂಕ್ಷ್ಮ, ಹೆಂಡತಿಗಿಂತ ಗಂಡ ಸೂಕ್ಷ್ಮ.

ಮೂರನೆಯ ಸಾಯ್ಸು ವಿದ್ಯಾವತಿಯ ಪ್ರವೇಶದಿಂದ ಪ್ರಾರಂಭವಾಗುತ್ತಿತ್ತು. ಧ್ವನಿಮುದ್ರಕ ರಾಜನ್ ಅವರು ಆಗಾಗ ಕೇಳಿಬಲ್ಲ ಕೆಲವೊಂದು ಕನ್ನಡ ಶಬ್ದಕೋಶದ ಬಂಡವಾಳದ ಮೇಲೆ ತಾವೂ ಕನ್ನಡ ಬಲ್ಲ-ವರು ಎಂದು ಗ್ರಾಮೊಫೋನ್ ಕಂಪನಿಯಲ್ಲಿ ಕನ್ನಡಕ್ಕೆ ಅಧಿಕಾರವಾಣಿಯಾಗಿದ್ದರು. ವಿದ್ಯಾವತಿಯ ಮಾತುಮಾತಿಗೂ ಅವಳ ಪ್ರಶಂಸೆ ಮಾಡುವುದು, 'ರುಂಬ ಸೊಗಸು' ಎನ್ನುವುದು. ವಿದ್ಯಾವತಿಗೂ ಅವರ ಪ್ರಶಂಸೆಯಿಂದ ಖುಷಿ ಎನಿಸಿತು. ರಾಜನ್ ನೋಡುವುದಕ್ಕೆ ಕಪ್ಪಾಗಿದ್ದರೂ ಮುಖದ ಮೇಲೆ ಕಳೆಯಿತ್ತು. ಅವರ ತಲೆಯ ಉಂಗುರು-ಗೂದಲು ಅಷ್ಟೊಂದು ಚೆಲುವಿಕೆಯಿಲ್ಲದ ಮುಖಕ್ಕೆ ಸೊಗಸನ್ನು ತಂದಿತ್ತು. ವಿದ್ಯಾವತಿ ಮೈಕಿನ ಎದುರಿಗೆ ನಿಂತಾಗ ಎದುರಿನ ಕೋಣೆಯಲ್ಲಿ ಧನ್ಸಿ ಮುಟ್ಟಿಸಲು

ನಿಂತ ರಾಜನ್‌ರನ್ನೆ ನೋಡಬೇಕಾಗುತ್ತಿತ್ತು. ರಾಜನ್‌ರು ಸೂತ್ರದ ಗೊಂಬೆಯಂತೆ ಮೈಕಿನ ಸುತ್ತಲೂ ತಿರಿಗಿಸಿದತ್ತ ನಿಲ್ಲಬೇಕು. ಒಂದೆರಡು ಸಲ ರಾಜನ್ ಸ್ವತಃ ವಿದ್ಯಾವತಿಯ ಎರಡೂ ರಟ್ಟೆ ಮೆಲ್ಲನೆ ಹಿಡಿದು ಮೈಕಿಗೆ ಸರಿಯಾಗಿ ನಿಲ್ಲಿಸಿ—' Now it is perfect ' (ಈಗ ಸರಿಯಾಗಿದೆ) ಎಂದು ಧ್ವನಿ ಮುದ್ರಿಸಲು ಒಳಗೆ ನಡೆದರು. ವಿದ್ಯಾವತಿ ಅವರು ಹೇಳಿದಂತೆ ಗೊಂಬೆಯಂತೆ ನಿಂತಿದ್ದಳು.

ಅಂತೂ ' ರಿಟೇಕ ' (ತಿರಗುಪ್ಪು) ಇಲ್ಲದೆ ಮೂರನೆಯ ಸಾಯಿಡ- (ಥ.) ಮುಗಿಯಿತು.

' ಉಚ್ಚಾರದಲ್ಲಿ ನಿಮ್ಮ ವಾಣಿ ಪ್ರಸ್ಫುಟಿತವಾಗಿದೆ ! ' ಎಂದು ಹೊಗಳಿದರು ರಾವ್ ದಂಪತಿಗಳು. ವಿದ್ಯಾ ಖುಷಿಯಿಂದ ಮುಗುಳ್ನಗೆ ನಕ್ಕಳು.

' ನೀವು ಪಿಕ್ಚರ್‌ನಲ್ಲಿ ರುಂಬ ನಲ್ಲಾಗಿ ಕೆಲಸ ಮಾಡ್ತೆರೆ ' ಎಂದು ನುಡಿದರು ರಾಜನ್. ವಿದ್ಯಾವತಿಯ ಅಹಂಮ್ಮು ಪೂರ್ಣ ಜಾಗೃತವಾಯಿತು.

ನಾಲ್ಕನೆಯ ಸಾಯಿಡಿನಲ್ಲಿ ವಿದ್ಯಾವತಿಯ ಕೆಲಸವಿರಲಿಲ್ಲ. ವಿದ್ಯಾವತಿ ಧ್ವನಿಗ್ರಹಣ ರೂಮಿನಲ್ಲೇ ನಿಂತುಕೊಂಡು ನಿರೀಕ್ಷಿಸತೊಡಗಿದಳು. ನಾಲ್ಕನೆಯ ಸಾಯಿಡು ಪ್ರಾರಂಭ ಮಾಡಲು ಸಿದ್ಧತೆ ಮಾಡಿ ಒಳಗೆ ಬಂದು ಭದ್ರವಾಗಿ ಬಾಗಿಲು ಹಾಕಿದರು. ' ಟುರ್ ರ್ ' ಎಂದು ಎರಡು ಸಲ ಬೆಲ್ಲ್ ಕೊಟ್ಟರು. ಮೂರನೆಯ ಬೆಲ್ ಕೊಟ್ಟವರೆ ಕೆಂಪು ದೀಪ ಹಚ್ಚಿ 'ಕಟರನ್ನು' ವ್ಯಾಕ್ಸಿನ ಮೇಲೆ ಬಿಟ್ಟರು. ಆ ಗಡಿಬಿಡಿಯಲ್ಲಿ ಎರಡು ಮೂರು ಸಲ ವಿದ್ಯಾವತಿಯ ಭುಜ ಸೆರಗು, ರಾಜನ್ನರಿಗೆ ತಾಗಿದುವು. ಇಬ್ಬರೂ ಅದನ್ನು ಅಲಕ್ಷ್ಯ ಮಾಡಿದರು.

' You know Tamil ? ' (ತಮಿಳು ಬರುತ್ತದೊ?)ಆ ಅವಸರದಲ್ಲೇ ವಿದ್ಯಾವತಿಯನ್ನು ಮಾತಾಡಿಸಿದರು.

' ಇಲ್ಲ ' ಎಂದಳು ವಿದ್ಯಾ.

' ತಮಿಳ್ ಪಿಕ್ಚರ್‌ನಲ್ಲಿ ಬರುತ್ತೆರೆ ? ' ಎಂದರು ರಾಜನ್. ವಿದ್ಯಾ ಮೋಜಿನಿಂದ ನಕ್ಕಳು.

' I will introduce you to the Tamil director. ' (ನಿಮ್ಮನ್ನು ನಾನು ತಮಿಳು ದಿಗ್ದರ್ಶಕರಿಗೆ ಪರಿಚಯ ಮಾಡಿಕೊಡುತ್ತೇನೆ.)

ವಿದ್ಯಾ ಸುಮ್ಮನಿದ್ದಳು.

'ಅಂಧೇರಿ ಸ್ಟುಡಿಯೊ ಹೋಗ್ತಿರಿ ನಾನ್ ನೀನ್ ?'

ವಿದ್ಯೆಗೆ ಅದರರ್ಥವಾಯಿತು. ವಿಶೇಷ ಸಂಭ್ರಮ ತೋರದೆ ಬರಿ ಗೋಣು ಹಾಕಿದಳು.

ಅಂತೂ ಧ್ವನಿಮುದ್ರಣ ಮುಗಿಯಲಿಕ್ಕೆ ನಾಲ್ಕು ಹೊಡೆಯಿತು.

'ನೀವು ಏನು ಆಫೀಸಿಗೆ ಹೋಗಬೇಕೊ, ಇಲ್ಲವೆ ದಾದರಿಗೆ ಬರ್ತಿರಾ?' ರಾವ್ ಕೇಳಿದರು.

'ಇಲ್ಲ ನನಗೆ ಸ್ವಲ್ಪ ಕೆಲಸವಿವೆ ಫೋರ್ಟಿನಲ್ಲಿ.' ವಿದ್ಯಾ ಉತ್ತರವಿತ್ತಳು.

'ಒಮ್ಮೆ ನಿಮ್ಮ ಮನೆಯವರನ್ನು ಕರೆದುಕೊಂಡು ನಮ್ಮ ಮನೆಗೆ ಬರ್ರಿ'

ವಿದ್ಯಾ ಹೂಂಗುಟ್ಟಿದಳು.

ರಾವ್ ದಂಪತಿಗಳು ಬಹಳ ಬಲವಂತ ಪಡಿಸದೆ ಉಪಚಾರಕ್ಕೆ ಮಾತು ಮುಟ್ಟಿಸುವಂತೆ ತೋರಿತು. ವಿದ್ಯಾವತಿಯೊಂದಿಗೆ ಛಾಯಾಕ್ಕೆ ಹೋಗುವಾಗಿನ ಉತ್ಸಾಹ 'ಛಾಯಾ'ದಿಂದ ಬಂದ ಮೇಲೆ ಅವರಲ್ಲಿ ಉಳಿದಿರಲಿಲ್ಲ.

ೞ ೞ ೞ ೞ

'ಪೇಪೂರ್! ಜೂನೀ ರದ್ದೀ ಪೇಪೂsssರ್!' ಹೊರಗೆ ರದ್ದಿ ಕಾಗದ-ದವನು ಒದರುತ್ತ ನಡೆದಿದ್ದ. ಛಬೆ ಒಮ್ಮೆಲೆ ಹೊರಗೆ ಬಂದು ಬಾಗಿಲು ತೆರೆದು ಅವನನ್ನು ಮೇಲಕ್ಕೆ ಕರೆದಳು. ಆಡಮಾಡ ಹುಡುಕಿ ಇದ್ದುಬಿದ್ದ ಎಲ್ಲಾ ಪೇಪರುಗಳನ್ನು ಒಂದೆಡೆಗೆ ಒಟ್ಟಿದಳು. ಧಾರಣಿಯಲ್ಲಿ ಬಹಳ ಜಿಕೇರಿ ನಡೆದು ತುಕಡಿ ರದ್ದಿ ಅಖಂಡ ಪೇಪರು ಎಲ್ಲಾಸೇರಿ ಐದಾಣೆಗೆ ಒಂದು ಪೌಂಡು ಎಂದುಮಾತುಮಾಡಿ ಕಾಗದ ತೂಗಿಸಹತ್ತಿದಳು. ಮೂರು ಪೌಂಡಿಗೆ ಅರ್ಧಸೇರಿನಷ್ಟು ಕಡಿಮೆಯಾಯಿತು. ಆದರೂ ಛಬೆ ಒಂದು ರೂಪಾಯಿ ಪೂರ್ಣ ಕೊಡಬೇಕೆಂದು ಹಟ ಹಿಡಿದಳು. ಕಾಗದದವ ಇನ್ನೂ ಮೂರು ಪಾವುಸೇರು ಕಾಗದ ಬೇಕೆಂದು ಹಾಕ್ಯಾಡತೊಡಗಿದ. ಛಬೆ ಗುಣುಗುಡುತ್ತ

ಒಳಗೆ ಮತ್ತೆ ಕಾಗದ ಹುಡುಕಲು ಹೋದಳು. ರಾಮನಾಥ ಅಷ್ಟರೊಳಗೆ ಮೇಲೆ ಬಂದು ಇವರ ಹಾಕ್ಯಾಟ ಕೇಳುತ್ತಲಿದ್ದ. ಛಬಿ ಒಳಗೆ ಹೋಗಲು ಪೇಪರಿನವನಿಗೆ ಛಬಿಗೆ ಒಂದು ರೂಪಾಯಿ ಕೊಟ್ಟುಬಿಡಬೇಕೆಂದೂ ಕಡಿಮೆ ಬಿದ್ದ ಕಾಗದ ತಾನು ಕೊಡುವೆನೆಂದೂ ಸನ್ನೆಮಾಡಿ ತಿಳಿಸಿದ.

' ಆಣಖಿನ್ ಜುನೇ ಪೇಪರ್ಸ ನಾಹಿತ್ ಬಾಬಾ. ಉಗಾಚ ಭಾಂಡೂ ನಕೋಸ. ' (ಇನ್ನು ರದ್ದೀ ಕಾಗದ ಇಲ್ಲಪ್ಪಾ. ಸುಮ್ಮನೆ ಜಗಳಾಡಬೇಡ.)

' ಬಽರ ಘ್ಯಾ ಬಾಯಿ ' (ಆಗಲಿ ಹಿಡಿರಿ ಬಾಯಿ) ಎಂದು ಕಾಗದದವ ಒಂದು ರೂಪಾಯಿ ಕೊಟ್ಟು ಹೊರಬಿದ್ದ. ಛಬಿ ಒಳಗೆ ಹೋದಳು. ರಾಮನಾಥನ ಮನೆಯ ಬಾಗಿಲ ಸಪ್ಪಳಾಯಿತು. ನೋಡಲೆಂದು ಹೊರಗೆ ಬಂದಳು. ಕಾಗದದವ ಅವರ ಮನೆಯ ಬಾಗಿನಿಂದ ಹೊರಗೆ ಬಂದ.

' ಯಾಲಾಚ ಪೇಪರ ದಿಲೆ ಕಾಯ ಆಪಣಹಿ ? ' (ನೀವೂ ಇವನಿಗೇ ರದ್ದಿ ಕಾಗದ ಕೊಟ್ಟಿರೇನು?)

' ಹೋ. '

ಕಾಗದದವ ನಗುತ್ತ ಹೋದ. ಛಬಿಗೆ ಏನೋ ಸಂಶಯ ಬಂತು. ಅವಳ ಸೂಕ್ಷ್ಮ ಮತಿಗೆ ಆಗಳಿನ ಕ್ಷುಲ್ಲಕತನ ಗುಡ್ಡದಷ್ಟು ಎದ್ದು ನಿಂತಿತು. ರಾಮನಾಥ ತನ್ನ ಬಗ್ಗೆ ಏನು ತಿಳಿದುಕೊಂಡನೋ ಎಂದು ಬಹಳ ಹೇನಾಯ ಪಟ್ಟುಕೊಂಡಳು. ಆದರೂ ಏನೆಂದು ರಾಮನಾಥನ ಮುಂದೆ ಆಡಬೇಕೊ ತಿಳಿಯಲಿಲ್ಲ. ರಾಮನಾಥನು ಮತ್ತೆ ತಾನು ದೊಡ್ಡಿಸ್ತನ ತೋರಬಂದೆನಲ್ಲ ಎಂದುಕೊಂಡು ಎಲ್ಲಿ ಮನಸ್ಸಿಗೆ ಕೆಡುಕೆನಿಸಿಕೊಳ್ಳುವನೊ ಎಂದು ಆಲೋಚಿಸಿ ಸುಮ್ಮನೆ ಇದ್ದಳು.

' ಮೋಹನ ಗಪ್ಪ ಇದ್ದಾನ ? '

ರಾಮನಾಥನ ಕನ್ನಡ ಪ್ರಶ್ನೆಗೆ ಛಬಿ ನಕ್ಕುಬಿಟ್ಟಳು.

' ಅತಾ ಮೀ ಕಾನಡೀತಚ ಬೋಲಣಾರ, ' (ನಾನಿನ್ನು ಕನ್ನಡದಲ್ಲೇ ಮಾತನಾಡುವವ.)

' ಬಽರ ಬಽರ ' (ಆಗಲಿ ಆಗಲಿ.) ಛಬಿ ನಗುತ್ತ ಹೇಳಿದಳು.

' ಮೋಹನ ಗಪ್ಪ ಇದ್ದಾನ ? '

' ಹೂಂ ಗಪ್.... ' ನಕ್ಕಳು ಛಬಿ. ಒಳಗಿನಿಂದ ಮೋಹನ ಕೈಯಲ್ಲಿ

ಗ್ಲುಕೋಜ ಬಿಸ್ಕೀಟು ಹಿಡಿದುಕೊಂಡು ಹೊರಗೆ ಬಂದ. ಮೋಹನನ ಮುಖದ ಮೇಲೆ ಏನೊ ಒಂದು ವಿಲಕ್ಷಣ ಮುಖಮುದ್ರೆ. ನೀರ ಹೊರಗಿನ ಮೀನಿನಂತಾಗಿದ್ದನು. ಛಬಿ ಶಾರಕ್ಕನಂತೆಯೇ ಭಾಸವಾಗುತ್ತಿದ್ದರೂ ಶಾರಕ್ಕನ ಮೇಲಿನ ಸಲುಗೆಯನ್ನು ಇಲ್ಲಿ ತೆಗೆದುಕೊಳ್ಳಲಿಕ್ಕೆ ಬಾರದು ಎಂದು ನಾಲ್ಕು ವರುಷದ ಮಗುವಿಗೂ ಅನಿಸುವಂತಿತ್ತು. ರಾಮನಾಥ ಮೋಹನನನ್ನು ಎತ್ತಿಕೊಂಡ. ಎತ್ತಿಕೊಂಡ ಕೂಡಲೆ ನೆನೆನೆನಿಸಿ ಬಿಕ್ಕಿದಂತೆ ಮಾಡುತ್ತಿದ ಮೋಹನ.

'ಫಾರ್‌ಚ ರಡ್ಲ್ಯಾಸಾರಖಾದಿಸ್ತೋ, ನಾಹಿ ಕಾ ?'
( ಬಹಳ ಅತ್ತಂತೆ ಕಾಣುತ್ತದೆ. ಹೌದೇನು ?)

'ನಾಹಿ, ನಾಹಿ ತಸ ಕಾಹೀ ನಾಹಿ' (ಉಹುಂ ಹಾಂಗೇನಿಲ್ಲ.) ಛಬಿ ಮುಚ್ಚಿಕೊಳ್ಳಹೋದರೂ ಅದು ಸಾಧ್ಯವಾಗಲಿಲ್ಲ.

ಮೋಹನ ಎರಡು ತಾಸಿನ ಮ್ಯೇಲೆ ಒಂದೇಸವನೆ ಉಸುರುಗಟ್ಟಿ ಅತ್ತಿದ್ದ. ಛಬಿಗೆ ಅವನನ್ನು ಸಮಾಧಾನ ಮಾಡಬೇಕಾದರೆ ತನ್ನ ಕಣ್ಣೊಳಗೇ ನೀರು ಬಂದು ಹೋಗಿದ್ದುವು. ಮೋಹನನನ್ನು ರಾಮನಾಥನಿಗೆ ಒಪ್ಪಿಸಿ ಬಿಡುವುದು ಎಂದು ನಿರ್ಧರಿಸಿಕೊಂಡಿದ್ದವಳು ರಾಮನಾಥ ಬರುತ್ತಲೆ ಹಾಗೆ ಮಾಡಲು ಅವಳಿಗೆ ಮನಸ್ಸೇ ಆಗಲಿಲ್ಲ. ಇಂದಿಲ್ಲ ನಾಳೆ ಮಗುವಿನ ಹಟ ಕಡಿಮೆಯಾದೀತು ಎಂದು ಸಮಾಧಾನ ತಂದುಕೊಂಡಳು.

ಮೋಹನನನ್ನೆತ್ತಿಕೊಂಡು ಒಳಗೆ ಹೋಗುತ್ತ, 'ಒಳಗೆ ಬರ್‍ರಿ' ಎಂದು ಛಬಿಯನ್ನೂ ಒಳಗೆ ಕರೆದು ತಾನು ಹೋಗಿ ಡ್ರೆಸ್ ಬದಲಿಸಿದ.

'ಧಾರವಾಡ ಕಸ ಕಾಯ ವಾಟಲ?' (ಧಾರವಾಡ ಹೇಗೆ ಅನಿಸಿತು?)

'It was an unbearable agony' (ತಡೆಯಲಿಕ್ಕಾಗದ ನೋವು). ರಾಮನಾಥನ ಮುಖ ಛಬಿಗೆ 'ಆ ನೆನಪು ತೆಗೆಯಬೇಡ' ಎಂದು ಸಾರಿ ಸಾರಿ ಹೇಳುತ್ತಿತ್ತು.

ರಾಮನಾಥ ಟೇಬಲ್ ಮೇಲಿನ ಕಾಗದಪತ್ರಗಳನ್ನು ನೋಡಿದ. ಟೇಬಲ್ ತುಂಬೆಲ್ಲಾ ಬರೆ 'ಫಿಲ್ಮ ಇಂಡಿಯಾ', 'ಸೌಂಡ', 'ಮಿರರ್' ಇವೇ ಸಿನೆಮಾ-ಪತ್ರಿಕೆಗಳು. ಲಕ್ಷ್ಯವಿಲ್ಲದೆ ಫಿಲ್ಮ ಇಂಡಿಯಾದ ಒಂದೆರಡು ಪುಟಗಳನ್ನು ತಿರುವಿಹಾಕಿದ. 'Lovers on the scene become lovers

in life' (ಚಿತ್ರಪಟದಲ್ಲಿಯ ಪ್ರಣಯಿಗಳು ಜೀವನದಲ್ಲಿಯ ಪ್ರಣಯಿಗಳಾದರು.) ಎಂಬ ತಲೆಬರೆಹದ ಕೆಳಗೆ ಪೆನ್ಸಿನಿಂದ ಗೆರೆ ಹೊಡೆದಿತ್ತು.

'ವಿದ್ಯಾ ಯಾವಾಗಲಾದರೂ ಬೆಟ್ಟಿ ಆಗುತ್ತಿದ್ದಳೇನು?'

'ತಸ ಕಾಹೀ ನಾಹಿ. ಕೆವ್ಹಾ ತರಿ ಯಾಯ್‌ಚ ಜಾಯ್‌ಚ ಮಲಾ ದಿಸತಹೋತ. (ಇಲ್ಲ. ಯಾವಾಗಾದರೊಮ್ಮೆ ಬಂದದ್ದು ಹೋದದ್ದು ಕಾಣುತ್ತಿತ್ತು.)

'ಒಬ್ಬಾಕೀನೊ? ಅಥವಾ........'

'I think so' (ಹಾಗೇ ಇರಬೇಕು.)

ಛಬಿ ಏನೋ ಒಂದು ಪ್ರಶ್ನೆ ಕೇಳಬೇಕೆಂದುಕೊಂಡಿದ್ದವಳು ಕೇಳಬೇಕೊ ಕೇಳಬಾರದೊ ಎಂದು ಅನುಮಾನಿಸುತ್ತ ಮತ್ತೆ ಮತ್ತೆ ತಡೆಯುತ್ತಿದ್ದಳು.

'ಆಜ ತುಮ್ಹಾಲಾ ತೇ ಭೇಟಲೇ ನಾಹಿ?' (ಇವೊತ್ತು ನಿಮಗೆ ಅವರು ಬೆಟ್ಟಿಯಾಗಿಲ್ಲೇನು?)

'ಹೌದು ಬೆಟ್ಟಿಯಾಗಿತ್ತು.'

'ಕುಠೆ?' (ಎಲ್ಲೆ?).

'ಕನ್ನಡ ಈಗ ತಿಳಿಯುತ್ತಿದೆಯಲ್ಲಾ ಛಬಿ?'

'ಮೀ ಟಾಯ:ಪಿಂಗ ಕ್ಲಾಸಲಾ ಜಾತೇನಾ, ತಿಥೇಹಿ ಕಾನಡಿ ಲೋಕ ಪುಷ್ಕಳ ಏತಾತ....ತ್ಯಾಂಚೆ ಬರೋಬರ ಮೀ ಕಾಹೀ ಬೋಲತ ನಾಹಿ, ಪಣ ತ್ಯಾಂಚೀ ಭಾಷಾ ಕಾನಾವರ ಪಡತ ಅಸ್ತೆ'. (ಟೈಪಿಂಗ್‌ಕ್ಲಾಸಿಗೆ ಹೋಗತಿರತೇನಲ್ಲ ಅಲ್ಲಿ ಕನ್ನಡ ಜನಾ ಬಹಳ ಬರತಾರ. ಅಂದರ ಅವರ ಕೂಡ ನಾ ಏನು ಮಾತಾಡೂದಿಲ್ಲ. ಆದರ ಮಾತು ಕಿವಿವ್ಯಾಲಂತೂ ಬೀಳತೀರತಾವ.)

'ಛಬಿ, ನೀನೀಗ ಟೈಪಿಂಗ ಕ್ಲಾಸಿಗೆ ಬೇರೆ ಹೋಗುತ್ತಿದ್ದೀಯಾ?'

'ಜ್ಯೂನಿಯರ ಆಹೆ....ಮ್ಹಣ್‌ಟಲ, ಅಸೂದ್ಯಾ ಹೇ ಏಕ 'Qualification.' (ಜ್ಯೂನಿಯರ್ ಅದ; ಇರಲಿ ಇದೊಂದು ಪದವಿ ಅಂದೆ.)

'ಹಾಗಾದರೆ ಬರಿ ಟೈಪಿಸ್ಟ ಆಗಬೇಕೆಂದು ನಿನ್ನ ಉದ್ದೇಶವೇನು?'

'ಮಲಾ ಕಾಹೀ ತರಿ ಸಾಂಗಾಯಿಚ ಆಹೆ ತುಮ್ಹಾಲಾ' ಎಂದು ಮರಾಠಿಯಲ್ಲೇ ಮುಂದರಿಸಿದಳು ಛಬಿ:

'ರಾಮನಾಥ್ ಒಂದಿಷ್ಟು ಅಸಮಾಧಾನದ ವಿಷಯವನ್ನು ನಿಮಗೆ ಹೇಳುವುದಿದೆ.....ನಮ್ಮ ಕಾಕಾ ಅವರ ನೌಕರಿ....ಹೋಯಿತು!'

ರಾಮನಾಥ ಸಖೇದಾಶ್ಚರ್ಯವನ್ನು ವ್ಯಕ್ತಮಾಡಿದ. ಅದು ಹೇಗೆಂದು ಕೇಳುವ ಮೊದಲೆ ಛಬಿ ಮತ್ತೆ ಮುಂದರಿಸಿದಳು :

'ಕಾಲಿನ ಗಾಯ ಸಂಪೂರ್ಣವಾಯ್ದಿರಲಿಲ್ಲ. ಕಾಕಾ ಅವರಿಗೆ ಡ್ಯೂಟಿಗೆ ಹಾಜರ ಆಗುವುದು ಇನ್ನೂ ಅಸಾಧ್ಯವಾಯಿತು. ಹಾಗಿರಲು ಮತ್ತೆ ರಜೆ ಬೆಳೆಸಿದರು. ಬಿನ್ ಪಗಾರಿ ರಜೆಯಾಯಿತು. ಆದರೂ ಅಡ್ಡಿ ಯಿಲ್ಲವೆಂದರು ಕಾಕಾ. ಮೊನ್ನೆ ಒಮ್ಮಿಂದೊಮ್ಮೆಲೆ ಒಂದು ನೋಟೀಸು ಬಂತು, 'ಕೂಡಲೆ ನೀವು ಕಚೇರಿಗೆ ಬಂದು ಹಾಜರ ಆಗದಿದ್ದರೆ ನಾವು ಮತ್ತೊಬ್ಬರನ್ನು ನೇಮಿಸಿಕೊಳ್ಳುತ್ತೇವೆ' ಅಂತ. ಕಾಕಾ ಗಾಬರಿಯಾದರು. ಅಂದೇ ಒಂದು ಟ್ಯಾಕ್ಸಿ ಮಾಡಿಕೊಂಡು ಕಚೇರಿ ವರೆಗೆ ಹೋಗಿ ಬಂದರು. ಪ್ರಯೋಜನ ಬೀಳಲಿಲ್ಲ. ಅವರು ನೋಟೀಸ ಕಳಿಸುವ ಮೊದಲೆ ಮತ್ತೊಬ್ಬ ರನ್ನು ತೆಗೆದುಕೊಂಡುಬಿಟ್ಟಿದ್ದರು. ಮಾಡುವುದೇನು? ಸರಕಾರಿ-ನೌಕರಿ ಅಲ್ಲ. ಮನಬಂದ ಹಾಗೆ ಮಾಡುತ್ತಾರೆ. ತಾವೇ ರಾಜರು, ತಾವೇ ಪ್ರಜೆಗಳು. ಸರಕಾರಿ-ನೌಕರಿ ಗುಲಾಮಗಿರಿಗಿಂತ ಖಾಸಗಿ-ನೌಕರಿ ಗುಲಾಮಗಿರಿ ಬಹಳ ಕೆಟ್ಟ.'

ರಾಮನಾಥ ಛಬಿಯನ್ನು ಕರುಣಾದ್ರ್ರದೃಷ್ಟಿಯಿಂದ ನೋಡಿದ. ಛಬಿ ಮತ್ತೆ ಮುಂದರಿಸಿದಳು:

'ಈಗ ನಾನು ನಮ್ಮ ಕಾಕಾ ಅವರಿಗೆ, ನಮ್ಮ ಮನೆಗೆ ಉಪಯೋಗ ಬೀಳಬೇಕಾಗಿದೆ. ಅಂತೇ ಟೈಪಿಂಗ ಸ್ವಲ್ಪ ಕಲಿತರೆ ಎಲ್ಲಿಯಾದರೂ ನೌಕರಿ ಸಿಗಬಹುದು ಅಂತ.'

'ನೀನು ನೌಕರಿಗೆ ಕಾಳಜಿ ಮಾಡಬೇಡ ಛಬಿ. ಸೆಕ್ರೆಟೇರಿಯಟ್‌ನಲ್ಲಿ ನೌಕರಿ ಸಿಗಬಹುದು. ರೇಶನ್‌ದಲ್ಲಂತೂ ಟೈಪಿಂಗ ಸಹ ಬೇಕಾಗಿಲ್ಲ. ಆದರೆ ನಿನ್ನ ಕಾಲೇಜ ಅಭ್ಯಾಸದ ಕಾಳಜಿ ನನಗೆ.' ರಾಮನಾಥನ ಈ ಮಾತು ಕೇಳಿ ಛಬಿಯ ಮುಖ ಸಣ್ಣಾಯಿತು.

'ಕಾಲೇಜಿಗೆ ಆಗಲೆ ತಿಲಾಂಜಲಿ ಕೊಟ್ಟಂತಾಗಿದೆ........'

ರಾಮನಾಥನಿಗೆ ಮತ್ತೊಂದು ಭುಗಿಲು. 'ಏಕೆ?' ಎಂದ.

‘ ಹೋಗಲಿ ಬಿಡಿರಿ....ಏನೊ ಟರ್ಮ್ಸ್ ಭರ್ತಿ ಆಗಲಿಲ್ಲವಂತೆ. ’

‘ ಉಹುಂ. ಅದೆಂದಿಗೂ ಆಗದ ಮಾತು. ಛಬೆ, ನೀನು ಕಾಲೇಜ ಮುಂದರಿಸಲೇ ಬೇಕು......... ನೌಕರಿ ಮಾಡುತ್ತಲಿ ಕಾಲೇಜ ಸಾಗಿಸುವುದು ಸಾಧ್ಯವಿದೆ. ‘ ಸಿದ್ಧಾರ್ಥ’ ಕಾಲೇಜಿಗೆ ಹೆಸರು ಹಚ್ಚಿಸಿಬಿಡು. ಕಾಲೇಜ ಮುಗಿಸಿ ಕಚೇರಿಗೆ ಹೋಗಲಿಕ್ಕೆ ಅನುಕೂಲವಾಗುತ್ತದೆ. ಮಧ್ಯಾನ್ಹಕ್ಕೆ ಕಚೇರಿಗೆ ಊಟದ ಡಬ್ಬಿ ತರಿಸಿದರಾಯಿತು. ಹೊಸ ‘ ಟರ್ಮ’ ಪ್ರಾರಂಭಕ್ಕೆ ‘ ಖಾಲ್ಸಾ’ ದಿಂದ ‘ ಸಿದ್ಧಾರ್ಥ’ಕ್ಕೆ ಟ್ರಾನ್ಸಫರ ಮಾಡಿಸಿಬಿಡೋಣ. ’

ಛಬೆ ಕೃತಜ್ಞತೆಯಿಂದ ರಾಮನಾಥನ ಮುಖ ನೋಡಿದಳು. ‘ ಇರಲಿ. ಈಗಂತೂ ಕಾಲೇಜ ಕ್ಲೋಜ ಆಗಲಿಕ್ಕೆ ಬಂದಿದೆ. ಮುಂದೆ ವಿಚಾರಿಸೋಣ....’

‘ ಇಲ್ಲ ಛಬೆ, ನಾಳೆ ನಿಮ್ಮ ಕಾಲೇಜದಕಡೆಗೆ ಹೋಗಿಬರೋಣ,’ ಎಂದು ಹೇಳಿ ಸಹಸ್ರಬುದ್ಧೆಕಾಕಾ ಅವರನ್ನು ಮಾತಾಡಿಸಲು ಛಬೆಯೊಂದಿಗೆ ಅವರ ಮನೆಯೊಳಗೆ ಹೋದ.

* * * *

ಸಂಜೆ ಆರುಗಂಟೆಯ ಸುಮಾರಿಗೆ ವಿದ್ಯಾಗ್ರಾಮೋಫೋನ್ ಕಂಪನಿಯ ಕಡೆಗೆ ಹೋದಳು. ‘ ಲಿಫ್ಟ’ಗೆ ಬೆಲ್ ಬಾರಿಸಿದಳು. ಲಿಫ್ಟ ಆಗಲೆ ಬಂದ್ ಆಗಿತ್ತು. ಮೂರು ಮಜಲು ಹತ್ತುವುದಕ್ಕೆ ಸ್ವಲ್ಪ ಬೇಸರಿಸಿ ಹಾಗೇ ಅನುಮಾನಿಸುತ್ತಿರುವಾಗ ರಾಜನ್ ಕುತ್ತಿಗೆಯ ನರಗಳೆಲ್ಲಾ ಉಬ್ಬಿ ಬರುವಂತೆ ಕಣ್ಣುಗುಡ್ಡೆ ಹಿಗ್ಗಿಸಿ ಉಸಿರುಗಟ್ಟಿ ಕೆಮ್ಮುತ್ತ ಮತ್ತೆ ಸಿಗಾರೆಟ್ ಎಳೆಯುತ್ತ ಹೆಗಲ ಮೇಲೆ ಕೋಟು ಹಾಕಿಕೊಂಡು ಖಟ್ ಖಟ್ ಎಂದು ಬೂಟಿನ ಸಪ್ಪಳ ಮಾಡುತ್ತ ಬಂದನು.

‘ Hullo, you have come. ’ ( ಹಲೊ, ನೀವು ಬಂದಿದ್ದೀರಾ? ) ಎಂದು ವಿದ್ಯಾವತಿಯನ್ನು ಸ್ವಾಗತಿಸಿದ.

ವಿದ್ಯಾ ನಮಸ್ಕಾರ ಮಾಡಿದಳು.

‘ ವ್ಯವಸ್ಥಾಪಕರನ್ನು ಫೋನಿನಲ್ಲಿ ಕರೆದು ಮಾತಾಡುತ್ತೇನೆ. ಅಲ್ಲಿಂದ ಹೋಗೋಣ ’, ಎಂದು ಮತ್ತೆ ಅವಳನ್ನು ಮೇಲಕ್ಕೆ ಕರೆದೊಯ್ದನು.

'ನೀವೇ ಫೋನ್ ಮಾಡಿಬರಬಹುದೆ? ನಾನು ಇಲ್ಲೇ ಉಳಿಯುವೆ.'

'ಹೋಗ್ಬಿಟ್ಟು ಬರ್ತೇವೆ ಬರ್‍ರಿ,' ಎಂದು ಬಲವಂತದಿಂದ ವಿದ್ಯಾವತಿಯನ್ನು ಕರೆದೊಯ್ದ. ವಿದ್ಯಾ ಉಶ್ಶೆಂದು ಮೂರು ಮಜಲು ಏರಿದಳು. ಯಾವುದೋ ನಂಬರಿಗೆ ಫೋನ್ ಮಾಡಿ ತಮಿಳಿನಲ್ಲಿ ಏನೇನೊ ಮಾತುಕತೆ ಆಡಿದ ರಾಜನ್. ಕೊನೆಗೆ 'ಥ್ಯಾಂಕ್ಯು' ಎಂದು ಫೋನ್ ಕೆಳಗಿಟ್ಟು ಟಿನ್ನಿನಿಂದ ಒಂದು ಸಿಗಾರೇಟ್ ಹೊತ್ತಿಸಿ ಕೋಟು ಮತ್ತೆ ಹೆಗಲಿಗೆ ಹಾಕಿದ. ವಿದ್ಯಾವತಿ ಹಿಂಬಾಲಿಸಿದಳು. ಇಳಿಯುವಾಗ ವಿದ್ಯಾ ಎರಡೆರಡು ಹೆಜ್ಜೆ ಹಿಂದುಳಿಯುತ್ತಿರುವಾಗ ರಾಜನ್ ಮತ್ತೆ ಅವಳಿಗಾಗಿ ಅಲ್ಲೇ ನಿಂತು ಅವಳನ್ನು ಕೂಡಿಕೊಂಡು ಕೆಳಗಿಳಿಯುತ್ತಿದ್ದ. ದೀಪವೂ ಇರಲಿಲ್ಲ. ಸರಸರನೆ ಇಳಿಯಲು ಸ್ವಲ್ಪ ಅಡ್ಡಿಯಾಗುತ್ತಿತ್ತು. ಒಂದೆರಡು ಸಲ ರಾಜನ್ನನ ಕೈ ವಿದ್ಯಾವತಿಗೆ ತಾಗಿತು. ವಿದ್ಯಾ ಸುಮ್ಮನಿದ್ದಳು.

ಚರ್ಚಗೇಟ್ ಮುಟ್ಟಿದಾಗ ಬೋರಿವಲಿ ಗಾಡಿ ಬಿಡುವುದಕ್ಕೆ ಎರಡೇ ನಿಮಿಷಗಳಿದ್ದುವು. ರಾಜನ್ ತಾವೇ ತಿಕೆಟ್ ತೆಗೆಯಿಸಿದರು. ಗಡಬಡಿಸುತ್ತ ಒಳಗೆ ನುಗ್ಗಿದರು. ಮೊದಲನೆಯ ಲೇಡೀಜ ಕ್ಯಾರೇಜ್ ಹತ್ತಿರವೇ ನಿಂತು, ವಿದ್ಯಾ 'ನಾನು ಇಲ್ಲೇ ಹೋಗುತ್ತೇನೆ. ಮುಂದೆ ಗದ್ದಲ ಬಹಳ' ಎಂದಳು.

'ಇಲ್ಲಾ ಬರ್‍ರಿ, ಇನ್ನೂ ಒಂದು ಮಿನೀಟ್ ಇದೆ,' ಎಂದು ರಾಜನ್ ಮುಂದೆ ನಡೆದ. ವಿದ್ಯಾವತಿ ನಿರ್ವಾಹವಿಲ್ಲದೆ ಬೆನ್ನಟ್ಟಿದಳು. ಗಾಡಿ ವ್ಹಿಸಲ್ ಆಗುವವರೆಗೂ ಹಾಗೇ ಮುಂದೆ ಮುಂದೆ ನಡೆದು ಗಾಡಿಬಿಡುವ ಹೊತ್ತಿಗೆ ಯಾವುದೋ ಒಂದು ಡಬ್ಬೆಯಲ್ಲಿ ಅವಳನ್ನು ಹತ್ತಿಸಿದ. ಇಬ್ಬರ ಮಟ್ಟಿಗೆ ನಿಲ್ಲುವಷ್ಟು ಸ್ಥಳ ಸಿಕ್ಕಿತು. ಗಾಡಿ ಬಿಟ್ಟಿತು. ರಾಜನ್ ಅರ್ಧ ತಮಿಳು ಅರ್ಧ ಕನ್ನಡ ಬೆರೆತ ಅಪದ್ಧ ಕನ್ನಡ ಸರಣಿಯಲ್ಲಿ ವಿದ್ಯಾವತಿಯೊಡನೆ ಮಾತಾಡತೊಡಗಿದ.

'ನಿಮಗೆ ಇದೇ ಫಿಲ್ಮಿನಲ್ಲಿ ರೋಲ್ ಕೊಡಿಸುತ್ತೇನೆ. ಸಾಕಷ್ಟು ಹಣ ಕೊಡಿಸುತ್ತೇನೆ. ಡೈಲಾಗಿನಲ್ಲಿ ನಿಮ್ಮ ಸೊಲ್ಲು ರುಂಬ ಸೊಗಸಾಗಿರುತ್ತೆ. ಓ! ನೀವು ಶಾಯಿನ್ ಆಗ್ತೀರಿ. ಚಿಂತೆ ಬೇಡ. ರುಂಬ ನಲ್‌ನಾಕ್ರಿ ಕೊಡಸ್ತೆನೆ.'

ವಿದ್ಯಾ ಯಾವುದಕ್ಕೂ ಕೃತಜ್ಞತೆಯ ನಗೆಯಿಂದ ಉತ್ತರಿಸುತ್ತಿದ್ದಳು.

'ಇದಕ್ಕೂ ಮೊದಲು ನೀವು ರೆಕಾರ್ಡ ಕೊಡತ್ತೀರಾ?'

'ಇಲ್ಲ.'

'ಫಿಲ್ಮ ಪ್ರವೇಶಕ್ಕಾಗಿ ಪ್ರಯತ್ನಪಟ್ಟಿದ್ದೀರಾ?'

'ಇಲ್ಲ.'

'ಫಿಲ್ಮ ಲ್ಯಾಂಡದ ಅನುಭವ ಉಂಟೆ?'

'ಒಮ್ಮೆ ಮಾತ್ರ ಒಂದು ಶೂಟಿಂಗ್ ನೋಡಿದ್ದೇನೆ.'

'ನೀವೀಗ ಎಲ್ಲಿ ಕೆಲಸ ಮಾಡುತ್ತೀರಿ?'

'ರೇಶನ್ ಕಚೇರಿಯಲ್ಲಿ.'

'ಗ್ರ್ಯಾಜ್ಯುಯೇಟ ಏನು?'

'ಹೌದು, ಎಂ. ಎ ಕ್ಕೂ ಟರ್ಮ್ಸ ತುಂಬುತ್ತಿದ್ದೇನೆ.'

'ಹಾಗಾದರೆ ಈ ರೇಶನ್ ಆಫೀಸ್ ಏಕೆ? ಈ ನೌಕರಿ ನಿಮಗೆ 'ಲೈಕಿಂಗ್' ಇದೆಯೆ?'

'ನನಗೆ ಪಸಂದ ಇದ್ದ ನೌಕರಿ ಸಿಕ್ಕರೆ ಇದನ್ನು ಬೇಕಾದಾಗ ಬಿಟ್ಟು ಬಿಡಬಹುದು.'

'ಆಲ್ ಇಂಡಿಯಾ ರೇಡಿಯೋದಲ್ಲಿ ಪ್ರಯತ್ನ ಮಾಡಿದ್ದೀರಾ?'

'ಇಲ್ಲ.'

'ಓ! ಅಲ್ಲಿ ನನಗೆ ಬೇಕಾದಷ್ಟು ಜನರ ಪರಿಚಯ........ ಎಂ. ಎ. ಆದ ಮೇಲೆ ಲೆಕ್ಚರರ ಆಗಬೇಕೆನ್ನುತ್ತೀರಾ?'

'ನೋಡಬೇಕು.'

'ಎಲ್‌ಫಿನ್‌ಸ್ಟನ್ ಕಾಲೇಜ ಪ್ರಿನ್ಸಿಪಾಲರದೂ ನನಗೆ ಗೊತ್ತು. ಬಾಂಬೆ ಯುನಿವ್ಹರ್ಸಿಟಿ ಚೀಫ್ ಅಕೌಂಟಂಟ ನನ್ನ ಮಿತ್ರರು. ಖಾಲ್ಸಾ ಕಾಲೇಜ ಲೈಬ್ರೆರಿಯನ್ ನನಗೆ ಬಹಳ ಕೇವಲ........'

ವಿದ್ಯಾ ಸುಮ್ಮನೆ ಗೋಣು ಹಾಕುತ್ತಿದ್ದಳು.

'ಪಾಸ್ ರಖೋ ನೋಟ್ ರಖೋ.......... ಬಾಬೂಜಿ ರೇಲ್ವೆ ಪಾಸ್ ಕವ್ಹರ, ಚಾರಾನಾ' ಎಂದು ಪಾಸ್ ಕವ್ಹರ್ ಮಾರುವವನೂ ಇದೇ ಗದ್ದಲ ದೊಳಗೇ ನುಗ್ಗಿದ. ಒಂದು ರೂಪಾಯಿಯ ನೋಟು ಹಾಕಿ ಎಲ್ಲರಿಗೂ ಅದನ್ನು ಎತ್ತಿ ತೋರಿಸುತ್ತ 'ನೋಟ ರಖೊ ಪಾಸ್ ರಖೋ' ಎಂದು ಕೂಗುತ್ತಿರವಾಗ, 'ಆ ನೋಟು ಹಾಕಿದ ಕವ್ಹರನ್ನೇ ಕೊಡುತ್ತೀಯಾ

ನಾಲ್ಕಾಣೆಗೆ?' ಎಂದು ಅವನೊಂದಿಗೆ ತಮಾಶೆ ಮಾಡಿದ. ನಿಂತ ಜನರೆಲ್ಲಾ ಖೊಳ್ಳನೆ ನಕ್ಕರು. ವಿದ್ಯಾ ನಕ್ಕಳೊ ಇಲ್ಲವೊ ಎಂದು ಅವಳ ಮುಖ ನೋಡಿದ ರಾಜನ್. ವಿದ್ಯಾ ನಗಲೇಬೇಕಾಯಿತು.

ಬಾಂದ್ರಾಕ್ಕಂತೂ ಗದ್ದಲ ಇಮ್ಮಡಿಯಾಯಿತು. ಜನರು ಮೈಮೇಲೆ ನುಗ್ಗುತ್ತಿರಲು ವಿದ್ಯಾ ಬೇಸರ ಪಟ್ಟುಕೊಂಡು ಮೂಗು ಮುರಿಯುತ್ತಿದ್ದಳು. ಯಾವನೋ ಒಬ್ಬ ಮುಗ್ಧನಂತಹನನ್ನು ತರುಬಿ ರಾಜನ್ ಗದ್ದರಿಸಿದ: 'ತುಮ್ ಕ್ಯಾ ಗಧ್ಧೇ ಹೊ? ಇಧರ್ ಔರತ್ ಲೋಕ ದೇಖತಾ ನಹಿ?........ I will hand you over to the police' (ನೀ ಏನು ಕತ್ತೆ ಇದ್ದಿಯೋ? ಇಲ್ಲಿ ಹೆಣ್ಣು ಮಕ್ಕಳಿದ್ದದ್ದು ಕಾಣುವದಿಲ್ಲವೇ?........ ನಿನ್ನನ್ನು ಪೋಲೀಸರ ಕೈಗೆ ಕೊಡುತ್ತೇನೆ.) ಜನರೆಲ್ಲಾ ಅವನ ಅಬ್ಬರಕ್ಕೆ ಅವನನ್ನೆ ಹುಳು ಹುಳು ನೋಡಹತ್ತಿದರು. 'ಪರಸ್ತ್ರೀಯರನ್ನು ಹೇಗೆ ಮರ್ಯಾದೆಯಿಂದ ನಡಸಿಕೊಳ್ಳ ಬೇಕೆಂಬುದೇ ಗೊತ್ತಿಲ್ಲ ಈ ಗುಂಡಾ ಜನರಿಗೆ! ರೇಲ್ವೆದವರು ಎಷ್ಟು ನೋಟೀಸು ಅಂಟಿಸಿದರೇನು....' ಎಂದು ಜೋರಾಗಿ ಹೇಳಿದ. ವಿದ್ಯಾವತಿ ಸುಮ್ಮನೆ ಇದ್ದಳು. 'Did he do any mischief?' ಎಂದು ಕೇಳಿದ. ವಿದ್ಯಾವತಿಗೆ ಹಿಂಡು ಜನರಲ್ಲಿ ಹೀಗೆ ಪ್ರಶ್ನೆ ಕೇಳಿದ್ದು ಏಕೊ ಅಷ್ಟು ಸರಿ ಬರಲಿಲ್ಲ. ನಿರ್ವಾಹವಿಲ್ಲದೆ ಗೋಣು ಅಲ್ಲಾಡಿಸಿ 'ಇಲ್ಲ'ವೆಂದು ಸೂಚಿಸಿ ಸುಮ್ಮನಾದಳು.

ಸಾಂತಾಕ್ರೂಜ್, ವ್ಹಿಲೆಪಾರ್ಲಾದಿಂದ ಜನದಟ್ಟಣೆ ಕಡಿಮೆಯಾಗ ತೊಡಗಿತು. ಅಂಧೇರಿ ಮುಂದಿನ ನಿಲ್ದಾಣವೇ ಇದ್ದುದರಿಂದ ಸ್ಥಳವಿದ್ದರೂ ಕುಳಿತುಕೊಳ್ಳುವ ಗೋಜಿಗೆ ಹೋಗಲಿಲ್ಲ. ಅಂಧೇರಿಗೆ ಇಳಿದು ಬ್ರಿಜ್ ಹತ್ತಿ ಆಚೆಯ ಬಾಜೂ ಹೋದರು.

'ಒಂದು ಮೈಲಿನಷ್ಟಿದೆ, ನಡಿಯುತ್ತಲೇ ಹೋಗೋಣ?' ಎಂದ ರಾಜನ್. ವಿದ್ಯಾ ನಿರ್ವಾಹವಿಲ್ಲದೆ ಹೂಂ ಎಂದಳು.

ಹಾದಿಯಲ್ಲಿ ಮತ್ತೆ ಮಾತಿಗೆ ಪ್ರಾರಂಭಿಸಿದ ರಾಜನ್.

'ಅಂತೂ ಫಿಲ್ಮ ಸೇರಬೇಕೆಂದು ನಿಮ್ಮ ಧ್ಯೇಯವೇನು?'

'ಏನೋ ಮನಸ್ಸಿನ ಖುಷಿಗೆ.' ವಿದ್ಯಾ ಉತ್ತರ ಕೊಟ್ಟಳು.

'ಅಲ್ಲಾ ಮ್ಯಾಡಂ, ನಿಮ್ಮ ಮದುವೆ ಆಗಿದೆಯೆ?'

' ಹೌದು.'

' ಹಾಗಾದರೆ ನಿಮ್ಮ ಗಂಡನಿಂದ ಏನೂ ತಕರಾರ ಬರಲಿಕ್ಕಿಲ್ಲವಷ್ಟೆ? '

' ಏಕೆ? '

' ಕಾಂಟ್ರಾಕ್ಟ ಮಾಡುವ ಮೊದಲು ಇವೆಲ್ಲಾ ಸಂಗತಿ ಬೇಕಾಗುತ್ತವೆ.'

' ಆಂ? '

' ಮೈ ಕೈ ಮುಟ್ಟಿದರೆ ನಿಮ್ಮದೇನು ಆಕ್ಷೇಪವಿಲ್ಲವಷ್ಟೆ? '

' ಆಂ? ' ವಿದ್ಯಾ ಗಾಬರಿಗೊಂಡಂತಾದಳು.

' ಅಂದರೆ ಪಿಕ್ಚರಿನಲ್ಲಿ. '

' ಅವೆಲ್ಲಾ ಆಮೇಲಿನ ಮಾತು. '

' ಹಾಗಲ್ಲಾ. ಮೊನ್ನೆ ಒಬ್ಬಳು ಒಂದು ಜಲಕ್ರೀಡೆಯ ದೃಶ್ಯದಲ್ಲಿ ಬರುವುದಕ್ಕೆ ಒಪ್ಪಲಿಲ್ಲ. ಕೊನೆಗೆ ಅವಳನ್ನು ಜುಲುಮೆಯಿಂದ ಒಪ್ಪಿಸ ಬೇಕಾಯಿತು. '

' ಫಿಲ್ಮಿನಲ್ಲಿ ಮದುವೆ ಆದವರೂ ಇರುತ್ತಾರೇನು? '

' ಇರುತ್ತಾರೆ. ಆದರೆ ಮದುವೆ ಮನೆಯ ಮಟ್ಟಿಗೆ........'

ವಿದ್ಯಾವತಿಗೆ ಇದರರ್ಥವಾಯಿತೊ ಇಲ್ಲವೊ ಅದನ್ನು ಪೂರ್ಣ ಕೇಳಿ-ಕೊಳ್ಳುವ ಗೊಡವೆಗೆ ಹೋಗಲಿಲ್ಲ.

' ಫ್ಯಾಮಿಲಿ ಜನರು ಸಿನೇಮಾ ಸೇರುತ್ತಾರೇನು? ' ಪ್ರಶ್ನೆಯನ್ನು ಸ್ವಲ್ಪ ಬದಲಿದಿಸಿದಳು.

' ಫ್ಯಾಮಿಲಿ ಜನರೇ ಹೆಚ್ಚು, ಸಿನೇಮಾ ಸೇರುವುದರಲ್ಲಿ. '

ಸುಮಾರು ಎರಡು ಮೈಲಿನ ಮೇಲೆ ಒಂದು ಸ್ಟುಡಿಯೊ ಬಂತು. ಒಳಗೆ ಪ್ರವೇಶ ದೊರೆಯಬೇಕಾದರೇನೆ ಬಹಳ ಕಷ್ಟ ಪಡಬೇಕಾಯಿತು ರಾಜನ್.

' ಮಿಸ್ಟರ ಆರ್. ಎಸ್. ಪಿ. ರಾವ್ ಆಯಾ ಹೈ? ' ಎಂದು ಗೇಟಿಗೆ ಕುಳಿತ ಗೂರ್ಖಾನನ್ನು ಕೇಳಿದ.

' ನೈ ಆಯಾ ' ಎಂದ ಗೂರ್ಖಾ.

ಆದಿನ ಯಾವ ಯಾವ 'ಶಾಟ್ಸ' ಇವೆಯೆಂಬದನ್ನೂ ಅದಕ್ಕೆ ಸಂಬಂಧಿಸಿದ ಜನರ ಹೆಸರನ್ನೂ ಕಾಣಿಸಿರುವ ನೋಟೀಸು ನೋಡಿದ.

' ಇದೇನು? ಇವೊತ್ತು ರಾವ್ ಇಲ್ಲವೆಂದು ತೋರುತ್ತದೆ. '

' ರಾವ್ ಯಾರು? ' ವಿದ್ಯಾ ಕೇಳಿದಳು.

' ನಿಮ್ಮ ರಾವ್ ಅಲ್ಲ. ' ಎಂದು ರಾಜನ್ ನಕ್ಕ. ಮತ್ತೊಬ್ಬರಾರೊ ಗುರುತಿನವರು ಸಿಕ್ಕರು ರಾಜನ್‌ಗೆ.

' ಶೂಟಿಂಗ್ ಚಾಲೂ ಇದೆಯೇ? ' ರಾಜನ್ ತಮಿಳಿನಲ್ಲಿ ಕೇಳಿದ.

' ಆಮಾ ' (ಹೌದು) ಎಂದರವರು.

ವಿದ್ಯಾವತಿಯನ್ನು ಶೂಟಿಂಗ್ ಸ್ಥಳಕ್ಕೆ ಕರೆದೊಯ್ದ ರಾಜನ್. ಶೂಟಿಂಗ್ ಸ್ಟುಡಿಯೋದ ಹೊರಗಿತ್ತು. ಯಾವುದೊ ಒಂದು ಪಾತಾಳ ಲೋಕದ ಪೌರಾಣಿಕ ದಂತಕತೆ. ಒಂದು ಯಕ್ಷಿಣಿ ಕಥೆಯ ತರಹ. ರೆಕಾರ್ಡ ಮಾಡಿಟ್ಟ ಒಂದು 'ಪ್ಲೇಬ್ಯಾಕ್' ಹಾಡನ್ನು ಹಚ್ಚಿದ್ದರು. ಅದನ್ನೆ ಹೇಳುತ್ತ ಒಂದು ಹೆಣ್ಣು ಕಾಗದದ ಹೂಗೊಂಚಲನ್ನು ಗಲ್ಲಕ್ಕೆ ಹಚ್ಚಿಕೊಂಡು ಸಂಭ್ರಮದಿಂದ ಕುಣಿದಾಡುತ್ತಿತ್ತು. ಆ ಹೆಣ್ಣಿನ ವೇಷ, ಅವತಾರ ನೋಡಿ ವಿದ್ಯಾವತಿಗೆ ಅಸಹ್ಯ ಬರುವಂತಾಯಿತು. ಹೆಣ್ಣು ಕ್ಯಾಮೆರಾಕ್ಕಾಗಿ ಸಿದ್ಧವಾಗಿ ನಿಂತಿತ್ತು. ದಿಗ್ದರ್ಶಕ ಬಂದು ವೈಮೇಲಿನ ಸೆರಗನ್ನು ಇನ್ನಷ್ಟು ಓಸರಿಸಿ ಹೋದ. ಹೆಣ್ಣು ನಗುತ್ತ ಮತ್ತೆ ಕ್ಯಾಮೆರಾಕ್ಕೆ ಸಿದ್ಧವಾಯಿತು. ಮತ್ತೊಂದು ಶಾಟಿನಲ್ಲಿ ಒಂದು ಕೋಡಂಗಿಯಂತಹ 'ಕಾಮಿಕ್' ಪಾತ್ರವೊಂದು. ಅದರ ಅಸಹ್ಯ ಮುಖ, ಅಸಹ್ಯ ವೇಷಗಳನ್ನು ನೋಡಿ ವಿದ್ಯಾವತಿಗೆ ತೀರ ಬೇಸರ ಹುಟ್ಟಿತು. ಆ ಪಾತ್ರಗಳು, ಆ ದಿಗ್ದರ್ಶಕರು ಆ ಎಲ್ಲಾ ಪರಿಸರವನ್ನು ನೋಡಿ ಇಲ್ಲಿಯ ಪಾತ್ರಗಳಿಗೆ ಸಂಬಳವಾದರೂ ಕೊಡುತ್ತಾರೊ ಇಲ್ಲವೊ ಎನಿಸುವಂತಾಯಿತು ವಿದ್ಯಾವತಿಗೆ.

ಒಬ್ಬಿಬ್ಬರು ಮಿತ್ರರಿಗೆ ರಾಜನ್ ಪರಿಚಯ ಮಾಡಿಕೊಟ್ಟು ಅವರ ಮುಂದೆ ಅವಳ ಕೌತುಕ ಮಾಡಿದ. ವಿದ್ಯಾವತಿಗೆ ಅದು ಅಷ್ಟು ರುಚಿಸಲಿಲ್ಲ.

' ತಮಿಳು ಬರದಿದ್ದರೂ ಬರೆದುಕೊಂಡು ನಾಲ್ಕು ಸಲ ರಿಹರ್ಸಲ್ ಮಾಡಿದರೆ ಸರಿಹೋಗುತ್ತದೆ........ಎಂ. ಎ. ಓದಿದ್ದಾರೆ ಅವರು.' ಎಂದು ರಾಜನ್ ವರ್ಣನೆ ಮಾಡಿದ.

' ಆರ್. ಎಸ್. ಪಿ. ರಾವ್ ನಾಳೆ ಬರುತ್ತಾರೆ, ನಾಳೆ ನೀವು ಬರಬಹುದೆ? ' ಎಂದರವರು. ವಿದ್ಯಾ ಸುಮ್ಮನೆ ಗೋಣು ಹಾಕಿದಳು. ಆ ಮೇಲೆ ಚಹಾಪಾನವಾಯಿತು. ಬಯಲಲ್ಲಿಯೇ ಶೂಟಿಂಗ್ ಇತ್ತು. ಇದ್ದಕ್ಕಿದ್ದ

ಹಾಗೆ ಒಮ್ಮಿಂದೊಮ್ಮೆಲೆ ಮಳೆ ಹತ್ತಿತು. ತಯಾರಿಸಿದ್ದ ದೃಶ್ಯ-ರಚನೆಯೆಲ್ಲಾ ನಿರುಪಯೋಗವಾಯಿತು. ಆಮೇಲೆ ಸ್ಟೂಡಿಯೊ 'ಶಾ:ಟ್'ನ ಸಿದ್ಧತೆಗೆ ಮೊದಲಾಯಿತು.

ಸ್ಟುಡಿಯೋದ ಹೊರಗೆ ಬರಬೇಕಾದರೆ ರಾತ್ರಿ ಹತ್ತುಗಂಟೆ ಸಮೀಪಿಸಿತ್ತು. ಮತ್ತೆ ನಡೆಯುತ್ತ ನಿಲ್ದಾಣಕ್ಕೆ ಸಾಗಿದರು. ಹಾದಿಯಲ್ಲಿ ಕಾಳ್ಗತ್ತಲು. ವಿದ್ಯುದ್ದೀಪಗಳಿಲ್ಲ. ಹೊರಬೀಸು. ಜನರ ಸುಳಿವಿಲ್ಲ. ವಿದ್ಯಾವತಿಗೆ ದಾರಿಯೇ ಗೊತ್ತಾಗಲಿಲ್ಲ. ಸ್ವಲ್ಪ ಗಾಬರಿಯೆನಿಸಿತು. ರಾಜನ್‌ನ ಸಿಗಾರೆಟ್ಟಿನ ಕೆಂಪು ಕೆಂಡದ ಹೊಳಪಿನ ಹೊರತು ಇನ್ನೇನೂ ಕಾಣುವಂತಿಲ್ಲ.

'ಇಲ್ಲಿ ತಗ್ಗು ಇದೆ ಮೆಲ್ಲನೆ ಬರ್ರಿ' ಎಂದ ರಾಜನ್.

ವಿದ್ಯಾವತಿಗೆ ಹಾದಿ ಗೊತ್ತಾಗಲಿಲ್ಲ. ಮೆಲ್ಲನೆ ಕಾಲು ಸರಿಸಹತ್ತಿದಳು. 'ಹೀಗೆ, ಹೀಗೆ' ಎಂದು ರಾಜನ್ ಮೆಲ್ಲನೆ ಅವಳ ರಟ್ಟೆ ಹಿಡಿದನು. 'ಬೇಡ, ಬೇಡ ನಾನೆಲ್ಲಾ ಬರುತ್ತೇನೆ' ಎಂದಳು ವಿದ್ಯಾ.

'ಇರಲಿ ನಾನು ದಾಟಿಸುತ್ತೇನೆ' ಎಂದು ಎರಡೂ ಕೈಗಳಿಂದ ಎರಡೂ ರಟ್ಟೆ ಹಿಡಿದ ರಾಜನ್. ಅವನ ಕಾಲನ್ನೆ ತುಳಿದು ಎಡವಿದಳು ವಿದ್ಯಾ. ರಾಜನ್‌ನ ಕಾಲೊಳಗೆ ವಿದ್ಯಾವತಿಯ ಸೀರೆಯ ಚುಂಗು ಸಿಕ್ಕಿತು. ವಿದ್ಯಾ ಮುಂದೆ ನಡೆಯುಹೋದಳು. ಸೀರೆ ಜಗ್ಗಿದಂತಾಯಿತು. ವಿದ್ಯಾ ಅವಾಕ್ಕಾದಳು. ರಾಜನ್ ವಿದ್ಯಾವತಿಯ ರಟ್ಟೆಗಳನ್ನು ಹಾಗೇ ಹಿಡಿದಿದ್ದ....

'ರಾಜನ್ !' ಎಂದು ಚಿಟ್ಟನೆ ಚೀರಿ ಕೈಕೊಸರಿಕೊಂಡಳು ವಿದ್ಯಾ. ಆವೇಶ, ಗಾಬರಿ ಎಲ್ಲಾ ಸೇರಿ ಮೈ ಬೆವೆತು, ತುಟಿ ಅದುರಿ, ಎದೆ ಹೊಡಕೊಳ್ಳಹತ್ತಿತು. ರಾಜನ್ ಉಗುಳು ನುಂಗುತ್ತ, ಅಧೀರನಾಗಿ 'ಅಂ? ಅಲ್ಲ, ನಿಲ್ಲಿರಿ ಹೋಗೋಣ.........ತಪ್ಪೆಣಿಸಬೇಡಿ' ಎಂದು ಏನೇನೋ ತನಗೇ ತಿಳಿಯದಂತೆ ಮಾತಾಡಹತ್ತಿದ. ವಿದ್ಯಾ ಯಾವುದನ್ನೂ ಲೆಕ್ಕಿಸದೆ ಭಿರಭಿರನೆ ಮುಂದೆ ಸಾಗಹತ್ತಿದಳು. ರಾಜನ್ ಅಷ್ಟೇ ವೇಗದಿಂದ ಅವಳೊಂದಿಗೆ ನಡೆದ.

'ಕ್ಷಮಿಸಿರಿ. ತಪ್ಪು ತಿಳಿಯಬೇಡಿ.' ಎಂದು ವಿದ್ಯಾವತಿಯ ಬೆನ್ನುಹತ್ತಿದ. ದೂರದಿಂದ ರೇಲ್ವೆ ದೀಪಗಳು ಕಂಡವು. ವಿದ್ಯಾವತಿ ಆಗಲೆ ಪೋಲೀಸ ಕಚೇರಿಯ ಹತ್ತಿರ ಬಂದಿದ್ದಳು. ಹಾರಿಹೋದ ಜೀವ ಮತ್ತೆ ಬಂದಂತಾಯಿತು ವಿದ್ಯಾವತಿಗೆ.

ರೇಲ್ವೆ ಸ್ಟೇಶನ್ ಮುಟ್ಟಿದಾಗ ಹನ್ನೊಂದಕ್ಕೆ ಸಮೀಪಿಸಿತ್ತು. ಗಾಡಿ ೧೧–೨೫ ಕ್ಕಿತ್ತು. ರೇಲ್ವೆ ನಿಲ್ದಾಣ ಶಾಂತವಾಗಿತ್ತು. ಬರುವಾಗಿನ ಗದ್ದಲದ ಕಿಂಚಿತ್ ಕಲ್ಪನೆಯೂ ಬರುವಂತಿರಲಿಲ್ಲ. ರೇಲ್ವೆ ಉಪಹಾರದಂಗಡಿಯವರು ಎಲ್ಲ ಸಾಮಾನುಗಳನ್ನು ತೊಳೆಯುತ್ತಿದ್ದರು.

'ಚಾಯ್ ಹೈ?' ರಾಜನ್ ಕೇಳಿದ.

'ಹಾ.' ವ್ಯಾಣಿ ಹೇಳಿದ.

'ಚಹಾ ತಕ್ಕೊಳ್ಳುತ್ತೀರಾ?' ರಾಜನ್ ವಿದ್ಯಾವತಿಗೆ ಕೇಳಿದ. ವಿದ್ಯಾವತಿ ಬರಿ ಗೋಣು ಅಲ್ಲಾಡಿಸಿ ಇಲ್ಲ ಎಂದಳು. ಸ್ತ್ರೀಯರಿಗಾಗಿ ಇದ್ದ ಬೆಂಚಿನ ಮೇಲೆ ಸ್ವಸ್ಥವಾಗಿ ಉಶ್ಶೆಂದು ಕೂತಳು. ರಾಜನ್ ಚಹಾಪಾನ ಮಾಡಿ ಸಿಗಾರೆಟ್ ಹೊತ್ತಿಸಿ ಕೋಟು ಹಾಕಿಕೊಂಡ.

'ಸ್ವಲ್ಪ ಚಳಿ ಬಿಟ್ಟಿದೆ' ರಾಜನ್ ನುಡಿದ.

ವಿದ್ಯಾ ಸುಮ್ಮನಿದ್ದಳು.

'ಗಾಡಿ ಬರುವದಕ್ಕೆ ಅವಕಾಶವಿದೆ' ರಾಜನ್ ನುಡಿದ.

ವಿದ್ಯಾ ಸುಮ್ಮನಿದ್ದಳು.

'ನಾಳೆ ಮತ್ತೆ ಬರೋಣವೆ?' ರಾಜನ್ ನುಡಿದ.

'ಸಾಕಷ್ಟಾಯಿತು. ಕ್ಷಮಿಸಿರಿ. ನಮಸ್ಕಾರ.' ಆವೇಶದಿಂದ ನುಡಿದಳು ವಿದ್ಯಾ. ರಾಜನ್‌ನಿಗೂ ಸ್ವಲ್ಪ ಅಭಿಮಾನಕ್ಕೆ ತಟ್ಟಿತೆಂದು ತೋರುತ್ತದೆ. ಅವನೂ ಮರುಮಾತಾಡದೆ ಸುಮ್ಮನಾದ. ಎಷ್ಟೋ ಹೊತ್ತಿನ ಮೇಲೆ ಅವಳ ಬಳಿ ಬಂದು 'ಫಿಲ್ಮ ಸೇರಬಯಸುವುದು; ಮತ್ತೆ ಇಲ್ಲದ ಅಭಿಮಾನ.' ಎಂದು ತನ್ನೊಳಗೇ ಅಂದುಕೊಂಡ. ವಿದ್ಯಾವತಿ ಸುಮ್ಮನಿದ್ದಳು. ಗಾಡಿ ಬರುತ್ತಲೆ ಸ್ತ್ರೀಯರ ಡಬ್ಬೆಯಲ್ಲಿ ಹೋಗಿ ಕುಳಿತಳು. ಡಬ್ಬೆಯಲ್ಲಿ ಇನ್ನಾರೂ ಇರಲಿಲ್ಲ. ತಾನೊಬ್ಬಳೇ ಒಬ್ಬಳು. ಇದರಿಂದ ಇನ್ನಷ್ಟು ಭಯ ಬಂದಂತಾಯಿತು. ಆದರೂ ಗಾರ್ಡನ ಡಬ್ಬಿ ಸಮೀಪವಾಗಿದ್ದುದರಿಂದ ಧೈರ್ಯ ತಂದುಕೊಳ್ಳ ಲಿಕ್ಕೆ ಸಾಧ್ಯವಾಯಿತು. ಮಾತುಂಗಾ ಸ್ಟೇಶನ್ನಿಗೆ ರಾಜನ್ ಇಳಿದು ವಿದ್ಯಾ ವತಿಯ ಡಬ್ಬೆಗೆ ಬಂದು 'ನಾನು ಕಳಿಸಲಿಕ್ಕೆ ಬರಲೆ?' ಎಂದು ಕೇಳಿದ.

'ಬೇಡ. ಬಹಳ ಉಪಕಾರವಾಯಿತು.'

'ನನ್ನನ್ನು ತಪ್ಪು ತಿಳಿದಿಲ್ಲವಷ್ಟೆ ?'

ತಿರಸ್ಕಾರದಿಂದ 'ಹುಂ' ಎಂದಳು ವಿದ್ಯಾ.

ಗಾಡಿ ಮುಂದೆ ಸಾಗಿತು. ದಾದರ ಸ್ಟೇಶನ್ನಿಗಿಳಿದಾಗ ಬಹಳಷ್ಟು ಪ್ಯಾಸಿಂಜರರು ಇರಲಿಲ್ಲ. ಬಳಿಯಲ್ಲಿ ತಿಕೀಟು ಕೂಡ ಇಲ್ಲ! ಪಾಸು ದಾದರ ದಿಂದ ಚರ್ಚಗೇಟಗಿದೆ. ಸುಮ್ಮನೆ 'ಪಾಸ್' ಎಂದು ದಾಟುವುದಕ್ಕೆ ಈ ಏಕಾಂತಕಾಲದಲ್ಲಿ ಸಾಧ್ಯವಿರಲಿಲ್ಲ; ಧೈರ್ಯವೂ ಇರಲಿಲ್ಲ. ಬ್ರಿಜ್ ಹತ್ತಿ ಜಿ. ಆಯ್. ಪಿ. ಕಡೆಯತ್ತ ಹೋದಳು. ಹೇಗೊ ಪಾರಾಗಿ ಹೊರಗೆ ಬರುವವರೆಗೆ ಗಾಬರಿ ಹೋಗಿರಲಿಲ್ಲ. ಅಲ್ಲಿಂದ ಟಿಳಕ ಬ್ರಿಜ್ ಹತ್ತಿ ಹೋಗು ವುದೂ ಅವಘಡವೇ ಅನಿಸಹತ್ತಿತು. ಬ್ರಿಜ್ಜಿನ ಕೆಳಗೆ ಭಿಕ್ಷುಕರ ತಂಡ ವೊಂದು ನೆಲದ ಹಾಸುಗೆಯ ಮೇಲೆ ಮುಗಿಲು ಹೊದ್ದುಕೊಂಡು ಬರಿವೈ ಯಿಂದ ಬಿದ್ದಿತ್ತು. ಒಬ್ಬಿಬ್ಬರು ಎದ್ದಿದ್ದರು. ಒಂದೆಡೆ ಮೂರು ಕಲ್ಲಿನ ಒಲೆಯಲ್ಲಿ ದಂಟಿನ ಕೊಳ್ಳಿಗಳು ಇನ್ನೂ ಉರಿಯುತ್ತಿದ್ದುವು. ಅಷ್ಟೆ ಒಂದಿಷ್ಟು ಉಲುವು ಎನಿಸಿತು ವಿದ್ಯಾವತಿಗೆ. ಆ ಭಿಕ್ಷುಕರ ತಂಡವನ್ನೇ ನಿರೀಕ್ಷಿಸುತ್ತ ಹೇಗೊ ಬ್ರಿಜ್ ಹತ್ತಿ ಮೇಲೆ ಬಂದಳು. ತಾಸಿನ ಹಿಂದೆ ನಡೆದು ಹೋದ ಘಟನೆ ಇನ್ನೂ ಚೂರಿಯ ಘಾಯದಂತೆ ಹಾಗೇ ಚುರುಗುಟ್ಟು ತ್ತಿತ್ತು ಅವಳ ಮನಸ್ಸಿನಲ್ಲಿ.....................ಇಂದಿನ ಕಾಲದಲ್ಲಿ, ಮುಂಬಯಿ ಯಂತಹ ದಗಾಬಾಜ ಪಟ್ಟಣದಲ್ಲಿ ರಸಿಕ ಹಂಬಲಗಳನ್ನು ಬೆನ್ನಟ್ಟಬಾರದು ಎಂದೆನಿಸಿತು ವಿದ್ಯಾವತಿಗೆ. ತನ್ನ ಮನಸ್ಸಿಗೆ ತಕ್ಕಂತಹ ಹಂಬಲಗಳನ್ನು ಸಾಧಿಸಬೇಕೆಂದರೆ ಎಷ್ಟು ವಿಘ್ನಗಳು...............! ರಾಜನ್ ತನ್ನಷ್ಟಕ್ಕೆ ಮಾತಾಡಿಕೊಂಡ ತಮಿಳಿನ ಮಾತಿನ ಅರ್ಥ ಸಂಪೂರ್ಣವಾಗಿ ಆಯಿತು ವಿದ್ಯಾವತಿಗೆ— 'ಫಿಲ್ಮಂ ಸೇರ ಬಯಸುವುದು; ಮತ್ತೆ ಇಲ್ಲದ ಅಭಿಮಾನ.' ಫಿಲ್ಮಂ ಸೇರುವವರು ಮಾನ ಅಭಿಮಾನಗಳನ್ನು ಬಿಟ್ಟೇ ಸೇರಬೇಕೆ ? ಇದು ನಿಜವೆ ?........... ಇಂದಿನ ನೂರಾರು ಸುಶಿಕ್ಷಿತ ಮನೆತನದ ತರುಣಿಯರು ಸಿನೇಮಾ ಸೇರುವರಲ್ಲ, ಎಲ್ಲರೂ ವ್ಯಭಿಚಾರಿಗಳೇ ಏನು?........ಮತ್ತೇನು? ಇದ್ದ ಗಂಡಂದಿರನ್ನೆ ಬಿಡುವದು, ಇಲ್ಲದವರನ್ನು ಗಂಟು ಹಾಕಿಕೊಳ್ಳುವದು! ಆದರೆ ಅದು ವ್ಯಭಿಚಾರವಲ್ಲ, ರಸಿಕತೆಯ ವೈವಿಧ್ಯ...........'

ಖುದಾದಾದ ಸರ್ಕಲ್‌ನಿಂದ 'ಸಿನೇಮಾ ಫ್ಯಾನ್ಸ'ಗಳನ್ನು ಕೊಂಡೊಯ್ಯು

ಬಸ್ ಬಂತು. ಬಹಳ ಸುದೈವ ಎಂದುಕೊಂಡು ವಿದ್ಯಾ ಬಸ್ ಹತ್ತಿ ಶಿವಾಜಿ ಪಾರ್ಕಿನ ಕೂಟಕ್ಕಿಳಿದಳು.

* * * *

ಮೋಹನ ಒಂದೇ ಸವನೆ ಚಡಚಡ ಮಾಡುತ್ತಿದ್ದನು. ದೊಡ್ಡ ಮಂಚದ ಮೇಲೆ ದೊಡ್ಡ ಹಾಸುಗೆಯ ಮೇಲೆ ಮಲಗಿಸಿ ಹೊಚ್ಚಿ ಚುಕ್ಕು ತಟ್ಟಿದರೂ ಅವನಿಗೆ ಸಮಾಧಾನವಾಗಲಿಲ್ಲ. 'ಚಾಲಕ್ಕ, ಚಾಲಕ್ಕ ಕಡೆ ಹೋಗೂನು' — ಎಂದು ಬೊಟ್ಟು ಮಾಡಿ ಮಾಡಿ ತೋರಿಸುವುದು, ಮತ್ತೆ ಚಡಚಡ ಮಾಡುವುದು, ಮೈಮೇಲಿನ ಚಾದರವನ್ನು ಕಿತ್ತಿ ಒಗೆಯುವುದು. ರಾಮನಾಥನಿಗೆ ಒಬ್ಬನಿಗೇ ಏನು ಮಾಡಬೇಕು ತಿಳಿಯದಾಯಿತು. ನಾನಾ ಪರಿಯಿಂದ ಮೋಹನನನ್ನು ರಮಿಸಿದ. ಕಿಸೆಯೊಳಗಿನ ಚಿಲ್ಲರೆ ರೊಕ್ಕಗಳನ್ನೆಲ್ಲಾ ಅವನ ಕೈಯಲ್ಲಿ ಕೊಟ್ಟ. 'ನಾಳೆ ಪೇಪರಮೆಂಟೂ ಚಾಕ್ಲೆಟ್ಟೂ ತರೂಣಂತ. ಫುಗಾ ಕೊಡಸ್ತೀನಿ, ನಿನಗ ಫುಗಾ. ಟ್ರಾಮಿನಾಗ ಕೂತು ಬೂ ಹೋಗಿ ಬರೂಣಂತ................' ಒಂದೇ ಎರಡೇ ಹತ್ತಾರು ಬಗೆಯಿಂದ ರಮಿಸಿ ಹೇಳಿದರೂ ಮೋಹನನಿಗೆ ಸಮಾಧಾನವಿಲ್ಲ. ರಾಮನಾಥನಿಗೆ ಒಮ್ಮೊಮ್ಮೆ ಪಶ್ಚಾತ್ತಾಪದಿಂದ ತಲೆ ದಿಮ್ ಎಂದು ಹೋಗಬೇಕು. ಮೋಹನನನ್ನು ಕರೆದುಕೊಂಡು ಬಂದು ಎಷ್ಟು ದಡ್ಡತನ ಮಾಡಿದೆನಲ್ಲ! ಮಾಂಟಿಸರಿ ಸ್ಕೂಲು ಎಂದುಕೊಂಡು ಬಂದುದಾಯಿತು. ನಾಳೆ ಅದನ್ನಾದರೂ ಪ್ರಯತ್ನಿಸೋಣ ಎನಿಸಿತು. ಸದ್ಯಕ್ಕೆ ಮೋಹನನನ್ನು ಶಾಂತ ಮಾಡುವ ಬಗೆ ಹೇಗೆ ?

'ಚಾಲಕ್ಕಾ ಕಡೆ...............' ಮೋಹನ ಮತ್ತೆ ಬೊಟ್ಟುಮಾಡಿ ತೋರಿಸುವುದು ಹಟ ಮಾಡುವುದು............

'ತಂದೆ ಎಷ್ಟು ಗಳಿಸಿದರೇನು, ತಾಯಿಯೊಬ್ಬಳಿಲ್ಲದಿದ್ದರೆ ಮಕ್ಕಳಿಗೆ ಎಷ್ಟು ಪರದೇಶಿತನ!' ಜಾನಕಿ ಯಾವುದೋ ಒಂದು ಸಂದರ್ಭದಲ್ಲಿ ಮಾತಾಡಿದ್ದಳು. ಅದೀಗ ಪ್ರತ್ಯಕ್ಷದಲ್ಲಿ ಸತ್ಯವೆಂದು ಕಂಡುಬಂತು. ಮಾತೃ ಹೃದಯವಿಲ್ಲದ ಮನೆ, ಮಕ್ಕಳಿಗೆ ಮಸಣ ಸಮ — ಎಂದೆನಿಸಿತು. ತಾಯಿ

ಯಿಲ್ಲದ ಮಗುವನ್ನು ತಂದೆ ಜೋಪಾನ ಮಾಡುವುದು ಅಸಾಧ್ಯವೆಂದು ತೋರಿತು.

ಛಬೆಯ ಮನೆಯ ಬಾಗಿಲ ಬೆಲ್ ಬಾರಿಸಿದ. ಛಬೆಯೇ ಎದ್ದು ಬಂದಳು.

'ಮಲಾ ಹಿ ಝೋಪಚ ಲಾಗೇನಾ.'(ನನಗೂ ನಿದ್ದೆ ಬರಲೊಲ್ಲದು.)

'ಮೋಹನ ಫಾರಚ ತ್ರಾಸ ದೇತೋಯ್' (ಮೋಹನ ಬಹಳ ತ್ರಾಸ ಕೊಡುತ್ತಿದ್ದಾನೆ.)

'ಮೋಹನ್–ಬಾ–ಬಾ-' ಎಂದು ಛಬೆ ಎತ್ತಿಕೊಂಡಳು. ತಮ್ಮವ್ವನ ಬಳಿಗೆ ಎತ್ತಿಕೊಂಡು ಹೋದಳು. ಅಲ್ಲಿಯೂ ಸಮಾಧಾನವಾಗಲಿಲ್ಲ. ಮತ್ತೆ ರಾಮನಾಥನೇ ಎತ್ತಿಕೊಂಡ. ಮತ್ತೆ ತನ್ನ ಕೋಣೆಯೊಳಗೆ ಹೋದ. ಛಬೆ ಅರ್ಧ ಕಪ್ಪು ಹಾಲು ಕಾಸಿಕೊಂಡು ಬಂದಳು. ಮೋಹನನನ್ನು ತೊಡೆಯ ಮೇಲೆ ತೆಗೆದುಕೊಂಡು ರಮಿಸುತ್ತ, ಏನೇನೋ ಹಾಡು ಹಾಡುತ್ತ ಹೊಟ್ಟೆ ತುಂಬ ಹಾಲು ಕುಡಿಸಿದಳು. ಅತ್ತತ್ತು ದಣಿದಿದ್ದ ಮೋಹನನಿಗೆ ನಿದ್ರೆ ಬಂದಂತಾಯಿತು. ಮೆಲ್ಲನೆ ಚುಕ್ಕು ತಟ್ಟುತ್ತ, 'ನೀಜ ನೀಜ ಬಾಳ ನಿಜರೇ' ಎಂದು ಮೆಲ್ಲನೆ ಕಳ್ಳ ದನಿಯಲ್ಲಿ ಲಾಲಿ ಹಾಡಿದಳು. ಮೋಹನ ನಿದ್ದೆ ಹೋದ. ರಾಮನಾಥನಿಗೆ ಸಮಾಧಾನವೆನಿಸಿದಷ್ಟೆ ದುಃಖವೂ ತುಂಬಿ ಬಂತು. ಅವಳ ಬೆನ್ನ ಮೇಲೆ ಕೈಯಾಡಿಸಿ 'ನೀನೇ ಮೋಹನನ ತಾಯಿ.' ಎಂದ.

ಬೋಲ್ಟ ಹಾಕದ್ದರಿಂದ ಬಾಗಿಲು ಧಡಲ್ ಎಂದು ತೆರೆಯಿತು. ಬಂದಿದ್ದವರು ವಿದ್ಯಾ !

'ಮೋಹನ ಚೀ ಆಯಿ' (ಮೋಹನನ ತಾಯಿ) ಎಂದು ಮೆಲ್ಲಗೆ ಎಂದಳು ಛಬೆ.

'ತುಮ್ಹೀ ಚ'— (ನೀನೇ) ಕರುಣಾಪೂರಿತ ದೃಷ್ಟಿಯಿಂದ ನುಡಿದ ರಾಮನಾಥ.

ವಿದ್ಯಾ ಧಡಲ್ ಎಂದು ಬಾಗಿಲು ಮುಂದೆ ಮಾಡಿಕೊಂಡು ಹೊರಗೆ ಹೋಗಿ ನಿಂತಳು. ಛಬೆ ಹಾರಿಬೀಳುವ ಬಾಗಿಲದ ಸಪ್ಪುಳಕ್ಕೆ ಗದುಗುಟ್ಟಿ ನಡುಗಿದಳು. 'ಮೀ ಜಾತೆ' (ನಾನು ಹೋಗುತ್ತೇನೆ.) ಎಂದು ಮತ್ತೊಮ್ಮೆ

ಮೋಹನನ ಮೈಮೇಲೆ ಕೈಯಾಡಿಸಿ ಹೊರಟಳು. ವಿದ್ಯಾ ಇನ್ನೂ ಹೊರಗೇ ಇದ್ದಳು. ಮೋಹನ ಮಲಗಿದನೆಂದು ರಾಮನಾಥನಿಗೆ ಸಮಾಧಾನ ವಾಯಿತು. ತಾನೂ ಅವನ ಮಗ್ಗುಲಿಗೇ ಮಲಗಿದ. ಎಷ್ಟೋ ಹೊತ್ತು ಹೊರಗೆ ನಿಂತು ಆಮೇಲೆ ಒಳಗೆ ಬಂದಳು ವಿದ್ಯಾ. ಬಹಳ ದಣಿದು ಹೋಗಿದ್ದಳು. ಮೇಲಾಗಿ ರಾತ್ರಿ ಊಟವಿಲ್ಲ. ತಾನೊಂದು ಹಂಬಲಿಸಿ ಹೋದರೆ ಅದು ಆದದ್ದೊಂದು ರೀತಿ. ಹೀಗಾಗಿ ಬಹಳ ತ್ರಾಸುಗೊಂಡಿದ್ದಳು, ನೊಂದಿದ್ದಳು. ಸ್ವಸ್ಥವಾಗಿ ಹಾಸಿಗೆಯ ಮೇಲೆ ಬಿದ್ದುಕೊಳ್ಳಬೇಕೆಂದರೆ ಇಡೀ ದೊಡ್ಡ ಹಾಸಿಗೆಯನ್ನೂ ಪಲ್ಲಂಗವನ್ನೂ ತಂದೆ-ಮಕ್ಕಳು ವ್ಯಾಪಿಸಿಬಿಟ್ಟಿದ್ದಾರೆ. ವಿದ್ಯಾವತಿಗೆ ಬಹಳ ಬೇಸರಕ್ಕಿಟ್ಟಿತು. ಪ್ರವಾಸದ ಹಾಸುಗೆಯನ್ನೆ ಉರುಳಿಸಿದಳು. ಹೊದ್ದುಕೊಳ್ಳಲಿಕ್ಕಿರಲಿಲ್ಲ. ದೀಪ ಹಚ್ಚಿ ಓದುತ್ತ ಕುಳಿತಳು. ದೀಪದಿಂದ ಮೋಹನ ಮತ್ತೆಲ್ಲಿ ಏಳುವನೊ ಎಂದು ರಾಮನಾಥನಿಗೆ ಗಾಬರಿ.

'ದೀಪ ತೆಗೆದು ಬಿಡು ವಿದ್ಯಾ, ಮೋಹನ ಮತ್ತೆ ಎದ್ದಾನು.'

ವಿದ್ಯಾ ಸುಮ್ಮನೆ ಓದುತ್ತ ಅಡ್ಡಾಗಿದ್ದಳು.

'ದೀಪ ತೆಗೆದು ಬಿಡು ವಿದ್ಯಾ.'

'ನನಗೆ ಓದುವುದಿದೆ.'

'ಮೋಹನನಿಗೆ ಮಲಗುವುದಿದೆ.'

'ಅಲ್ಲೇ ಮಲಗಿಸಿರಿ, ನಿಮ್ಮ ಗೆಳತಿಯ ಮನೆಯಲ್ಲಿ.'

'ನಾನೂ ಮಲಗಬೇಡವೆ ?'

'ನೀವೂ ಅಲ್ಲಿಯೆ...........'

'ವಿದ್ಯಾ !'

'ಇಷ್ಟೇಕೆ ಗದ್ದರಿಸುವುದು?'

'ನಾಲಗೆ ಹರಿಬಿಡಬೇಡ.'

'ಹುಂ! ನನ್ನ ನಾಲಗೆಗಂಜುವವರು ನಿಮ್ಮ ಮನಸ್ಸಿಗಂಜಲಾರಿರಾ?'

'ವಿದ್ಯಾ! ಜಗಳ ಹೂಡಬೇಕೆಂದೇ ಇಷ್ಟು ಹೊತ್ತಿನ ವರೆಗೆ ಹೊಂಚು ಹಾಕಿಕೊಂಡು ಬಂದಿದ್ದೀಯಾ ?'

'ಹೂಂ! ಮನೆಗೆ ಬರುತ್ತಲೆ ನನ್ನನ್ನು ಹೀಗೆ ನಡಸಿಕೊಳ್ಳಬೇಕೆಂದು ನೀವಿಬ್ಬರೂ ಹಂಚಿಕೆ ಮಾಡಿದ್ದೀರಲ್ಲವೆ?'

ರಾಮನಾಥನು ಏನೂ ಉತ್ತರ ಕೊಡದೆ ಲಾಯಿಟ್ 'ಸ್ವಿಚ್‌ಆಫ್' ಮಾಡಿದ.

ವಿದ್ಯಾ ಹೋಗಿ ಮತ್ತೆ ದೀಪ ಹಚ್ಚಿದಳು.

' ಮಗುವಿನ ಮೇಲಾದರೂ ಕರುಣೆ ಬರುವುದಿಲ್ಲವೆ? ' ಅಬ್ಬರಿಸದೆ ಅಲ್ಪರಿದು ಕೇಳಿದ ರಾಮನಾಥ.

' ರಾವ್ ದಂಪತಿಗಳನ್ನು ನೋಡಿರಿ, ಮಗುವನ್ನು ಎಲ್ಲಿ ಮಲಗಿಸಿರುತ್ತಾರೆ. ಹೇಗೆ ಇಟ್ಟಿರುತ್ತಾರೆ........ದಾಂಪತ್ಯರಹಸ್ಯಗಳು ಮಕ್ಕಳ ಮೇಲೆ ವಿಪರೀತ ಪರಿಣಾಮ ಮಾಡುತ್ತವೆಯೆಂಬ ತತ್ವ ತಿಳಿದಿರಬೇಕಾಗುತ್ತದೆ........ ನಾವು ಬರಿ ಭಾವನೆಗಳಿಗೆ ಮಹತ್ವ ಕೊಟ್ಟು ಪ್ರಯೋಜನವಿಲ್ಲ........ '

ರಾಮನಾಥನಿಗೆ ವಿದ್ಯಾವತಿಯ ಉಪನ್ಯಾಸ ಕೇಳುವ ಮನಃಸಿದ್ಧತೆ, ಮನಃಸ್ವಾಸ್ಥ್ಯಗಳಿದ್ದಿರಲಿಲ್ಲ. 'ವಿದ್ಯಾ, ಇದು ನಿನ್ನ ಮಗುವಲ್ಲ, ನನ್ನ ಮಗು ಎಂಬುದನ್ನು ನಾನು ಬಲ್ಲೆ. ಆದರೆ ನನ್ನ ಭಾವನೆಯ ಅರ್ಥ ನಿನಗಾಗಬಹು ದೆಂದೆಣಿಸಿದ್ದೆ. 'ಭಾವನೆಗೆ ಮಹತ್ವ ಕೊಟ್ಟು ಪ್ರಯೋಜನವಿಲ್ಲ' ಎಂದು ಉಪನ್ಯಾಸ ಮಾಡುತ್ತಿದ್ದೀ. '

' ನಿಮ್ಮಂತಹ ಅರಸಿಕ ಬುದ್ಧಿಗೆ ಎಷ್ಟು ಉಪನ್ಯಾಸ ಹೇಳಿದರೇನು? '

' ನಿನ್ನಂತಹ ಅಂತಃಕರುಣಶೂನ್ಯ ಹೃದಯಕ್ಕೆ ಎಷ್ಟು ಮೊರೆಯಿಟ್ಟ ರೇನು? '

' ಅಂತಃಕರುಣಶೂನ್ಯ ಹೃದಯ ನಿನ್ನದು. ನಿನ್ನ ಹೃದಯವೆಂದರೆ ಬತ್ತಿ ಬರಲಾರದ ಸರೋವರ. ಪ್ರೇಮದ ನಾಲ್ಕು ಕಾಳು ನೀರು ಕೂಡ ಸಿಗು ವಂತಿಲ್ಲ.........ಹೌದು ಹೇಗೆ ಸಿಗಬೇಕು? ಇದ್ದ ಪ್ರೇಮದ ಸೆಲೆಯೆಲ್ಲಾ ಛಬೆಗಾಗಿ........'

' ವಿದ್ಯಾ........ ' ರಾಮನಾಥ ಆಕ್ರೋಶ ಮಾಡಿದ.

' ಆಕ್ರೋಶಮಾಡಿದರೆ ಅಪರಾಧ ಮುಚ್ಚಲಾರದು ರಾವ್. '

' ವಿದ್ಯಾಽಽ ' ರಾಮನಾಥ ಹುಚ್ಚನಂತೆ ಮತ್ತೆ ಆಕ್ರೋಶ ಮಾಡಿದ. ಮೋಹನ ಬೆಚ್ಚಿಬಿದ್ದಂತೆ ಗಾಬರಿಗೊಂಡು ಕಣ್ತೆರೆದು ನೋಡಿದ.

' ಏನು? ನೀನೆನ್ನುವುದಾದರೂ ಏನು? ನಾನು ಬಹಿರಂಗವಾಗಿ ಸಾರಿ ಹೇಳುತ್ತೇನೆ-ಛಬೆಯೊಡನೆ ನಿನ್ನ ಸಂಬಂಧ ಸರಳವಾಗಿಲ್ಲವೆಂದು! '

ರಾಮನಾಥನಿಗೆ ಬಂದ ಆವೇಶ ಯಾತಕ್ಕೂ ಪ್ರಯೋಜನ ಬೀಳುವಂತಿರಲಿಲ್ಲ. ಈ ಕ್ಷಣಕ್ಕೆ ತಲೆ ಕೆಟ್ಟು ಹುಚ್ಚು ಹಿಡಿಯುತ್ತದೇನೊ ಎನ್ನುವಂತಾಯಿತು. ಅವರಿಬ್ಬರ ಕೂಗಾಟಕ್ಕೆ ಮುದ್ದು ಮೋಹನ ಗಾಬರಿಗೊಂಡು ಚಿಟ್ಟನೆ ಚೀರತೊಡಗಿದ.

'ವಿದ್ಯಾ, ನೀನೆನ್ನುವುದಾದರೂ ಏನು?' ಬಹಳ ಶಾಂತನಾಗಿ ಕೇಳಿದ ರಾಮನಾಥ.

'ರಾಮ್! ನಾನು ದಣಿದಿದ್ದೇನೆ. ಮಲಗುವುದಕ್ಕೆ ಗೇಣು ಹಾಸಿಗೆ ಸಹ ಇಲ್ಲದಂತೆ ಮಾಡಿದ್ದೀಯಲ್ಲ?............ಎಲ್ಲಿಯೂ ಒಂದು ಗೇಣು ಸ್ಥಳ ಸಿಗದಂತಾಯಿತೆ ನನಗೆ?'

'ಮಲಗಿಕೋ ವಿದ್ಯಾ, ನಾನು ಹುಡುಗನನ್ನು ಕರೆದುಕೊಂಡು ಹೊರಗೆ ಹೋಗುತ್ತೇನೆ.'

'ಹೋಗು. ಇದಕ್ಕಾಗಿಯೇ ನೀನು ವಿದ್ಯಾವತಿಯ ಕೈ ಹಿಡಿದೆಯಲ್ಲವೆ? ಹೋಗು ರಾಮ್ ಹೋಗು. ನಿನಗೆಲ್ಲಿ ಹೋಗಬೇಕಾಗಿದೆಯೊ ನಾನು ಬಲ್ಲೆ. ಇಲ್ಲದ ನೆವ ಹೇಳಿ ಹೊರಗೆ ಹೋಗಬೇಡ. ಪ್ರಾಮಾಣಿಕತನದಿಂದ ಹೇಳಿ ಹೊರಗೆ ಹೋಗು.'

'ವಿದ್ಯಾ, ನಿನ್ನ ಮೇಲೆ ಕೈಯೆತ್ತುವ ಪಾಶವೀತನ ನನ್ನಲ್ಲಿಲ್ಲ.'

ರಾಮನಾಥನಮಾತಿಗೆ ಕಿವಿಗೊಡದೆ ವಿದ್ಯಾ ಸಂತಾಪಗೊಂಡು ಹುಡುಗನ ಕೈ ಹಿಡಿದು ಕೆಳಗೆಳೆದಳು. ಚಿಟ್ಟನೆ ಚೀರುತ್ತ ಮೋಹನ ಕೆಳಗೆ ಬಿದ್ದನು.

'ರಾಕ್ಷಸೀ ऽऽऽ' ಛಪ್ ಎಂದು ವಿದ್ಯಾವತಿಯ ಗಲ್ಲದ ಮೇಲೆ ರಾಮನಾಥನ ಕೈ ಬಿತ್ತು. ಮೋಹನ ಮತ್ತಿಷ್ಟು ಗಾಬರಿಗೊಂಡು ರಾಮನಾಥನ ಎರಡೂ ಕಾಲುಗಳ ನಡುವೆ ಮುಖವಿಟ್ಟು ಅಡಗಿಕೊಂಡ. ತನ್ನ ರಕ್ಷಣೆ ತಾನೇ ಮಾಡಿಕೊಳ್ಳಲು ಹೋದ. ತನಗೇನೊ ಅಪಾಯವಿದೆಯೆಂದು ಅವನ ಬಾಲಬುದ್ಧಿಗೆ ಹೊಳೆಯಿತು.

ಛಬೆ ಬಾಗಿಲು ತೆರೆದು ಹೊರಗೆ ಬಂದಳು. ಅವಳ ಅಂಗಾಂಗಗಳೆಲ್ಲ ನಡುಗಹತ್ತಿದ್ದುವು. ಅವಳಿಗಾದರೂ ಎಲ್ಲಿಯ ನಿದ್ರೆ? ನಡೆದ ರಂಭಾಟವನ್ನೆಲ್ಲ ನೋಡುತ್ತ ಕೇಳುತ್ತ ಎಚ್ಚತ್ತೇ ಕೂತಿದ್ದಳು. ಒಳಗೆ ಬಂದವಳೇ ಮೋಹನನನ್ನು ಎತ್ತಿಕೊಂಡಳು. ಅವನ ಗಲ್ಲ ಹಿಡಿದು ಮೈದಡವಿ ಅಮುಚಿಕೊಂಡು ಹೆಗಲ

ಮೇಲೆ ಮಲಗಿಸಿಕೊಂಡಳು. ಕಣ್ಣೀರು ತಾವೇ ತಾವಾಗಿ ಒಂದೇಸಮನೆ ಹರಿಯುತ್ತಿದ್ದುವು.

ವಿದ್ಯಾವತಿ ಮುಖ ಕೆಳಗೆ ಹಾಕಿಕೊಂಡು ನೆಲಕ್ಕೇ ಕೂತುಬಿಟ್ಟಳು. ಏನು ಮಾಡುವುದೆಂಬ ಹಂಚಿಕೆ ಹೊಳೆಯಲಿಲ್ಲ. ಅಪಮಾನ, ಅಸೂಯೆಗಳಿಂದ ಹೃದಯ ಕುದ್ದುಹೋಗಿತ್ತು. ಕೆಲಹೊತ್ತಿನ ಹಿಂದೆ ನಡೆದ ಘಟನೆ—ಅದೊಂದು ಪಾಶವೀತನ, ಇದೊಂದು ಪಾಶವೀತನ ಎನಿಸಿತು ಅವಳಿಗೆ. ತನ್ನ ಬುದ್ಧಿಗೆ, ಹೃದಯಕ್ಕೆ ಬೇಕಾದ ಸಮಾಧಾನವೆಲ್ಲಿಯೂ ಸಿಗಲಿಲ್ಲ. ಪುರುಷರ ಪಾಶವೀತನಕ್ಕೆ ಒಳಗೊಳಗೇ ಉರಿದೆದ್ದಳು.

ಛಬಿ ಮೆಲ್ಲನೆ ರಾಮನಾಥನಿಗೆ ತಮ್ಮ ಮನೆಗೆಬರಲು ಸನ್ನೆ ಮಾಡಿದಳು. ರಾಮನಾಥನಿನ್ನೂ ಹೊರಗೆ ನಿಂತಿದ್ದಾಗ ವಿದ್ಯಾ ಧಡಲ್ಲೆಂದು ಬಾಗಿಲು ಹಾಕಿ ಒಳಗೆ ಬೋಲ್ಟು ಹಾಕಿಕೊಂಡಳು.

ಛಬಿ ರಾಮನಾಥನನ್ನು ಒಳಗೆ ಕರೆದಳು. ರಾಮನಾಥನಿಗೆ ಒಳಗೆ ಹೋಗಲಿಕ್ಕೂ ಮನಸ್ಸಿಲ್ಲ. ಹೊರಗೆ ಹೋಗಲಿಕ್ಕೂ ಮನಸ್ಸಿಲ್ಲ. 'ದೇವರೆ, ಮೋಹನನನ್ನು ಕರೆತರುವ ದುರ್ಬುದ್ಧಿಯನ್ನೇತಕ್ಕೆ ದಯಪಾಲಿಸಿದೆ!' ಎಂದು ಒಳಗೊಳಗೇ ಗೋಳಿಟ್ಟ.

ಛಬಿ ಮೋಹನನನ್ನು ಎತ್ತಿಕೊಂಡಳು. ರಾಮನಾಥನೊಡನೆ ಮೇಲೆ ಟೆರೇಸಿಗೆ ನಡೆದಳು. ತೊಡೆಯ ಮೇಲೆ ಮೋಹನನನ್ನು ಮಲಗಿಸಿಕೊಂಡು ಸೆರಗು ಹೊಚ್ಚಿದಳು. ಹೊರಗೆ ಚಳಿಬಿಟ್ಟಿದ್ದರೂ ಮೋಹನನಿಗೆ ಛಬಿ ಹೊಚ್ಚಿದಸೆರಗು, ಮಾತೃವಾತ್ಸಲ್ಯದ ರಕ್ಷಾಕವಚವಾಗಿ ಗೂಡಿನೊಳಗೆ ತಾಯಿಯ ಮಡಿಲಲ್ಲಿ ಬೆಚ್ಚಗೆ ಮಲಗುವ ಹಕ್ಕಿಯ ಮರಿಯಂತೆ ಮೋಹನ ಮತ್ತೆ ನಿದ್ದೆ ಹೋದ.

'ಛಬಿ! ದುಃಖದ ಮಾಲೆಗೆ ನಾನೇ ಔತಣ ಕೊಟ್ಟು, ಕೊರಳಿಗೆ ಕಟ್ಟಿಕೊಳ್ಳುತ್ತಿದ್ದೇನಲ್ಲ?'—ಛಬಿಯ ಭುಜದ ಮೇಲೆ ತಲೆಯಿಟ್ಟು ಬಿಕ್ಕಿ ಬಿಕ್ಕಿ ಅಳ ಹತ್ತಿದ. ಛಬಿ ರಾಮನಾಥನ ತಲೆಯ ಮೇಲೆ ಕೈಯಾಡಿಸಿ ಅವನನ್ನು ಸಮಾಧಾನ ಮಾಡುತ್ತಿದ್ದಳು.

'ಛಬಿ, ಮೋಹನನಿಗೆ ನಿನ್ನಂತಹ ಒಬ್ಬ ತಾಯಿ ದೊರೆತಿದ್ದರೆ?'

ರಾಮನಾಥನ ಅಂತರಂಗವನ್ನರಿತುಕೊಳ್ಳುವ ಸರಿಯಾದ ಬುದ್ಧಿ ಛಬಿಗಿತ್ತು.

' ಆಪಣ ಕಾಹೀ ಕಾಳಜಿ ಕರೂ ನಕಾ. ' ತಾನು ತಾಯಿಯಾಗಿಯೆ ಮೋಹನನ ಸಂರಕ್ಷಣೆ ಮಾಡುವುದಾಗಿ ಅಭಯವಚನವಿತ್ತಳು ಛಬೆ.

' ಛಬೆ, ನಾವಿಬ್ಬರೂ ಕೂಡಿದ್ದು ಬರಿ ಒಂದು 'ಆ್ಯಕ್ಸಿಡೆಂಟ' ಅಲ್ಲ—,

' Accident ಮುಳೇಚ ಆಪ್ಹಿ ಏಕತ್ರ ಆಲೊ. ' (Accident ಮೂಲಕವೇ ನಾವಿಬ್ಬರೂ ಒತ್ತಟ್ಟಿಗೆ ಕೂಡಿದ್ದು.) ಛಬೆ ಅರ್ಥವತ್ತಾಗಿ ನುಡಿದಳು.

' ನಾನು ವಿದ್ಯೆಯನ್ನು ಕೂಡಿದ್ದೂ ಒಂದು 'ಆ್ಯಕ್ಸಿಡೆಂಟು'. ಆದರೆ ಆ ಆ್ಯಕ್ಸಿಡೆಂಟ್ ಎಲ್ಲಿ, ಈ 'ಆ್ಯಕ್ಸಿಡೆಂಟ್' ಎಲ್ಲಿ.........ಸರಿ, ಜೀವನದ ಯಾವ ಘಟನೆಯೂ ಬರಿ ಆ್ಯಕ್ಸಿಡೆಂಟ್ ಅಲ್ಲ ಈಶಸಂಕಲ್ಪದಿಂದಲೆ ನಡೆಯುತ್ತದೆ ಎನ್ನಬೇಕು. '

' ಹೋ. Life is a scheduled book of God. ' (ಜೀವನವು ದೇವರ ಕಾಲಕ್ರಮದ ಪುಸ್ತಕವಿದ್ದಂತೆ.)

ಸ್ವಲ್ಪ ಹೊತ್ತು ಇಬ್ಬರೂ ಮೌನ.

' ಛಬೆ, ನಾಳೆ ಮೋಹನನ್ನು ಮಾಂಟೇಸರಿ ಶಾಲೆಗೆ ಕಳಿಸಿಬಿಡೋಣ?'

' ಬಘೂ. ' ತಮ್ಮಲ್ಲೇ ಮೋಹನನಿರಲಿ ಎಂಬುದೆ ಛಬೆಯ ಅಭಿಪ್ರಾಯವಾಗಿತ್ತು.

ಛಬೆ ತೋರುತ್ತಿರುವ ನಿಸ್ಸೀಮ ಅಂತಃಕರುಣವನ್ನು ಹೇಗೆ ಪ್ರತಿಯಾಗಿ ಕೊಡುವುದು ಎಂಬ ಪ್ರಶ್ನೆ ರಾಮನಾಥನಿಗೆ.

' ಛಬೆ, ನಾಳೆ ಕಾಲೇಜಿನ ಕಡೆ ಹೋಗಿಬರೋಣವೆ? '

' ವಿಚಾರೂ.' ಛಬೆಗೆ ಮೊದಲು ನೌಕರಿಗಾಗಿ ಪ್ರಯತ್ನಿಸುವುದು ಬೇಕಿತ್ತು. ಈ ಸಂದರ್ಭದ ಅದಾವ ವಿಷಯವನ್ನೂ ಚರ್ಚಿಸುವುದು ಅವಳಿಗೆ ಬೇಕಿರಲಿಲ್ಲ. ಈಗ ಅವಶ್ಯವಾಗಿ ಬೇಕಾಗಿದ್ದುದು ಮೋಹನ ರಾಮನಾಥರ ಸ್ವಾಸ್ಥ್ಯ.

ಛಬೆ-ರಾಮನಾಥರ ನಡುವೆ ಬೆಳೆದ ಸಲುಗೆ ಸ್ವಾತಂತ್ರ್ಯಗಳ ಮೂಲಕ ಯಾವುದೇ ಔಪಚಾರಿಕ ಆಭಾರಮನ್ನಣೆಯ ಮಾತುಗಳನ್ನಾಡುವ ಅವಶ್ಯಕತೆ ರಾಮನಾಥನಿಗೆ ತೋರಲಿಲ್ಲ.

' ಹೊತ್ತಾಯಿತು. ಮೋಹನನನ್ನು ಕರೆದುಕೊಂಡು ನೀನು ಹೋಗು. ನಾನು ಇಲ್ಲೇ ಮಲಗುತ್ತೇನೆ. ' ರಾಮನಾಥನೆಂದ.

' ನಕೋ ಫಾರ ಥಂಡೀ ಆಹೆ. ಮೀ ಆತ ಮಧೆ ಜಾಗಾ ಕರೂನ ದೇತೆ.'

ರಾಮನಾಥ ಅಲ್ಲೇ ಮಲಗಲಪೇಕ್ಷಿಸಿದ. ಛಬಿ ಹೆಚ್ಚು ಆಗ್ರಹ ಹಿಡಿಯದೆ ಮೋಹನನನ್ನೆತ್ತಿಕೊಂಡು ಹೋದಳು. ರಾಮನಾಥನಿಗೆ ಮೇಲೆ ಒಂದು ಹಾಸಿಗೆ ಹಾಕಿಕೊಟ್ಟಳು.

' ನಮ್ಮ ಮನೆಯೊಳಗೆ ದೀಪವಿದೆಯೆ ಛಬಿ? '

' ನಾಹಿ. '

ಛಬಿ ಕೆಳಗೆ ಹೋಗಿ ಮೇಲೆ ಬರುವಷ್ಟರೊಳಗೆ ರಾಮನಾಥನಲ್ಲಿ ಇನ್ನೊಂದು ಬಗೆಯ ವಿಚಾರ ಕೋಲಾಹಲ, ಪಶ್ಚಾತಾಪ.

' ಛಬಿ ನನ್ನ ಈ ಭಾವನಾವೇಶವು ನನಗೇ ಬೇಸರಿಟ್ಟಿದೆ.....ಹೇಳು ಛಬಿ ವಿದ್ಯಾವತಿಗೆ ನಾನು ಕೆನ್ನೆಗೆ ಏಟು ಕೊಟ್ಟುದು ತಪ್ಪಾಯಿತೆ?......... '

ಛಬಿಗೆ ಏನು ಹೇಳಬೇಕೊ ತಿಳಿಯದಾಯಿತು. ಏನು ಹೇಳಿದರೆ ರಾಮನಾಥನಿಗೆ ಸಮಾಧಾನವಾದೀತೊ ಅದೂ ತಿಳಿಯಲಿಲ್ಲ.

' ಹೌದು, ತಪ್ಪಾಯಿತಲ್ಲವೆ ಛಬಿ? '

ಛಬಿ ಸುಮ್ಮನೆ ಇದ್ದಳು.

' ವಿದ್ಯೆಯ ಕ್ಷಮೆ ಕೇಳಿಕೊಂಡು ಬರಲೆ ಛಬಿ? '

' ನಕೋ. ಆಣಖೀನ್ ಉಗೀಚ ಕಾಹಿತರೀ ಘೋಟಾಳಾ ವ್ಹಾಯಚಾ. ' (ಬೇಡ. ಮತ್ತೆ ಏನಾದರೂ ಗೊಂದಲವೇದ್ದೀತು)

' ಛಬಿ, ನಾನು ಬಹಳ ಸಲ ತಪ್ಪುಮಾಡುತ್ತೇನೆ ತಪ್ಪುಮಾಡಿ ಪಶ್ಚಾತ್ತಾಪ ಪಡುತ್ತೇನೆ.....ವಿದ್ಯಾವತಿಗೆ ಹೊಸದಾಂಪತ್ಯ! ಹೊಸದಾಂಪತ್ಯದ ಸರಸ ಶೃಂಗಾರ ಬೇಕು. ಅದನ್ನು ಬಯಸಿದರೆ ಅವಳದೇನು ತಪ್ಪು? ಪ್ರೇಮದ ಹಸಿವೆಯಿಂದ ಆಕೆ ಮನೆಗೆ ಬಂದಳು. ಮೋಹನ ಅವಳ ಶೃಂಗಾರ ಸ್ವಾತಂತ್ರ್ಯಕ್ಕೆ ಅವಕಾಶ ಕೊಡಲಿಲ್ಲ. ಅವಳಿಗೆ ತನ್ನ ರಸಿಕತೆಯ ಚಟುವಟಿಕೆಗಳಿಗೆ, ತನ್ನ ರಸಿಕಹಂಬಲಗಳಿಗೆ ನನ್ನಿಂದ ಪ್ರೋತ್ಸಾಹ ಬೇಕಿತ್ತು. ನನ್ನ ಮನೋವೃತ್ತಿಗೆ ಅದು ಹಿಡಿಯಲಿಲ್ಲ. ಅವಳಿಗದು ಸೊಗಸಲಿಲ್ಲ....ಒಂದು ದಿನ ಮಧ್ಯಾಹ್ನ ಒಳಗಿನ ಹೊರಗಿನ ತಾಪವನ್ನು ಕಳೆದು ತಂಪುಮಾಡಿಕೊಳ್ಳುವುದಕ್ಕಾಗಿ ಇಬ್ಬರೂ ಕೂಡಿದೆವು. ಅವಳಿಗಾಗಿ ನಾನು ತ್ಯಾಗ ಮಾಡಲಿಲ್ಲ. ನನಗಾಗಿ ಅವಳು ತ್ಯಾಗ ಮಾಡಲಿಲ್ಲ....ನನ್ನ ಎರಡನೆಯ ಸಂಬಂಧ ಅವಳಿಗೆ

ವಂಚನೆಯಾಯಿತು. ನಾನು ಕಳ್ಳನಾದೆ, ಸುಳ್ಳನಾದೆ ಅವಳ ಮುಂದೆ........ ಮೊದಲಿಗಾದರೂ ನನ್ನನ್ನು ಮೆಚ್ಚುವ ಯಾವ ಗುಣವನ್ನು ನನ್ನಲ್ಲಿ ಕಂಡು ಕೊಂಡಳೊ ನಾನರಿಯೆ........'

'ಆಪಲಾ ಸರಳಪಣಾ ಆಣಿ ಕೋಮಲ ಅಂತಃಕರಣ ಕುಣಾಲಾ ಆವಡಣಾರ ನಾಹಿ ?' (ನಿಮ್ಮ ಸರಳತನ ಕೋಮಲ ಅಂತಃಕರಣ ಯಾರಿಗೆ ಸೇರಲಿಕ್ಕಿಲ್ಲ ?)

ಛಬಿಯ ಪ್ರಶ್ನೆ ರಾಮನಾಥನನ್ನು ಕ್ಷಣಹೊತ್ತು ಮೌನಗೊಳಿಸಿತು. ತನ್ನ ಬಗ್ಗೆ ಛಬಿಯಲ್ಲಿ ಯಾವ ಭಾವನೆಯಿದ್ದಿರಬಹುದು ಎಂದು ವಿಚಾರಿಸ ಹಚ್ಚಿತು.

'ಛಬಿ, ನಾನು ಈ ಎರಡನೆಯ ಸಂಬಂಧ ಕಟ್ಟಿಕೊಳ್ಳಬಾರದಾಗಿತ್ತು. ನಾನು ಹಾಗೇ ವಿಧುರನಾಗಿ ಅವಿವಾಹಿತನಾಗಿ ಉಳಿದಿದ್ದರೆ ........?'

'ತ್ಯರ ಕಾಯ ಝಾಲ ಅಸ್ತ ?' (ಅಂದರೆ ಏನಾಗುತ್ತಿತ್ತು ?)

ಛಬಿಯ ಪ್ರಶ್ನೆಯ ರೀತಿಯೇ ತಿಳಿಯಲಿಲ್ಲ ರಾಮನಾಥನಿಗೆ.

'ಛಬಿ ನಿನ್ನಂತಹ ಒಂದು ಹೃದಯ ನನಗೆ ದೊರಕಿದ್ದರೆ?'

'ಬರ ಅತ್ತಾ ಝೋಪಾ.' (ಇರಲಿ. ಈಗ ಮಲಗಿರಿ.)

ಛಬಿ ಗಡಬಡಿಸಿಕೊಂಡು ಕೆಳಗಿಳಿದು ಹೋದಳು.

ರಾಮನಾಥನ ಅಂತಃಕೋಲಾಹಲಕ್ಕೆ ಇನ್ನಷ್ಟು ಪುಟ ಕೊಟ್ಟು ಎದ್ದು ಹೋದಳು ಛಬಿ. ವಿದ್ಯಾವತಿಯ ಬಗ್ಗೆ ಪಶ್ಚಾತ್ತಾಪಭಾವ ಮೂಡಿ ಕ್ಷಮೆ ಕೇಳುವವರೆಗೂ ಹರಿದ ಬುದ್ಧಿ ಅಷ್ಟಕ್ಕೆ ಸ್ತಬ್ಧವಾಗಿ ಛಬಿಯ ಮನೋಭಿತ್ತಿ ಯನ್ನು ಒಳಹೊಕ್ಕು ನೋಡಲು ಹವಣಿಸಿತು. ಛಬಿ ಹಾಗೇಕೆ ಹೇಳಿದಳು?...... 'ಆಪಲ್ಯಾ ಸರಳಪಣಾ ಕೋಮಲ ಅಂತಃಕರಣ ಕುಣಾಲಾ ಆವಡತ ನಾಹಿ ?'....ಛಬಿಯ ಸುಕುಮಾರಚಿತ್ರದ ಮುಂದೆ ವಿದ್ಯೆಯ ಚಿತ್ರ ಕಠೋರ ವಾಗಿ ಕಂಡಿತು....ವಿದ್ಯಾನ ಪರಿಚಯವೂ ಒಂದು ಆ್ಯಕ್ಸಿಡೆಂಟು, ಛಬಿಯ ಪರಿ ಚಯವೂ ಒಂದು ಆ್ಯಕ್ಸಿಡೆಂಟು. ಎರಡು ಆ್ಯಂಕ್ಸಿಡೆಂಟುಗಳ ನಡುವೆ ಎಷ್ಟು ಅಂತರ ! ಒಂದು ಕಠೋರ ವಜ್ರ, ಇನ್ನೊಂದು ಕೋಮಲ ಕುಸುಮ !.... ಹೃದಯ ಕೋಲಾಹಲದಲ್ಲಿ ಕಡಿದರೂ ನಿದ್ದೆ ಬರಲಿಲ್ಲ ರಾಮನಾಥನಿಗೆ.

ಹೃದಯ ಕೋಲಾಹಲದಲ್ಲಿ ಕಡಿದರೂ ನಿದ್ರೆ ಬರಲಿಲ್ಲ ವಿದ್ಯಾವತಿಗೆ.

'ಛಪ್' ಎಂಬ ಸಪ್ಪಳ ಪುನಃ ಪುನಃ ಅವಳ ಹೃದಯದ ಮೇಲೆ ಏಟು ಕೊಟ್ಟಂತಾಗಿ ಅವಳ ಅಭಿಮಾನದ ಹಾವಿನ ಹೆಡೆಯನ್ನು ಕೆಣಕುತ್ತಿತ್ತು.... ಕೆಲ ಹೊತ್ತಿನ ಹಿಂದಿನ ಆ ಘಟನೆ, ಅಂಧೇರಿಯ ಅಂಧಃಕಾರದ ಹಾದಿಯಲ್ಲಿ ರಾಜನ್ ನಡಸಿದ ಅವಿಚಾರ, ಅವಳ ಸದಭಿಮಾನದ ಅಗ್ನಿಯನ್ನು ಹೊತ್ತಿಸುತ್ತಿತ್ತು. .........ರಾಮನಾಥನಂತಹ ಎಂಜಲದ ಕೈಗೆ ನಾಲಗೆ ಚಾಚಿದಿದು ತನ್ನದೇ ಪ್ರೀತಿಯ ಭಿಕಾರಿತನವೆನಿಸಿತು....ಕೈ ಕೋಮಲವೆಂದು ಹಿಡಿದಳು; ಕೆನ್ನೆಗೆ 'ಛಪ್' ಎಂದು ಏಟು ಕೊಡುವಷ್ಟು ವಜ್ರಕಠೋರವಾಯಿತು ಅದು. ಕೈನಿರ್ಮಲವೆಂದು ಹಿಡಿದಳು; ಜಾನಕಿ ಮುಟ್ಟಿದ ಎಂಜಲದ ಕೈ ಛಬೆಯನ್ನು ಮುಟ್ಟಿ ಮುಸುರೆಯಾಗಲಿದೆ ಅದು. ಇದರಿಂದ ಪರಿಹಾರವೇನು ? ತನ್ನ ಸಂತಾಪಕ್ಕೆ ಉಪಶಮನವೇನು ?..... ಹೆಂಗುಸೆಂದ ಮಾತ್ರಕ್ಕೆ ಈ ಪರಿ ಅವಹೇಳನೆಗೆ ಗುರಿಯಾಗಬೇಕೆ ?.... .........

ಶಾಕುಂತಲದ ನಾಯಿಕೆಯ ಚಿತ್ರ ಕಣ್ಮುಂದೆ ಬಂತು. ಪತಿಯಿಂದಾದ ಅವಹೇಳನೆಯನ್ನು ಮರೆಯಲಿಲ್ಲ ಅವಳು. ಅಂತಃಕರಣಕ್ಕೆ ಅಭಿಮಾನಕ್ಕೆ ಉಂಟಾದ ಗಾಯದ ಸೇಡು ತೀರಿಸಿಕೊಳ್ಳದೆ ಬಿಡಲಿಲ್ಲ ಅವಳು. ಅದಕ್ಕಾಗಿ ಜೀವವನ್ನೆ ತೇದಳು. ತಪಶ್ಚರ್ಯ ಮಾಡಿದಳು. ಕೊನೆಗೆ ದುಷ್ಯಂತ— 'ಕ್ಷಮಾ, ದೇವಿ ಕ್ಷಮಾ' ಎಂದು ಶರಣು ಬಂದ. ಗಂಡಸರಿಗೆ ಇಷ್ಟು ಮಾಡದಿದ್ದರೆ ಬುದ್ಧಿ ಬರುವದಿಲ್ಲ....ತಾನೇ ಒಂದು ಕಥೆ ಬರೆಯಬೇಕು.... ಸಾಮಾಜಿಕ ಶಕುಂತಲಾ !........ಯುವಕನೊಬ್ಬ ಯುವತಿಯನ್ನು ವಂಚಿಸಿದ ಕಥೆ....ಆದರೆ ಇಷ್ಟರಿಂದಲೆ ಸೇಡು ತೀರದು !.... ಇನ್ನೇನು ಉಪಾಯ....?

'ತಾಯೀ ಓಽ ಭಾಕರ ವಾಡಾಽಽ' ದೂರದಿಂದ ಭಿಕ್ಷುಕಿಯ ದನಿ.

'ಕಲೋೞಽ........' ಕಲೇಗಾರನ ದನಿ ಮತ್ತೊಂದು ಕಡೆಯಿಂದ.

ರಾಮನಾಥನಿಗೆ ಎಚ್ಚರವಾದಾಗ ಬಿಸಿಲು ಬಿದ್ದಿರದಿದ್ದರೂ ಸ್ವಚ್ಛ ಬೆಳಗಾಗಿತ್ತು. ಎದ್ದು ಕೆಳಗೆ ಬಂದ. ಛಬೆಯ ಮನೆಯ ಬಾಗಿಲು ಇನ್ನೂ ತೆರೆದಿರಲಿಲ್ಲ. ಹರಿನಿವಾಸದ ಬಳಿ ಒಂದು ಇರಾಣಿ ಹೋಟ್ಲಗೆ ಹೋಗಿ ಚಹ ತೆಗೆದುಕೊಂಡು ಅಲ್ಲೇ ಪೇಪರ ನೋಡುತ್ತ ಸ್ವಲ್ಪ ಹೊತ್ತು ಕುಳಿತುಕೊಂಡ. ಅಷ್ಟರಲ್ಲಿ ಛಬೆ ರೇಶನ್ ಹಾಲಿಗೆಂದು ಆಚೆಯಿಂದ

ಹಾಯ್ದು ಹೋದಳು. ಅವಳು ತಿರುಗಿ ಬರುವುದನ್ನೇ ನೋಡುತ್ತ ರಾಮ ನಾಥ ಕೈಯಲ್ಲಿ ಪೇಪರ ಹಿಡಿದುಕೊಂಡು ಕುಳಿತುಕೊಂಡ 'Let this white and pure soap with the lovely perfume keep your skin lovely '— (ಸುವಾಸಮಯ ಶುಭ್ರವಾದ ಈ ಶುದ್ಧ ಸಬಕಾರವು ನಿಮ್ಮ ಅಂಗಕಾಂತಿಗೆ ಸೌಂದರ್ಯವನ್ನು ತರಲಿ.) ಮತ್ತೆ ವಿದ್ಯಾವತಿಯ ಫೋಟೊ ! ಒಂದಲ್ಲದ ಹಾಗೆ ಮೂರು ಚಿತ್ರಗಳು!....ಫೋಟೋದ ವಿದ್ಯಾ ವತಿಗೆ ಯಾರೊ ಮೀಸೆ ಬರೆದು ಚೇಷ್ಟೆ ಬಗೆದಿದ್ದರು ! ಮತ್ತೆ ಪುಟ ತಿರು- ವಿದ. ' Readers' views' (ಓದುಗರ ಓಲೆಗಳು)ನಲ್ಲಿ ಮೊದಲನೆಯ ಪತ್ರ! ' Contraceptives ' ಎಂಬ ಶೀರ್ಷಿಕೆಯ ಕೆಳಗೆ ಅಚ್ಚಾದ ಓಲೆಗೆ ವಿದ್ಯಾ ವತಿಯ ಸಹಿ!. ಪೇಪರ ಮಡಿಚಿ ದೊಪ್ಪನೆ ಟೇಬಲ್ ಮೇಲೆ ಒಗೆದು ಎದುರಿ ಗಿರುವ ' ಭಾಜಿ ದುಕಾನ್ ' ಬಳಿ ಬಂದು ನಿಂತ. ಎರಡು ದೊಡ್ಡ ದೊಡ್ಡ ಕ್ಯಾಬೇಜ ಖರೀದಿ ಮಾಡಿದ. ಛಬಿ ಹಾಲು ಹಿಡಿದುಕೊಂಡು ಬಂದಳು. ರಾಮನಾಥನನ್ನು ನೋಡಿ ನಕ್ಕಳು.

' ಹೇ ಕಶಾಲಾ ? ' (ಇವು ಯಾತಕ್ಕೆ ?) ರಾಮನಾಥನ ಮನೆಯಲ್ಲಿ ಅಡಿಗೆ ಇಲ್ಲವೆಂದು ಗೊತ್ತು ಅವಳಿಗೆ.

' ಒಳ್ಳೇ ಕ್ಯಾಬೇಜ ಕಂಡವು. ತೆಗೆದುಕೊಂಡೆ. ವೈನಿಗೆ ಕೊಡು.' ಎಂದು ಕ್ಯಾಬೇಜ ಛಬಿಯ ಕೈಯಲ್ಲಿ ಕೊಟ್ಟು ತಾನು ಹಾಲಿನ ಪಾತ್ರೆ ತೆಗೆದುಕೊಂಡ.

' ಅತ್ತಾ ಕಶಾಲಾ ಭಾಜಿ ? ಪುಷ್ಕಳ ಆಹೆ ಘರಿ ( ಈಗೇಕೆ, ಮನೆಯಲ್ಲಿ ಪಲ್ಲೆ ಬೇಕಾದಷ್ಟಿದೆ.) ಛಬಿ ಎಂದಳು.

' ಇರವಲ್ಲದು. ಅದೇನು ಕೇಡಿಸುವುದಿಲ್ಲ. '

' ಲವಕರ ಉಠ್ಲಾ ವಾಟತ ? ' (ಲಗೂನ ಎದ್ದಿರಿ ಕಾಣಸ್ತದೆ ?)

' ಹೊ. '

' ಕಾಯ ? ಝೋಪ ಲಾಗಲೀ ನಾಹಿ ? ' (ನಿದ್ದೆ ಹತ್ತಲಿಲ್ಲೇನು?)

' ನಸುಕಿನ ತಂಪಿಗೆ ಸ್ವಲ್ಪ ನಿದ್ರೆ ಹತ್ತಿತು. ಬೆಳಗಾಗುವ ತಡವಿಲ್ಲದೆ ' ಬಾಯೀ, ಭಾಕ್ರಿ ವಾಡಾ ' ಎಂಬ ಉದಯರಾಗಕ್ಕೆ ಎಚ್ಚರವಾಯಿತು. ಮೋಹನ ಮಲಗಿದ್ದನೆ ಛಬಿ ? '

' ಹೊ. ಅಜೂನ ಝೋಪಲಾ ಆಹೆ ತೇ..' ( ಹುಂ ಇನ್ನೂ ಮಲಗಿದ್ದಾನೆ).

ಇಬ್ಬರೂ ಅಟ್ಟ ಹತ್ತಿ ಹೋಗುವುದಕ್ಕೆ ವಿದ್ಯಾ ಕೆಳಗಿಳಿಯುತ್ತಿದ್ದಳು. ಕೈಯೊಳಗೆ 'ಮನಿಬ್ಯಾಗ್' ಮತ್ತು ಛತ್ರಿ ತೆಗೆದುಕೊಂಡು ಹೊರಟಿದ್ದಳು. ಛಬೆ ಅಟ್ಟ ಹತ್ತುವಾಗ ಆಸರಕ್ಕಾಗಿ ಮೆಟ್ಟಲಿನ ಕಟಾಂಜನದ ಮೇಲಿಡುವುದಕ್ಕಾಗಿ ಎರಡೂ ಕ್ಯಾಬೇಜುಗಳನ್ನು ಒಂದೇ ಕೈಯಲ್ಲಿ ತೆಗೆದುಕೊಳ್ಳ ಹೋದಾಗ ರಾಮನಾಥ 'ಇಲ್ಲಿ ತಾ ಛಬೆ, ನಾನು ತೆಗೆದುಕೊಳ್ಳುತ್ತೇನೆ' ಎಂದು ಕ್ಯಾಬೇಜ ತೆಗೆದುಕೊಂಡ. ತೆಗೆದುಕೊಳ್ಳುವಾಗ ಇಬ್ಬರೂ ಒಂದೇ ಮೆಟ್ಟಲ ಮೇಲೆ ನಿಂತಿದ್ದುದರಿಂದ ವಿದ್ಯಾವತಿಗೆ ಕೆಳಗಿಳಿಯಲಿಕ್ಕೆ ಮಾರ್ಗ ಕಟ್ಟಾಯಿತು. ಕ್ಷಣಹೊತ್ತು ಅಲ್ಲೇ ನಿಂತಿದ್ದವಳು ಛಬೆ ಒಂದು ಮೆಟ್ಟಲು ಮೇಲೇರಿದ ಮೇಲೆ ಕೆಳಗಿಳಿದಳು. ಒಂದೆರಡು ಮೆಟ್ಟಲನ್ನು ಇಳಿದಿರಬಹುದು. 'ಕೀಲಿ ಕೈ ?' ಎಂದು ಕೇಳಿದ ರಾಮನಾಥ.

ಛಬೆ ಅಲ್ಲೇ ಗಕ್ಕನೆ ನಿಂತಳು, ಮತ್ತೇನಾಯಿತೊ ಎಂದು. ವಿದ್ಯಾ ರಾಮನಾಥನ ಮಾತಿಗೆ ಲಕ್ಷಿಸದೆ ಮತ್ತೊಂದೆರಡು ಪಾವಟಿಗೆ ಕೆಳಗಿಳಿದಳು.

'ವಿದ್ಯಾ, ಬೀಗದ ಕೈ ಕೊಟ್ಟುಹೋಗು.'

ವಿದ್ಯಾ ಮತ್ತೆ ಹಾಗೇ ಮುಂದೆ ನಡೆದಳು.

'ವಿದ್ಯಾಽಽ' ಎಂದು ಆಕ್ರೋಶಮಾಡಿದ ರಾಮನಾಥ.

'ಕುಲೂಪ ಲಾವಲ ನಾಹಿ' (ಕೀಲಿ ಹಾಕಿಲ್ಲ) ಛಬೆ ಮೇಲೆ ಕಟಾಂಜನದಿಂದ ಇಣುಕಿ ನೋಡಿ ಹೇಳಿದಳು. ರಾಮನಾಥ ಮೇಲಕ್ಕೆ ಹತ್ತಿದ. ಛಬೆ ಅಲ್ಲೇ ನಿಂತಿದ್ದಳು.

'ಎಷ್ಟೊಂದು ಸೊಕ್ಕು!' ರಾಮನಾಥ ಉದ್ಗರಿಸಿದ. ಛಬೆ ಸುಮ್ಮನೆ ಇದ್ದಳು. ಇಬ್ಬರೂ ಮೆಟ್ಟಲೇರಿ ಮೇಲೆ ಬಂದರು. ರಾಮನಾಥ ತನ್ನ ಮನೆಯೊಳಗೆ ಪ್ರವೇಶಮಾಡಿದ. ಟೇಬಲ್ ಮೇಲೆ ಒಂದು ಪಾಕೀಟು ಅಂಚೆಯ ಮುದ್ರೆಯಿಲ್ಲದೆ ರಾಮನಾಥನ ಹೆಸರಿನಿಂದ ಕಾದಿತ್ತು.

'ಮಿಸ್ಟರ ರಾಮನಾಥ,

ನಿನ್ನ ಕೈಯೊಳಗೆ ಹಿಂಸೆಯನ್ನು ತಡೆಯಲಾರದೆ ನಾನು ಹೋಗುತ್ತಿದ್ದೇನೆ. ನನ್ನ ಕಪಾಳದ ಮೇಲೆ ನೀನು ನಿನ್ನೆ ಕೊಟ್ಟ ಏಟು ಅಲ್ಲಿಯೇ

ಮಾಯವಾಗಿರಬಹುದು. ಆದರೆ ಒಳಗೆ ಮೂಡಿದ ಅದರ ಬಾಸಾಳು ಎಂದಿಗೂ ಮಾಯವಾಗದಂತಹದು. ನಿನ್ನಂತಹ ಪಾಶವೀ ಪುರುಷನ ನಿರುಪಯೋಗಿ ದಾಸಿಯಾಗಿ ನನ್ನ ಜೀವನದ ಗೊತ್ತುಗುರಿ, ಧ್ಯೇಯಸಾಧನ ಗಳಿಗೆ ತಿಲಾಂಜಲಿ ಕೊಡುವುದಕ್ಕಿಂತ ವಿಶಾಲವಾದ ಜಗತ್ತಿನಲ್ಲಿ ಮತ್ತೊಂದು ಹೆಜ್ಜೆ ಮುಂದಿಟ್ಟರೆ ಸುಖದ ಕ್ಷಿತಿಜವು ತೆರೆಯಬಹುದೆಂದುಕೊಂಡಿದ್ದೇನೆ.

ನಿನ್ನ ಚಿತ್ರಹಿಂಸೆಯ ಬಗ್ಗೆ ನಿನಗೆ ಪಶ್ಚಾತ್ತಾಪವಾದರೆ ಅಷ್ಟೇ ಸಾಕು. ಅದಕ್ಕೂ ಹೆಚ್ಚಿನ ಶಿಕ್ಷೆ ನಾನು ಕೊಡಬಯಸುವುದಿಲ್ಲ. ಪಶ್ಚಾತ್ತಾಪವಾಗ ದಿದ್ದರೆ ಅದೂ ಸರಿ, ನಿನ್ನ ದೇಹ ಬಹಳ ದಪ್ಪವಾಗಿದೆಯೆಂದುಕೊಳ್ಳುವೆ. ನಿನ್ನ ನಿನ್ನಿನ ಹಿಂಸಾಕೃತಿಯ ನ್ಯಾಯಾನ್ಯಾಯನಿರ್ಣಯಕ್ಕಾಗಿ ನಾನು ಹೊರಟಿ ದ್ದೇನೆ. ಅದರ ನಿಷ್ಕರ್ಷೆಯಾಗುವ ವರೆಗೆ ನಿನಗೆ ಗುಡ್‌ಬಾಯ್.

—ವಿದ್ಯಾವತಿ'

ಪತ್ರ ಓದಿ ರಾಮನಾಥನ ಮೈಯೆಲ್ಲ ಉರುಪಿಟ್ಟಂತಾಯಿತು. ತಲೆ ದಿವ್ ಎಂದು ತಿರುಗಹತ್ತಿತು. ಬುದ್ಧಿ ಮಂಜುಮಂಜಾಗಿ ಶೂನ್ಯವಾಗು ವಂತೆ ತೋರಿತು. ಛಬಿ ಹಾಲು ಕಾಯಿಪಲ್ಯೆ ಒಳಗಿಟ್ಟು ಗಾಬರಿಯಿಂದ ಬಂದಳು.

'ಮೋಹನ್‌ಲಾ! ಥೋಡ ಟೆಂಪರೇಚರ್ ಆಹೆ.' (ಮೋಹನನಿಗೆ ಸ್ವಲ್ಪ ಜ್ವರ ಇವೆ!) ರಾಮನಾಥನಿಗೆ ಒಮ್ಮೆಲೆ ಕೇಳಿಸಲಿಲ್ಲ. ಶೂನ್ಯಮನಸ್ಕ ನಾಗಿದ್ದನು. ಎಷ್ಟೋ ಹೊತ್ತಿನ ಮೇಲೆ 'ಏನು ಛಬಿ?' ಎಂದು ಕೇಳಿದನು.

ರಾಮನಾಥನ ಕೈಯೊಳಗಿನ ಓಲೆಯನ್ನು ಅವನ ಮುಖಮುದ್ರೆಯ ಕನ್ನಡಿಯಲ್ಲಿ ಓದಿ ಅರ್ಥಮಾಡಿಕೊಂಡಳು ಛಬಿ.

'ಕುಣಾಚೆ....?' (ಯಾರದು?)

'ವಿದ್ಯಾ....' ಓಲೆಯನ್ನು ಛಬಿಗೆ ಓದಿ ತೋರಿಸಿದನು.

'ಛಬಿ. ನಾನೇ ಅವಳಿಂದ ಅಗಲಬೇಕೆಂದಿದ್ದೆ. ಜನಕ್ಕೂ ಮನಕೂ ಅಂಜಿ ಸುಮ್ಮನಿದ್ದೆ. ಈಗ ತಾನೇ ಅಗಲಿದ್ದಾಳೆ........'

'ಮ್ಹಣಜೆ?' (ಅಂದರೆ?)

'ಸೋಡಚೀಟಿ ಕೊಟ್ಟಿಲ್ಲ. ಕೊಡುವ ಸಿದ್ಧತೆಯಲ್ಲಿದ್ದಾಳೆ.'

‘ ಹೆ ಲೆಟೆರ ಲೀಗಲ್ ಕಸ ಹೋಣಾರ ? ’ ( ಈ ಪತ್ರ ಕಾಯಿದೇಶೀರ ಹೇಗಾಗುವದು ?)

‘ ಛಬಿ, ಮನಸ್ಸು ಬಿಡುಗಡೆಯಾದರೆ ಸಾಕಲ್ಲ. ಅವಳ ಮನಸ್ಸಿಗೆ ಒಲ್ಲವಾಗಿದ್ದರೆ ನಾನೇನು ಖಟ್ಲೆ ಹಾಕುವಷ್ಟು ದುರ್ಬುದ್ಧಿಯವನಲ್ಲ. ಪರಸ್ಪರರ ಅನುಮತಿಯಿಂದ ಬಿಡುಗಡೆ ಆಗುವಂತಿದ್ದರೆ ಕಾಯಿದೆಯೂ ಅನುಕೂಲವಾಗುತ್ತದೆ.’ ತಾನೇನು ಮಾತಾಡುತ್ತಿರುವೆನೊ ಎಂಬುದು ವಿಶೇಷ ಲಕ್ಷ್ಯವಿಲ್ಲದೆ ಏನೋ ಮಾತಾಡುತ್ತಿರುವಂತೆ ತನಗೇ ಎನಿಸುತ್ತಿತ್ತು ರಾಮನಾಥನಿಗೆ. ಇಷ್ಟು ಹೇಳಿ ಮತ್ತೆ ಓಲೆಯನ್ನು ಕಣ್ಣಮುಂದೆ ಹಿಡಿದುಕೊಂಡು ಸ್ವಸ್ಥವಾಗಿ ನಿಂತುಬಿಟ್ಟನು. ಆ ಓಲೆಯ ನೋಟವೆ ಅವನಿಗೊಂದು ವಿಷದರ್ಶನವಾಯಿತು. ಇದ್ದಕಿದ್ದಂತೆ ಅದನ್ನು ಮುಟ್ಟಿಗೆ ಮಾಡಿ ಮೂಲೆಗೆಸೆದುಬಿಟ್ಟ. ತನ್ನಕಡೆಗೆ ಛಬಿ ಗಾಬರಿಯಿಂದ ನೋಡುತ್ತಿರುವುದರ ಅರಿವಾಗಿ ಹುಸಿ-ನಗೆ ನಕ್ಕು ‘ ಮೋಹನ ಇನ್ನೂ ಮಲಗಿದ್ದಾನೆಯೇ ವಿದ್ಯಾ ? ಅಲ್ಲಲ್ಲ ಕ್ಷಮಿಸು, ಛಬಿ ? ’ ಛಬಿ ಸುಮ್ಮನೆ ಇದ್ದಳು.

‘ ಮೋಹನ ಎದ್ದಿದ್ದರ ಕರೆದುಕೊಂಡು ಬಾ ಛಬಿ........ಇನ್ನುಮೇಲೆ ನನಗೆ ಮೋಹನ, ಮೋಹನನಿಗೆ ನಾನು. ’

ಛಬಿ ಕಿಟಕಿಗೆ ಎರಡೂ ಮೊಳಕೈ ಆಧಾರದ ಮೇಲೆ ಮುಖವಿಟ್ಟುಕೊಂಡು ಕಿರಿಬೆರಳಿನ ಉಗುರು ಕಡಿಯುತ್ತ ಸುಮ್ಮನೆ ನಿಂತುಕೊಂಡಳು. ಅವಳಿಗೆಸಿಸಿದ ದುಃಖವನ್ನು ಅವಳ ಕಣ್ಣಿಂದಲೆ ತಿಳಿದುಕೊಂಡನು.

‘ ಛಬಿ ಇವೊತ್ತು ಕಾಲೇಜಿಗೆ ಹೋಗಿ ಬರೋಣವೆ? ’

‘ ಅಸೂದೆ ಹೊ........’ ( ಇರಲಿ ಬಿಡ್ರಿ ) ಅದೇನಷ್ಟು ಮಹತ್ವದ್ದು ಎಂಬ ಅಭಿಪ್ರಾಯ ಛಬಿಯದಾಗಿತ್ತು. ಆದ ಪರಿಸ್ಥಿತಿಯೇನು, ಅದರಲ್ಲಿ ತನ್ನ ಸಮಾಧಾನಕ್ಕಾಗಿ ರಾಮನಾಥ ಹೀಗೆಹೇಳುತ್ತಿದ್ದಾನೆಂಬುದನ್ನೂ ರಾಮನಾಥನ ಬಗ್ಗೆ ಹೆಚ್ಚು ಲಕ್ಷ್ಯ ಕೊಡುವುದು ತನ್ನ ಕರ್ತವ್ಯವೆಂದೂ ಛಬಿಯ ಸೂಕ್ಷ್ಮಮತಿಗೆ ಹೊಳೆಯದಿದ್ದೀತೆ?

‘ ಮೋಹನ ಇನ್ನೂ ಏಕೆ ಎದ್ದಿಲ್ಲ ಛಬಿ? ’

ಈ ಮೊದಲು ಹೇಳಿದ್ದು ರಾಮನಾಥನ ಲಕ್ಷ್ಯಕ್ಕೆ ಬಂದಿಲ್ಲವೆಂದು ಈಗ ಅದನ್ನು ಹೇಳಬೇಕೊ ಬೇಡವೊ ಅನುಮಾನಿಸಿದಳು.

' ಯಾಕೆ ಛಬಿ? '

' ಕಾಹಿ ನಾಹಿ. ಝೋಪಲಾ ಆಹೆ ಝೋಪುದ್ಯಾ. ಕಾಲ ತ್ಯಾಲಾಹಿ ಝೋಪ ನಾಹಿ........ ' (ಏನೂ ಇಲ್ಲ. ಮಲಗಿದ್ದಾನೆ, ಮಲಗಲೊಲ್ಲನೇಕೆ. ನಿನ್ನೆ ಅವನಿಗೂ ನಿದ್ರೆಯಿಲ್ಲ.)

' ಛಬಿ, ಪರಿಸ್ಥಿತಿ ಇಷ್ಟೊಂದು ವಿಕೋಪಕ್ಕೆ ಹೋದೀತೆಂದು ನನಗೆನಿಸಿರಲಿಲ್ಲ........ನಾನು ಅವಳಿಗಾಗಿ ದುಃಖಿಸುವುದಿಲ್ಲ, ನಡೆದು ಹೋದ ದುರ್ಘಟನೆಗಾಗಿ ದುಃಖಿಸುತ್ತೇನೆ........ಛಬಿ ನನಗೆ ಮೊದಲು ತಿಳಿಯಲಿಲ್ಲ. ಇಷ್ಟೆಲ್ಲಾ ಕೊರಳಿಗೆ ಕಟ್ಟಿಕೊಂಡು ನನ್ನ ಮುದ್ದು ಮೋಹನನ ಗೋಳು ಕಟ್ಟಿಕೊಂಡಂತಾಯಿತು.... ಇನ್ನು ಮೋಹನನನ್ನು ಎಲ್ಲಿ ಬಿಡಲಿ? ಎಲ್ಲಿ ಇಡಲಿ? ಧಾರವಾಡಕ್ಕೆ ಹೋಗುವುದಕ್ಕೂ ನನಗೆ ಮುಖವಿಲ್ಲದಾಗಿದೆ ಛಬಿ. '

ಛಬಿಗೆ ಧಾರವಾಡದ ವೃತ್ತಾಂತವೇನೂ ಗೊತ್ತಿರದೆ ಬರಿ ಆಶ್ಚರ್ಯದಿಂದ ಕಣ್ಣರಳಿಸಿದಳು.

' ಹೌದು ಛಬಿ, ಮೋಹನನನ್ನು ಧಾರವಾಡದಿಂದ ಕರೆದುಕೊಂಡು ಬಂದದ್ದು ಅವರಿಗೆ ಮನಸ್ಸಿಗೆ ಬಂದಂತೆ ತೋರವುದಿಲ್ಲ. ಮೇಲಾಗಿ........ ಹೌದು ಅವರ ಮನಸ್ಸಿಗೆ ಬಂದಿಲ್ಲ. '

ರಾಮನಾಥ ಏನೋ ಹೇಳಹೋಗಿ ಹೇಳಬಾರದೆಂದೆಣಿಸಿ ಸುಮ್ಮನಿದ್ದನೆಂಬುದರ ಅರ್ಥವಾಯಿತು ಛಬಿಗೆ. ಅವಳೂ ಅದನ್ನು ವಿಶೇಷ ಕೆಣಕಲಿಕ್ಕೆ ಹೋಗಲಿಲ್ಲ. ರಾಮನಾಥ ಮತ್ತೆ ಮುಂದರಿಸಿದ:

' ಹೋಗಲಿ. ಸಂಸಾರದ ಸೂತ್ರಗಳು ಒಮ್ಮೆ ಸಂಪೂರ್ಣ ಕಡಿದು ಹೋಗಲಿ. ವಿದ್ಯಾ ಕೈ ಬಿಟ್ಟಮೇಲೆ ಮತ್ತೆ ಜಾನಕಿಯ ವಿರಹಿ, ವಿಧುರ ರಾಮನಾಥನಾಗಿಯೆ ಉಳಿಯುವೆ. ಆದದ್ದನ್ನೆಲ್ಲಾ ಕ್ಷಮಿಸು ಎಂದು ಜಾನಕಿಯಲ್ಲಿ ಮೊರೆಯಿಡುವೆ........ಛಬಿ, ಮಹಾತ್ಮರೂ ಸುಮಾರು ಇವೇ ವಯಸ್ಸಿನಲ್ಲಿ ಬ್ರಹ್ಮಚರ್ಯವ್ರತವನ್ನು ಪ್ರಾರಂಭಿಸಿದರು. ಕೈಕೊಂಡ ವ್ರತವನ್ನು ಬಹಿರಂಗವಾಗಿ ಪ್ರಕಟಸಲಿಕ್ಕೆ ಅವರಿಗೆ ಕೆಲಕಾಲ ಹಿಡಿಯಿತಂತೆ. ಬ್ರಹ್ಮಚರ್ಯೆಯಲ್ಲಿ ಹೆಂಡತಿಯ ಅನುಮತಿ ಸಿಕ್ಕಿದ್ದರೂ ಅವರಿಗೆ ಬಹಿರಂಗ ಘೋಷಣೆ ಮಾಡುವಷ್ಟು ಸ್ಥೈರ್ಯ ಬರಲಿಲ್ಲ........ಇನ್ನು ಈ ಭಾಷಾಂತರಕಾರನ ನೌಕರಿಯಾದರೂ ಏಕೆ ನನಗೆ? ಇದಕ್ಕೂ ಹೆಚ್ಚಿನ ಭಾಷಾಂತರಕಾರ

ನಾಗಬೇಕೆನ್ನುವೆ. ಗಾಂಧೀಜಿಯವರ ' Unseen power ' ಸಣ್ಣದಾದರೂ ಮಾರ್ಮಿಕವಾದ ಗ್ರಂಥ....ಅವರ ಆತ್ಮಚರಿತ್ರೆ ಕನ್ನಡಕ್ಕೆ ಭಾಷಾಂತರಿಸಲ್ಪಟ್ಟಿದೆ. ನಾನು ಅವರ ಅದೇ ಕೃತಿಯನ್ನು ನನ್ನ ಜೀವನಕೃತಿಯಲ್ಲಿ ಭಾಷಾಂತರಿಸಲು ಆಶಿಸುತ್ತೇನೆ...ಆ ಧೈರ್ಯ, ಆ ಸ್ಥೈರ್ಯ, ಆ ಸ್ಥಿತಪ್ರಜ್ಞೆಯನ್ನು ದಯಪಾಲಿಸು ದೇವರೆ! ಎಂದು ದೇವರಲ್ಲಿ ಮೊರೆಯಿಟ್ಟು ಪ್ರಾರ್ಥಿಸುತ್ತೇನೆ.........'

ಛಬೆ ರಾಮನಾಥನ ಬೆನ್ನಮೇಲೆ ಕೈಯಿಟ್ಟಿದ್ದಳು. ರಾಮನಾಥ ಆವೇಶವನ್ನು ತಡೆಯಲಾರದೆ ಕುರ್ಚಿಯ ಮೇಲೆ ಕುಳಿತುಕೊಂಡ. ಹೊರಗೆ ವೈನಿ ಛಬೆಯನ್ನು ಕೂಗಿದರು. ಮೋಹನ ಅಳುತ್ತಿದ್ದ. ಛಬೆಯೊಂದಿಗೆ ರಾಮನಾಥನೂ ಹೋದ. ಮೋಹನನ ಬಳಿ ಕುಳಿತುಕೊಂಡ. ಮೋಹನ ತ್ರಾಣವಿಲ್ಲದೆ ಅಳುತ್ತಿದ್ದ. ರಾಮನಾಥನಿಗೆ ಗಾಬರಿಯಾಯಿತು. ಮೋಹನನ ಕೈ ಹಿಡಿದ. ಅಂಗಿ ಮೇಲಕ್ಕೆತ್ತಿ ಎದೆಯ ಮೇಲೆ ಕೈಯಿಟ್ಟು ನೋಡಿದ. ಮೋಹನನಿಗೆ ಜ್ವರ! ಛಬೆ ಥರ್ಮಾಮಿಟರ ತಂದು ಕೊಟ್ಟಳು. ೧೦೨ ಡಿಗ್ರಿ ಜ್ವರ!

' ನಾಲಗೆ ತೆಗಿ ಮೋನೀ ' ಎಂದ.

' ಮೋಹನ ನಾಲಗೆ ತೆರೆದ. ಛಬೆ ' ಎಷ್ಟು ಶ್ಯಾಣ್ಯಾ ನಮ್ಮ ಮೋಹನ್!' ಎಂದಳು.

ರಾಮನಾಥ ಝುರ್ರನೆ ಇಳಿದು ಬಿಟ್ಟ. ಮುಖ ಗಾಬರಿಯಿಂದ ಹುಚ್ಚಿಟ್ಟು ಹೋಗಿತ್ತು. ಮೋಹನನಿಗಿಂತಲೂ ಮೋಹನನಾಗಿ ಛಬೆಯ ಮುಖ ನೋಡಿದ.

' ಅಸ ಕಾಯ ಘಾಬರತಾ? ' ಛಬೆ ಇಷ್ಟೆನ್ನುವುದರೊಳಗೇ ರಾಮನಾಥನ ಕಣ್ಣಿಂದ ಒಂದು ಹನಿ ತಟ್ಟನೆ ಕೆಳಗೆ ಬಿದ್ದಿತ್ತು. ಸಮೀಪದಲ್ಲೇ ಇರುವ ಡಾಕ್ಟರರ ಬಳಿಗೆ ಕರೆದುಕೊಂಡು ಹೋಗಿ ಬಂದರು. ಛಬೆಯವರ family doctor (ಗೃಹವೈದ್ಯರು) ಅವರು.

' ಆಪಲ್ಯಾ ಒಡಿಲಾನಿ duty resume ಕೇಲೀ ಕಾಯ? '

' ನಾಹಿ ಡಾಕ್ಟರ. '

' ಕಾ ಬರ? '

'They have written they have taken up another hand.'

' ಮ್ಹಣಜೆ ಆತಾ ತೇ unemployed ಆಹೇತ್? '

ರಾಮನಾಥ ಗಾಬರಿಗೊಂಡು ಛಬಿಯ ಮುಖ ನೋಡಿದ.

' ಹೋ, ' ಎಂದುತ್ತರ ಕೊಟ್ಟಳು ಛಬಿ. ಇನ್ನಷ್ಟು ದಿಗಿಲುಗೊಂಡ ರಾಮನಾಥ. ಛಬಿ ತನ್ನ ಮುಂದೆ ಒಂದೂ ಹೇಳಿಲ್ಲವಲ್ಲ ಎಂದು ವಿಸ್ಮಯ ಅವನಿಗೆ. ಅವನ ಮುಖದಿಂದಲೆ ಅವನಿಗೇನೆನಿಸಿರಬೇಕೆಂಬುದನ್ನು ಛಬಿ ತಿಳಿದುಕೊಂಡಳು. ಕ್ಷಮಾಯಾಚನೆಯ ದೃಷ್ಟಿಯಿಂದ ತಾನು ತಪ್ಪಿತಸ್ಥಳೆಂಬ ದೃಷ್ಟಿಯಿಂದ ರಾಮನಾಥನನ್ನು ನೋಡಿದಳು. ಔಷಧ ತೆಗೆದುಕೊಂಡು ಹೊರಗೆ ಬಂದರು.

' ಛಬಿ ನನ್ನಿಂದ ನಿನ್ನ ಕಷ್ಟಗಳನ್ನೆಲ್ಲಾ ಮುಚ್ಚಿಡುತ್ತೀಯಲ್ಲ. ನಿನ್ನ ದುಃಖಕ್ಕೆ ನಾನು ಸಂಬಂಧಿಸಿಲ್ಲ, ನನ್ನ ದುಃಖಕ್ಕೆ ಮಾತ್ರ ನೀನು ಸಂಬಂಧಿಸಿದ್ದೀಯಾ ಛಬಿ? '

ಛಬಿ ಮರಾಠಿಯಲ್ಲೇ ಹೀಗೆ ಹೇಳಿದಳು:

' ನಿಮ್ಮ ಮನಃಸ್ಥಿತಿಯನ್ನರಿತುಕೊಂಡು ಖುಲಾಸಾಗಿ ಮಾತಾಡಲಿಕ್ಕೆ ಅವಕಾಶ ದೊರಕದೆ ಸುಮ್ಮನಿದ್ದೆ. ಆದರೂ indirect ಆಗಿ ನಿಮಗೆ ಹೇಳಿದ್ದೆ. ನಾನು ಟೈಪಿಂಗ ಕಲಿಯುತ್ತಿರುವುದು, ಕಾಲೇಜಿಗೆ ಸದ್ಯಕ್ಕೆ ರಜಾ ಕೊಟ್ಟುದು...'

' ಛಬಿ, ಕಾಲೇಜಿಗೆ ರಜಾ ಕೊಡಕೂಡದು. ಇಂದು ನಾವು ಕಾಲೇಜಿಗೆ ಹೋಗಲೇಬೇಕು. ಕಾಕಾಸಾಹೇಬರಿಗೂ ನಾನು ಹೇಳಿ ಒತ್ತಾಯ ಪಡಿಸುತ್ತೇನೆ, ನೀನು ಕಾಲೇಜ ಮುಂದರಿಸಲೇಬೇಕು ಅಂತ. '

ಛಬಿ ಸುಮ್ಮನಿದ್ದಳು.

ಮನೆಗೆ ಬಂದು ಮೋಹನನನ್ನು ಮಂಚದ ಮೇಲೆ ಮಲಗಿಸಿದರು. ಕಾಫಿ, ಮೋಸಂಬಿ ರಸದ ಹೊರತಾಗಿ ಇನ್ನೇನು ಕೊಡಬೇಡವೆಂದಿದ್ದರು ಡಾಕ್ಟರರು.

ವೇಳೆಗೆ ಸರಿಯಾಗಿ ಔಷಧ ಕಾಫಿ ಹಣ್ಣಿನ ರಸ ಕೊಡುವುದೆಲ್ಲಾ ಛಬಿಯದೇ ಆಗಿತ್ತು. ಅಂದಿನಿಂದ ರಾಮನಾಥನೂ ತಮ್ಮಲ್ಲೇ ಊಟ ಮಾಡಬೇಕೆಂದು ಕಾಕಾ, ವೈನಿಯವರು ಒತ್ತಾಯಪಡಿಸಿ ಹೇಳಿದರು.

' ನೀವು ನಮ್ಮ family member ಎಂದ ಮೇಲೆ ನೀವು ಭಿಡೆ ಮಾಡಿಕೊಳ್ಳಬಾರದು. ' ಕಾಕಾಸಾಹೇಬ ಎಂದರು.

' ನೀವು ತಂದು ಕೊಟ್ಟ ಕ್ಯಾಬೇಜ ತೆಗೆದುಕೊಳ್ಳಲಿಕ್ಕೆ ನಾವೂ ಭಿಡೆ ಮಾಡಿಲ್ಲ ನೋಡ್ರಿ.........ನಿಮಗಷ್ಟು ಸಂಕೋಚವಾದರೆ ಏನಾದರೂ ತಂದು

ಹಾಕುವಿರಂತೆ.' ವೈನಿ ಎಂದರು. ವೈನಿ ನುಡಿದ ಮಾತು ಛಬೆಗೆ ಸಮಂಜಸ ವೆನಿಸಿದರೂ ಆಡಬಾರದಾಗಿತ್ತು ಎಂಬ ಬಗೆಯನ್ನು ಸ್ವಲ್ಪ ಮೋರೆ ಕಿವುಚಿ ತೋರಿಸಿದಳು

ಮಧ್ಯಾಹ್ನದ ಊಟಕ್ಕೆ ತಾಟು-ಮಣೆ ಹಾಕಿಟ್ಟು ಎಲ್ಲರೂ ರಾಮನಾಥನ ದಾರಿಕಾಯುತ್ತಿದ್ದರು. ಮಧ್ಯಾಹ್ನ ಒಂದು ಹೊಡೆದು ಹೋಗಿದ್ದರೂ ರಾಮ ನಾಥ ಇನ್ನೂ ಮನೆಗೆ ಬಂದಿರಲಿಲ್ಲ.

ನೆನಸುವಷ್ಟರಲ್ಲೇ ರಾಮನಾಥ ಬಂದ.

' ಹೋ ಹೊ! ಯಾ–ಯಾ-! ತುಮಚೀಚ ಆಠವಣ ಕಾಢ್ಲೀ ಹೋತಿ.' ಕಾಕಾಸಾಹೇಬ ಎಂದರು.

' ಶಂಭರ ವರ್ಷ ಆಯುಷ್ಯ ತುಮ್ಹಾಲಾ.' ವೈನಿ ಎಂದರು.

ರಾಮನಾಥ ಕಾಲೇಜ ಟರ್ಮ ಫಿ ಕೊಟ್ಟ, ಪಾವತಿ ತೆಗೆದು ಛಬೆಯ ಕೈಗೆ ಕೊಟ್ಟ. ಉತ್ಕಟ ಕೃತಜ್ಞತೆ, ಉತ್ಕಟ ಅತಃಕರಣ, ಸುಮ್ಮನೆ ಗೋಳು ಹಾಕಿದೆನಲ್ಲ ಎಂಬ ಉತ್ಕಟ ಸಂಕೋಚದಿಂದ ಪಾವತಿ ಕೈಯೊಳಗೆ ಹಿಡಿದು ಕೊಂಡು ಕಾಕಾ, ವೈನಿಗೆ ತೋರಿಸುತ್ತ ' ಹೇ ಪಹಾ. ಪುನಃ ಕಾಲೇಜ ಕರೀಯರಚ ಲಾಯಿನ್ ಕ್ಲಿಯರ........ಕಿತೀದಾ ಮಿ ನಕೊ ಮ್ಹಣೂನ ಸಾಂಗಿತ್ಲ....' ವೈನಿ ಹಿಗ್ಗಿನಿಂದ ನಕ್ಕರು, ಛಬೆಯ ಮಾತಿಗೆ.

' ಆತಾ ಕಾಯ ಕರಾಯಚ. ತ್ಯಾಂಚಾಚ ನಾವಾನ ತುಝೀ ಡಿಗ್ರಿ ಲಿಹೊನ ಘೆ ಝಾಲ! '

' ಅಸ್ಲೇ 'humanitarian' ಲೋಕ ಹಲ್ಲೀ ಕುಠೆ ದೃಷ್ಟಿಸ್ ಪಡತಾತ?' ಕಾಕಾಸಾಹೇಬರೂ ಬಹಳ ಕೃತಜ್ಞತೆ ತೋರಿಸಿದರು.

' ಮುಂದೆ ದೊಡ್ಡ ನೌಕರಿ ಮಾಡಿ ಅವರ ಉಪಕಾರ ತೀರಿಸುವಿಯಂತೆ' ಎಂದು ವೈನಿ ಸೂಚಿಸಿದರು. ಛಬೆಗೆ ಆ ವಾಕ್ಯ ಬಹಳ ಹೃದಯಸ್ಪರ್ಶಿಯಾಗಿ ಪರಿಣಮಿಸಿತು.

* * * *

' ನಿಮ್ಮ ದಾಂಪತ್ಯಜೀವನದ ಬಗೆ ನನ್ನ ಮೇಲೆ ಬಹಳ ಪರಿಣಾಮ ವನ್ನುಂಟುಮಾಡಿದೆಯೆಂದು ನಾನು ನಿಮ್ಮ ಬಳಿಗೆ ಬಂದಿದ್ದೇನೆ. ನನ್ನ

ಸಂಪೂರ್ಣ ವೃತ್ತಾಂತವನ್ನು ನಿಮ್ಮ ಮುಂದೆ ಎದೆ ಬಿಚ್ಚಿ, ಮುಕ್ತ ಮನಸ್ಸಿನಿಂದ ಇಟ್ಟಿದ್ದೇನೆ........'

ವಿದ್ಯಾ ರಾವ್ ದಂಪತಿಗಳ ಮುಂದೆ ತನ್ನ ಮದುವೆಯ ಇತಿಹಾಸವನ್ನೆಲ್ಲಾ ನಿರೂಪಿಸಿದಳು.

'ಎರಡನೆಯ ಸಂಬಂಧವೆಂದು ರಾಮನಾಥ ನಿಮ್ಮ ಮುಂದೆ ಹೇಳಿರಲಿಲ್ಲವೆ?'

'ಇಲ್ಲವೇ ಇಲ್ಲ.'

'ಇದು ಅವರ ತಪ್ಪು' ರಾವ್ ಮಾತು ಮಾತಿಗೆ ನ್ಯಾಯಾನ್ಯಾಯಗಳ ತೀರ್ಪು ಕೊಡುತ್ತ ನಡೆದಿದ್ದರು.

'ಆ ದಿನ ನಿಮ್ಮ ಜೊತೆಗೇ ಬಂದರಲ್ಲವೆ ರಾಜನ್ ಅವರು?'

'ಕ್ಷಮಿಸಿರಿ. ಅದನ್ನೂ ಹೇಳಿಬಿಡುವೆ. ರಾಜನ್ ಒಳ್ಳೆ ಮನುಷ್ಯನೆಂದು ನಾನು ಬಹಳ ವಿಶ್ವಾಸವಿಟ್ಟೆ. ನನ್ನ ರಸಿಕತನದ ಹಂಬಲಗಳನ್ನು ಸಾಧಿಸಬೇಕೆಂದು ನನ್ನ ಹವ್ಯಾಸ. ಫ್ಯಾಮಿಲಿ ಜನರೂ ಸಿನೇಮಾ ಪ್ರವೇಶಮಾಡಬೇಕು, ರಂಗಭೂಮಿಯ ಸೇವೆಮಾಡಬೇಕೆಂದು ನನ್ನ ಸದಭಿಪ್ರಾಯ. ನನ್ನ ಆಶೆ ಆಕಾಂಕ್ಷೆಗಳು ರಾಮನಾಥನಿಂದ ಪೂರೈಸಲ್ಪಡಲಿಲ್ಲ. ರಾಮನಾಥನಿಗೆ ಸ್ತ್ರೀಯರು ಮುನ್ನಡೆಯಬಾರದೆಂಬ ಸಣ್ಣ ದೃಷ್ಟಿ. ನನ್ನ ಆಶೆ ಆಕಾಂಕ್ಷೆಗಳನ್ನು ಪೂರೈಸಿಕೊಳ್ಳುವುದಕ್ಕಾಗಿ ಮನೂ ಎಂಬ ಫ್ರೆಂಡ್ ಒಳ್ಳೇ ಮನಸ್ಸಿನಿಂದ ಕೈ ನೀಡಿದರು. ಆದರೆ ಸುಮ್ಮಸುಮ್ಮನೆ ನನ್ನ ಸಲುಗೆಯ ದುರುಪಯೋಗ ಮಾಡಿಕೊಂಡು ಇಲ್ಲದ ತಮಾಷೆ ಮಾಡಬಂದರು. 'Shut up' (ಮುಚ್ಚು ಬಾಯಿ!) ಎಂದೆ. ಆ ದಿನ ರಾಜನ್ ನನ್ನಲ್ಲಿ ಒಳ್ಳೇ ಮೆಚ್ಚುಗೆ ತೋರಿದರು. ಫಿಲ್ಮ ಕಂಪನಿಗೆ ಪರಿಚಯ ಮಾಡಿಕೊಡುತ್ತೇನೆಂದರು. ಅವರು ಸಜ್ಜನರೆಂದು ನಾನೇಕೆ ನಂಬಬಾರದು? ನಂಬಿದೆ. ನನ್ನ ನಂಬಿಗೆಯ ಇಡುಗಂಟನ್ನೆ ಮುಳುಗಿಸಿಬಿಟ್ಟರು.... ಇಂತಹ ಉದಾಹರಣೆಗಳು ನನ್ನ ಜೀವನದಲ್ಲಿ ಹೀಗೇ ಬಂದಿವೆ. ಸಣ್ಣವಳಿದ್ದಾಗಲೆ ಕಾರ್ಕಳದ ಕಾಮತರೆಂಬ ಸಾಹುಕಾರರ, ನಮ್ಮ ತಂದೆಯ ಸಹವ್ಯಾಪಾರಿಗಳ ಕಾಕದೃಷ್ಟಿಯಿಂದ ಪಾರಾಗಿ ಮಂಗಳೂರಿನಲ್ಲಿ ನೆಲಸಿ ನನ್ನ ವಿದ್ಯಾಭ್ಯಾಸ ಸಾಗಿಸಿಕೊಂಡು ಪುಣೆಗೆ ಹೋಗಿ ಇಲ್ಲಿಯವರೆಗೆ ಬದುಕು ಮಾಡಿರುವ ತನಕ ನನಗೆ ಜೀವನದಲ್ಲಿ ಇಂತಹವೆ ದುಷ್ಟ

ಗ್ರಹಗಳು ಗಂಟುಬಿದ್ದು ಜೀವನವನ್ನು ಒದ್ದಾಡಿಸಿಬಿಟ್ಟವೆ. ಪುರುಷರೆಂದರೆ ವಿಷಸರ್ಪಗಳು ಎನ್ನುವ ಮಟ್ಟಿಗೆ ನನ್ನ ಮನಸ್ಸು ಜಿಗುಪ್ಸೆಗೊಂಡಿದೆ.' ವಿದ್ಯಾ ತನ್ನ ಸಮರ್ಥನೆ ಕೊಟ್ಟಳು.

'ವಿದ್ಯಾವತಿ, ಮೊದಲು ನಿಮ್ಮ ಮನೋವೃತ್ತಿಯನ್ನು ನೀವು ತಿದ್ದಿಕೊಳ್ಳಬೇಕು. ರಾಜನ್ ಅವರೊಂದಿಗೆ ನೀವು ಒಮ್ಮೆಲೆ ತೋರಿದ ಅತಿ ಸಲುಗೆ, ಕೊಟ್ಟ ಸ್ವಾತಂತ್ರ್ಯಗಳು ನಮಗೇ ಆಕ್ಷೇಪಾರ್ಹವಾಗಿ ಕಂಡುವು.'

ರಾವ್ ಅವರ ಸ್ಪಷ್ಟೋಕ್ತಿ ವಿದ್ಯಾವತಿಗೆ ರುಚಿಸಿದಂತೆ ತೋರಲಿಲ್ಲ. ಆದರೆ ಅವರಿಗೆ ವಿದ್ಯಾವತಿಯನ್ನು ಸಂತೋಷ ಪಡಿಸಬೇಕೆಂಬ ಉದ್ದೇಶವಿರಲಿಲ್ಲ. ತಮ್ಮ ಮಾತು ಸತ್ಯ, ಧೋರಣೆ ನ್ಯಾಯ, ಕೃತಿ ಪ್ರಾಮಾಣಿಕ ಎಂಬುದಿಷ್ಟೆ ಅವರ ಉದ್ದೇಶವಾಗಿತ್ತು.

'ನಾನು 'ಡೈವೋರ್ಸ' ಮಾಡಬೇಕೆನ್ನುತ್ತೇನೆ.'

'ಅದು ನಿಮ್ಮ ಇಷ್ಟ!....ಆದರೆ ಸುಲಭವಾದ ಮಾತಲ್ಲ ಅದು.... ಕೋರ್ಟಿನಲ್ಲಿ ನೀವು ಸಿದ್ಧಮಾಡಬೇಕಾಗುತ್ತದೆ ಸಬಲಕಾರಣಗಳಿಂದ.'

'Mutual consent ಮೇಲೆ divorce ಕೊಡಲಿಕ್ಕೆ ಬರುವುದಿಲ್ಲವೆ?'

'ಅದು ಹಿಂದೂ ಸಮಾಜದಲ್ಲಿ ಸಾಧ್ಯವಿಲ್ಲ. 'Incompatibility of temperaments (ಮನೋವೃತ್ತಿಗಳ ವೈಷಮ್ಯ) ಎಂಬುದು ಕಾಯಿದೆ ಬದ್ಧವಾಗುವುದಿಲ್ಲ' ರಾವ್ ಎಂದರು.

'ನಾನು ಸಿದ್ಧಮಾಡಿಕೊಡಬಹುದು.'

'ಅತ್ಯಾಚಾರ, ಕ್ರೌರ್ಯ, ಮೂರು ವರುಷಗಳ ವರೆಗೆ ತ್ಯಾಗ, ಹುಚ್ಚು ಈ ಕಾರಣಗಳ ಹೊರತಾಗಿ ಇನ್ನಾವುದೇ ರೀತಿ ನೀವು divorce ಕೊಡಲಾರಿರಿ' ರಾವ್ ಕಾಯಿದೆ ಹಿಡಿದು ಮಾತಾಡಿದರು.

'ನನ್ನನ್ನು ಅನ್ಯಾಯದಿಂದ ನಡಸಿಕೊಂಡಿದ್ದಾರೆಂದು ಸಿದ್ಧಮಾಡುವೆ. ಮತ್ತೊಬ್ಬಳೊಡನೆ ಅವ್ಯಾಪಾರ ನಡಸಿದ್ದಾರೆಂದು ಸಿದ್ಧಮಾಡುವೆ. ನನಗೆ ಚಿತ್ರಹಿಂಸೆ ಕೊಟ್ಟಿದ್ದಾರೆಂದು ಸಾಕ್ಷಿಪೂರ್ವಕವಾಗಿ ಸಿದ್ಧಮಾಡುವೆ.'

'ಸರಿ. ಮೊದಲು ನೀವು ಕೋರ್ಟಿಗೆ ಅರ್ಜಿ ಮಾಡಬೇಕು. ಆಮೇಲೆ ಆರೋಪ ಸಿದ್ಧಮಾಡಬೇಕು. ಆಮೇಲೆ ಡಿಕ್ರಿಪಡೆಯಬೇಕು. ಇದೆಲ್ಲಾ ಸಾಧ್ಯವೆಂದು ತೋರುವುದಿಲ್ಲ. ಸಾಧ್ಯವೆಂದರೂ ಸರಿಯೆಂದು ತೋರುವುದಿಲ್ಲ ನಾಲ್ಕು ಜನರೊಳಗೆ.' ರಾವ್ ಉತ್ತರ ಕೊಟ್ಟರು.

ಸವಿತಾ ಕಾಫಿ ಟ್ರೇ ತಂದಿಟ್ಟರು.

‘ ನಾನೊಲ್ಲೆ. ನಾನು ಇದೇ ತೆಗೆದುಕೊಂಡಿದ್ದೇನೆ’ ವಿದ್ಯಾ ಎಂದಳು.

‘ ಸ್ವಲ್ಪ ತೆಗೆದುಕೊಳ್ಳಿ. ಇಲ್ಲವಾದರೆ ಹಾಲು ತೆಗೆದುಕೊಳ್ಳಿ.’

‘ ಬೇಡ ಬೇಡ. ಸ್ವಲ್ಪ ಕಾಫಿಯನ್ನೇ ತೆಗೆದುಕೊಳ್ಳುವೆ. ’

‘ ವಿದ್ಯಾವತಿ, ಆದರ್ಶ ದಾಂಪತ್ಯವು ಪರಸ್ಪರರ ತಿಳಿವಳಿಕೆಯ ಮೇಲೆ ಮೊಳೆಯುತ್ತದೆ. ಪರಸ್ಪರರ ತ್ಯಾಗದಿಂದ ಬೆಳೆಯುತ್ತದೆ. ಪರಿಸ್ಥಿತಿಗೆ ತಕ್ಕಂತೆ ಪರಿವರ್ತನ ಮಾಡಿಕೊಳ್ಳುವುದರಿಂದ ಹೆಚ್ಚೆಚ್ಚು ಬೆಳೆಯುತ್ತದೆ. ವಿವಾಹ ವಿಚ್ಛೇದದಿಂದ ದಾಂಪತ್ಯಸುಖ ಸಿಕ್ಕುವುದಿಲ್ಲ. ಸವಕಳಿಯಾದ ನಾಣ್ಯವು ಎಲ್ಲಿಯೂ ಚಲಾವಣೆ ಹೊಂದುವುದಿಲ್ಲ ನೋಡಿ. ’

ವಿದ್ಯಾ ಕಾಫಿ ಗುಟುಕರಿಸಿದವಳೆ ‘ ಬರುತ್ತೇನೆ. ನಮಸ್ಕಾರ ’ ಎಂದಳು.

‘ ನಮಸ್ಕಾರ ’ ಎಂದರು ರಾವ್ ದಂಪತಿಗಳು.

• • • •

ಪುಣೆಗೆ ಮೇಲು ಮುಟ್ಟಬೇಕಾದರೆ ರಾತ್ರಿ ಒಂಬತ್ತೂವರೆಯಾಗಿತ್ತು. ಅವಸರದಿಂದ ಹೊರಗೆ ಬಂದವಳೆ ವಿದ್ಯಾ ‘ ಸ್ವಾರಗೇಟ ’ ಬಸ್ಸು ಹತ್ತಿದಳು. S. P. ಕಾಲೇಜ ಬಳಿ ಇಳಿದು ಮನೂನ ಮನೆಗೆ ಬಂದಾಗ ಇನ್ನೂ ಹತ್ತು ಹೊಡೆದಿರಲಿಲ್ಲ. ವಿದ್ಯಾ ಮನೋಹರನಿಗೆ ಕೇಳಿದ ಮೊದಲ ಪ್ರಶ್ನೆ:

‘ ಮನೂ, ಕೋಪಿಸಿಕೊಂಡೆಯಾ ನನ್ನ ಮೇಲೆ ? ’

ವಿದ್ಯಾವತಿಯ ಮುಖದ ಮೇಲೆ ವಿಹ್ವಲತೆಯು ತಾಂಡವವಾಡುತ್ತಿತ್ತು.

‘ ಇದೇನು ವಿದ್ಯಾ ? ಯಾವಾಗ ಬಂದೆ ? ’ ಒಮ್ಮಿಂದೊಮ್ಮೆಲೆ ವಿದ್ಯಾ ಪುಣೆಗೆ ಬಂದುದನ್ನು ನೋಡಿ ಮನೂ ಆಶ್ಚರ್ಯಚಕಿತನಾದ.

‘ ಮನೂ, ನನಗೊಬ್ಬ ಒಳ್ಳೇ ಲಾಯರ ಬೇಕಾಗಿದ್ದಾರೆ. ’

‘ ಇದೇನು ವಿದ್ಯಾ ಕುದುರೆಯೇರಿ ಬಂದವರಂತೆ ಮಾಡುತ್ತಿದ್ದೀಯಲ್ಲ? ಊಟವಾಗಿದೆಯೇ ? ’

‘ ನನಗೆ ಹಸಿವೆಯಿಲ್ಲ ಮನೂ—’

‘ ನಮ್ಮ ಮನೆಯ ಊಟಕ್ಕೆ ಹಸಿವೆಯೇನೂ ಬೇಕಾಗುವುದಿಲ್ಲ. ’

‘ಆಂ ?’

‘ನಮ್ಮ ಮುದಿಕೆ, ಮಾಮಿಯ ಅಡಿಗೆ ಅಷ್ಟು ಹಗುರು ಇರುತ್ತದೆ. ಬರೇ ಸ್ವಲ್ಪ ಮಜ್ಜಿಗೆ ಅನ್ನ ತೆಗೆದುಕೋ. ಆಮೇಲೆ ಎಲ್ಲಾ ವಿಚಾರಿಸೋಣ. ನಿನ್ನ ಮುಖದ ಮೇಲಿಂದ ಏನೋ ಗಡಿಬಿಡಿ ಕಂಡುಬರುತ್ತಿದೆ.’

ಊಟ ಮುಗಿಸಿಕೊಂಡು ಹೊರಗೆ ಬಂದರು. ಬದಿಯ ಅಂಗಡಿಯೊಳಗೆ ಎರಡು ಮಸಾಲೆ ಪಟ್ಟೆಗಳನ್ನು ತಂದ ಮನೂ. ಒಂದನ್ನು ವಿದ್ಯಾವತಿಗೆ ಕೊಟ್ಟ. ಮತ್ತೊಂದನ್ನು ತಾನು ತೆಗೆದುಕೊಂಡು, ಅದರ ಮೇಲೆ ‘ನೇವಿ ಕಟ್’ ಹೊತ್ತಿಸಿದ.

‘ನಿನಗೆ ಅಂದು ಅಪಮಾನವಾಯಿತೆ ಮನೂ ?’

‘ಆಗಲೆ ನೀನು ನಮ್ಮ ಮನೆಗೆ ಬಂದಾಗ ನಾನು ಮಾತಾಡಿಸದೆ ಬಾಗಿಲು ಬಂದುಮಾಡಿಬಿಟ್ಟದ್ದರೆ?’

‘ಆದರೆ ಮನೂ ಆ ದಿನ ನೀನು ಅಸಹ್ಯವೆನ್ನುವ ಮಟ್ಟಿಗೆ ಹುಡುಗಾಟ ಮಾಡುವುದಕ್ಕೆ ಬಂದೆ.’

‘ಹುಡುಗಾಟಕ್ಕೆ ಅವಕಾಶ ಕೊಟ್ಟವಳು ನೀನು.’

‘ನನಗೆ ಸಜ್ಜನಿಕೆಯನ್ನು ಮೀರಿಹೋಗುವ ಹುಡುಗಾಟ ಸೇರುವುದಿಲ್ಲ.’

‘ನಿನ್ನ ಸಜ್ಜನಿಕೆಯ ಸೀಮಾರೇಖೆಯನ್ನು ನೀನು ಮೊದಲೇ ವ್ಯಾಖ್ಯಾಯಿಸಬೇಕಿತ್ತು. ಆಮಿಷದ ವಾಸನೆಯಷ್ಟೆ ಬೇಕು ಆಮಿಷ ಬೇಡ ಎಂದರೆ ?’

‘ಮನೂ ನನಗೊಬ್ಬ ಲಾಯರ ಬೇಕು.’ ವಿದ್ಯಾ ವಿಷಯಾಂತರಿಸಿ ತನ್ನ ವಿಷಯಕ್ಕೆ ಬಂದಳು.

‘ಈಗ ಹೇಗೆ ಸಾಧ್ಯ ವಿದ್ಯಾ ? ನಾಳೆಗೆ ನೋಡೋಣಂತೆ.’

‘Divorce ಕೊಡುವ ವಿಧಾನ ಕುರಿತು ವಿಚಾರಿಸಬೇಕಾಗಿದೆ.’

‘Divorce ? ಯಾರೊಡನೆ ?’

‘ಕೈ ಹಿಡಿದವರೊಡನೆ.’

‘ಆಂ ?’

ವಿದ್ಯಾ ನಡೆದ ಸಂಗತಿಯನ್ನೆಲ್ಲ ಸಾದ್ಯಂತವಾಗಿ ವಿವರಿಸಿದಳು.

ಮರುದಿನ ಎದ್ದಾಗ ಮನೂ-ವಿದ್ಯಾ ಮತ್ತೆ ಮೊದಲಿನ ಸಲುಗೆಯ ಸಮೀಪದ ಸಹಪಾಠಿಗಳಾಗೇ ಇದ್ದರು. ವಿದ್ಯಾ ಬೇಗನೆ ಎದ್ದು ಸ್ಟೋ ಹೊತ್ತಿಸಿ ಚಹ ಇಳಿಸಿಟ್ಟಳು. ಮನೂನ ಕೋಣೆಯೊಳಗೆ ಬಂದು ಅವನ ಮೈಮೇಲಿನ ಚಾದರ ಕಿತ್ತಿ ಒಗೆದು, ಕೈಯೊಳಗೆ ಟ್ರೇ ಹಿಡಿದುಕೊಂಡು— ' ಊಠ ಪ್ರಭಾತ ಝಾಲೀ ವನಮಾಲೀ ' ಎಂಮ ಗುಣುಗುಡಹತ್ತಿದಳು. ಮನೂ ಮುಗುಳ್ನಗೆ ನಗುತ್ತ ಎದ್ದನು.

' ವಿದ್ಯಾ ಇವೊತ್ತು ಹಸಿವೆ ಇದೆಯೊ ಇಲ್ಲವೊ ? '

' ಹೂಂ ? ಎದ್ದ ಕೂಡಲೆ ಹಸಿವೆಯೇನು ? '

' ಹಸಿವೆಯಾದಾಗ ಊಟ ಮಾಡುತ್ತೇನೆಂದು ನಿನ್ನಿಂದ ವಚನ ಬೇಕು.'

' ಹಸಿವೆಯಿಲ್ಲದೇನೆ ನಿನ್ನೆ ಊಟ ಮಾಡಲಿಲ್ಲವೆ ? '

' ವಿದ್ಯಾ ಹಸಿವೆಯಿದ್ದೂ ಊಟಮಾಡದವಳು ನೀನು. ಊಟದ ಮೇಲೆ ಊಟ ಮಾಡುವವ ನಾನು. '

' ಅದು ನಿಮ್ಮ ಮಾಮಿಯ ರುಚಿಯಾದ ಅಡಿಗೆಯ ಫಲ. '

' ನನ್ನ ಜೀರ್ಣಶಕ್ತಿಯ ಫಲ. '

' ಹೂಂ. ಮನೂ ಬೇಗ ಏಳು. ಇವೊತ್ತು ಎಲ್ಲಿದ್ದರೂ ವಕೀಲರ ವಿಷಯ ಮುಗಿಸಿಬಿಡಬೇಕು. '

' ವಿದ್ಯಾ, ವಕೀಲರ ಮಾತು ನಾನೇ ಹೇಳುತ್ತೇನೆ ಕೇಳು— 'ಡೈವ್ಹೋರ್ಸ' ಗಾಗಿ ನೀನು ಅರ್ಜಿ ಹಾಕಬೇಕಾದರೆ ಕೋರ್ಟಿನಲ್ಲಿ ಸಿದ್ಧ ಮಾಡುವಷ್ಟು ಸಿದ್ಧತೆ ನಿನ್ನಿಂದ ಬೇಕು. ಎಂದರೆ ಮಾತ್ರ ' ಕೋರ್ಟ-ಡಿಕ್ರಿ ' ಆಗುವುದು. ಆದರ್ಕಿಂತ ಸೋಡಚೀಟಿ ಕೊಟ್ಟಂತೆಯೆ ಎಂದು ತಿಳಿದು ಇದ್ದುಬಿಟ್ಟರಾಯಿತಲ್ಲ ? '

' ಮನೂ, ಆಮೇಲೆ ನಾನು ಸಂಸಾರಜೀವಿಯಾಗಿ ಬದುಕಲೆಬಾರದು ಎನ್ನುತ್ತೀಯೇನು ? '

' ಬ್ರಹ್ಮಚಾರಿಯಾಗಿ ನಾನೀಗ ಇಲ್ಲವೇನು ? '

ಮನೂನ ಮಾಮಿ, ಮುದುಕೆ ನಳದ ನೀರು ತುಂಬಿಕೊಂಡು ಬರುತ್ತಿರುವಾಗ ಮನೂನ ಮಾತು ಕೇಳಿದಳು—

'ನೋಡವ್ವಾ ಹ್ಯಾಂಗ ಮಾತಾಡತಾನ. ಕಡಿತನಕಾ ಇಂವಾಯೇನು ಹೀಂಗs ಗಣಪ್ಪನ್ಹಾಂಗ ಇರಬೇಕಂತಾನ? ಅಂತೂ ಮುದಿಕಿನ್ನsದುಡಿಸಬೇಕೂ ಅಂತಾನ.... ಬೇಕಾದಷ್ಟು ಜಾಗೀರದ, ತಂದಿತಾಯಿ ಇಲ್ಲದ ಹುಡುಗಾ ಅಂತ ನಾನೂ ಜ್ವಾಪಾನ ಮಾಡಿ ಬೆಳಸಿದೆ. ಇನ್ನ ಕಣ್ಣು ಮುಚ್ಚುದರಾಗ ಅಷ್ಟು ತಲೀಮ್ಯಾಲ ಅಕ್ಷೀಕಾಳ ಹಾಕಿಬಿಡಬೇಕಂತೀನಿ. ಎಲ್ಲೆಲ್ಲ್ಯೂ ಹೂಂ ಅನವಲ್ಲಾ.. ಅದೇನು ಮುಡ್ಡಮ್ಮನ್ನಮಾಡಿಕೋಬೇಕಂತಾನೊ ಏನು ಮಣ್ಣೊ. ಮುಡ್ಡಮ್ಮಸರ ಆಗಲಿ, ಒಡ್ಡಮ್ಮನರ ಆಗಲಿ, ಯಾರನಾರ ಲಗೂನ ಒಂದು ಗಂಟು ಹಾಕಿಬಿಡವಾ ನಮ್ಮವ್ವಾ. ತಂಗಿ, ತಂಗಿ ಅಂತ ನಿನ್ನ ಕೌತುಕ ಭಾಳ ಮಾಡತಿರತಾನ. ನೀನು ಒಂದೆಲ್ಲಾರ ಗಂಟುಹಾಕಿ ಬಿಡಬಾರದು. ನಿನ್ನಷ್ಟಕ್ಕ ನೀ ಬೇಕಾದಂಥಾ ಭೂಪನಂಥಾ ಗಂಡನ್ನ ಹುಡುಕಿಕೊಂಡಿ, ನಿಮ್ಮಣ್ಣಗ ಒಬ್ಬ ವೈನಿನ್ನ ತರವಲ್ಲಿ........'

'ನನಗಲ್ಲವಾ ವೈನಿ, ನನಗ ಪತ್ನೀ............'

'ಸಾಕು ಸುರುವಾತು ನಿನ್ನ ಮುಂಗಚೇಷ್ಟಿ, ನಮ್ಮಪ್ಪಾ....' ಎಂದು ಖುಷಿಯಿಂದ ನಗುತ್ತ ಒಳಗೆ ಹೋದಳು ಮಾಮಿ.

'ನೋಡು ಮನೂ ನಿಮ್ಮ ಮಾಮಿಯವರಿಗೆ ಅನುಕೂಲಕ್ಕಾದರೂ ನೀನು ಮದುವೆಯಾಗಬಾರದೆ?.... ಆದರ್ಶ ಸೌಂದರ್ಯ ಎನ್ನುತ್ತ ಆಯೆಂದು ಬಾಯಿ ತೆಗೆದುಕೊಂಡು ಹಾಗೇ ಕೂಡಬೇಕಾದೀತು.....'

'ವಿದ್ಯಾ, ಬೇಕಾದರೆ ಮಾಮಿಗೆ ಒಬ್ಬ ಮೋಲ್ಕರಣಿಯನ್ನು ಮದುವೆ ಮಾಡುತ್ತೇನೆ, ನನಗೆ ಬೇಕಾದ 'ಬ್ಯೂಟಿ' ಸಿಗುವವರೆಗೂ........'

'ಹೀಗೇ flirt ಮಾಡುತಾ ಓಡಾಡಬೇಕೆನ್ನುತ್ತಿ ಅಲ್ಲವೆ?'

'..................'

ವಿದ್ಯಾವತಿ ಕಲೋಪಾಸಕಳಾಗಿದ್ದಂತೆ ಮನೂ ಸೌಂದರ್ಯೋಪಾಸಕ; ಇಬ್ಬರ ಉಪಾಸನೆಯ ರೀತಿಯೂ ಒಂದೇ ತರಹ! ಅಂತೆಯೇ ಇಬ್ಬರಿಗೂ ಅನೇಕ ವಿಧದಲ್ಲಿ ಐಕಮತ್ಯವಾದರೂ, ಸಲುಗೆ ಕೆಳೆತನಗಳು ಹೆಚ್ಚಿದರೂ ಮನೂನನ್ನೆ ಏಕೆ ಆರಿಸಿಕೊಳ್ಳಬಾರದು ಎಂಬ ವಿಚಾರ ಮನದಲ್ಲಿ ಸುಳಿದರೂ ಅದು ಸಾಧ್ಯವೆಂದು ತೋರಲಿಲ್ಲ ಅವಳಿಗೆ.

ಮಂಗಳೂರಿನಲ್ಲೇ ಕಾಲೇಜಿದ್ದರೂ, ಮದ್ರಾಸ, ಮೈಸೂರು ಸಮೀಪದಲ್ಲಿದ್ದರೂ ವಿದ್ಯಾ ಬದಲಾವಣೆಗೆಂದು ಪುಣೆಯ S. P. ಕಾಲೇಜ ಸೇರಿದ್ದಳು. ಇದಕ್ಕೆ ಅವಳ ಮನೆತನದ ವಿಷಮಪರಿಸ್ಥಿತಿಯೂ ಕಾರಣವಾಗಿದ್ದಿರಬಹುದು ಎನ್ನಬಹುದು. ಅವಳ ಚಿಕ್ಕಮ್ಮನ ಗಂಡ ಅಲ್ಲಿ I. P. S. ಇದ್ದರು.

• • • •

ಆ ದಿನ ಕಾಲೇಜ ಗ್ಯಾದರಿಂಗನಲ್ಲಿ ಮನೂ ಆಟಗಳಲ್ಲಿ ಪ್ರಥಮ ಪಾರಿತೋಷಕ ಪಡೆದ. ಪಾರಿತೋಷಕವಿತರಣವಾಯಿತು. ಎಲ್ಲರೂ ಮನೋಹರನನ್ನ 'ಬಕಪ್, ಬಕಪ್' ಎಂದು ಕರತಾಡನದೊಂದಿಗೆ ಅಭಿನಂದಿಸಿದರು.' ಶೀಲ್ಡ ತೆಗೆದುಕೊಂಡು ಬರುವಾಗ ವಿದ್ಯಾತಾನೇ ಪ್ರಥಮದಲ್ಲಿ 'ಶೇಕಹ್ಯಾಂಡ್ ಕೊಡಬೇಕೆಂದು ಕೈಚಾಚಿ ಮುಂದುವರಿದಾಗ ಅವಳನ್ನು ಕಡೆಗಣಿಸಿ ಮನೂ ದುಂಡು ಮುಖದ (ಅದಕ್ಕಾಗಿ 'ಪ್ಲಂಪಿ' ಎಂದು ಎಲ್ಲರೂ ಅವಳನ್ನು ಕರೆಯುವುದು.) 'ರೋಜ'ಳಿಗೆ ಕೈನೀಡಿದನು. ಅವಳೊಂದಿಗೆ ಉಳಿದ ಕ್ರಿಶ್ಚನ್ ಕುವರಿಯರೂ ಇದ್ದರು. ಅವರ ಗುಂಪಿನೊಳಗೆ ಸೇರಿ ವಿದ್ಯಾವತಿಯನ್ನು ಕಣ್ಣೆತ್ತಿ ಸಹ ನೋಡಲಿಲ್ಲ. ಅಪಮಾನದ ಪೆಟ್ಟು ವಿದ್ಯಾವತಿಯ ಅಭಿಮಾನದ ಹೆಡೆಯ ಮೇಲೆ ಬಿತ್ತು. ಬಹಳ ದಿನಗಳ ವರೆಗೆ ಅದನ್ನವಳು ಮರೆತಿರಲಿಲ್ಲ.

'ಮಜಾ ಮಾಡಲಿಕ್ಕೆ ರೋಜ, ಜಸ್ಮಿನ್ ಯಾವೂ ಇಲ್ಲದಾಗ ನನ್ನ ಬಳಿ ನೀನು ಹರಟೆ ಕೊಚ್ಚಲಿಕ್ಕೆ ಬರುತ್ತೀ' ಎಂದು ವಿದ್ಯಾ ಮಾತಿನಿಂದ ಮನೋಹರನನ್ನಿರಿಯುತ್ತಿದ್ದಳು. ಆದರೂ ಅವನಿಗೆ ಅದರ ಎಗ್ಗೇ ಇರುತ್ತಿರಲಿಲ್ಲ. 'ಎಲ್ಲರಿಗೂ ನಾನೇ ಬೇಕು, ನಮ್ಮ ಅರ್ಥಶಾಸ್ತ್ರದ ಪ್ರೊಫೆಸರರ ಹಾಗೆ. ಅಂತೇ ನಾನೂ ಅವರಂತೆ ಎಲ್ಲರಿಗೂ ಮುಟ್ಟುವಂತೆ ಒಂದೊಂದು ಖಾಸಗಿ ಪೀರಿಯೆಡ್ ತೆಗೆದುಕೊಳ್ಳುತ್ತೇನೆ' ಎಂದು ವಿದ್ಯಾವತಿಯನ್ನು ರಮಿಸಬೇಕು.

ಒಂದು ಸಂದರ್ಭದಲ್ಲಂತೂ ವಿದ್ಯಾ ಆ ರಸನಿಮಿಷವನ್ನು ಕಳೆದುಕೊಳ್ಳಬಾರದೆಂದು ಮನೂಗೆ ಕೇಳಿದಳು. 'ಮನೂ ನನ್ನೊಡನೆ ಇಷ್ಟು ಬಗೆಯಿಂದ ಶೃಂಗಾರಿಕ ಚೇಷ್ಟೆಗಳನ್ನು ಮಾಡುತ್ತೀ...........'

'ಹೌದು ಅದರಲ್ಲೇ ಮೋಜಿದೆ.'

'ಮೂರ್ಖಾ, ಚೇಷ್ಟೆಯೊಳಗೇ ಆಯುಷ್ಯ ಹಾಳು ಮಾಡಿಕೊಳ್ಳಬೇಡ. ಮದುವೆ ಮಾಡಿಕೊಳ್ಳುವ ಮನಸ್ಸಿದ್ದರೆ ಹೇಳು' ಎಂದಾಗ ಮನೂ ಬರಿ ನಕ್ಕು ಅವಳನ್ನು ಅಪಹಾಸ್ಯ ಮಾಡಿದ್ದ.

ಒಮ್ಮೆ ತಮ್ಮ ಸಂಘದ ವಾರ್ಷಿಕೋತ್ಸವದಲ್ಲಿ ವಿದ್ಯಾ-ಮನೂ ಕೂಡಿ 'ಲೈಲಾ-ಮಜನೂ' ದೊಳಗಿನ ಒಂದು ದೃಶ್ಯವನ್ನು ಸಂಗೀತರೂಪಕದಲ್ಲಿ ಪ್ರದರ್ಶಿಸಿದ್ದರು. ಜನರಿಗೆ ಮೆಚ್ಚುಗೆಯಾಯಿತು. ವಿದ್ಯಾವತಿಗೆ ಹುಚ್ಚು ಹಿಡಿಯುವಷ್ಟಾಗಿತ್ತು. 'ನೀನು ನಾಟಕದ ಪೂರ್ತಿ ಲೈಲಾ' ಎಂದು ಮನೂ ಚೇಷ್ಟೆ ಮಾಡಿದಾಗ ಅವನನ್ನು ಹೊಡೆಯಹೋಗಿದ್ದಳು ವಿದ್ಯಾ. ಆದರೂ ಲೈಲಾ-ಮಜನೂ ಚೇಷ್ಟೆಯನ್ನು ಇನ್ನೂ ಬಿಟ್ಟಿರಲಿಲ್ಲ ಮನೂ........

• • • •

ಅಂತೂ ಒಮ್ಮೆ ಎರಡು ಮೂರು ಸಲ ಎಡತಾಕಿದ ಮೇಲೆ ವಾಡೇಕರ ವಕೀಲರು ಸಿಕ್ಕರು. ವಿಷಯವನ್ನೆಲ್ಲಾ ಪ್ರಸ್ತಾಪಿಸಿದುದಾಯಿತು ವಕೀಲರು ಬಹಳ ಸಹಾನುಭೂತಿಯಿಂದ ಅವರ ಹೇಳಿಕೆಯನ್ನೆಲ್ಲಾ ಕೇಳಿಕೊಂಡರು. ಆಮೇಲೆ 'ಮೊದಲ ಅರ್ಧಾ ಅರ್ಧಾ ಕಪ್ಪು ಚಹಾ ಆಗಲಿ.......ಪದ್ಮೇ' ಎಂದು ಮಗಳನ್ನು ಕೂಗಿ ಚಹ ತರಲಿಕ್ಕೆ ಹೇಳಿದರು.

'ಕನ್ನಡ ಬರುತ್ತದೆಯೆ ನಿಮಗೆ?' ವಿದ್ಯಾ ಸ್ನಿಗ್ಧ ಮನಸ್ಸಿನಿಂದ ಕೇಳಿದಳು.

'ಬೆಳಗಾವದೊಳಗ ನಾ ಪುಷ್ಕಳ ದಿವಸ ತಗದೀನಿ. ನಮ್ಮ ಹಿರೇರು ಎಲ್ಲಾ ಬೆಳಗಾವಕಃ ಇದ್ದರು. ಶಹಪೂರಕ ಇನ್ನೂ ನಮ್ಮ ಘರಾಣೇದ ಜನಾ ಇದ್ದಾರ.'

'ಇಲ್ಲಿಗೆ ಬಂದು ಎಷ್ಟು ವರುಷಗಳಾಯಿತು ವಕೀಲರೆ?'

'ಇಲ್ಲಿಗೆ ಬಂದೂ ಪುಷ್ಕಳ ವರ್ಷ ಆದುವು...............ಇಲ್ಲೇ ತಲಿ ಬೆಳ್ಳಗಾಯಿತು. ಇಲ್ಲೇ ಕಣ್ಣೂ ಬೆಳ್ಳಗಾಗಲಿಕ್ಕೆ ಬಂದಾವ.' ಎಂದು ತಮ್ಮ ವಿನೋದಕ್ಕೆ ತಾವೇ ಖೊಳ್ಳನೆ ನಕ್ಕರು. ಪದ್ಮಜಾ ಚಹಾ ತಂದು ಇಟ್ಟಳು.

'ವಿದ್ಯಾತಾಯಿ, ಈಕೆ ನಮ್ಮ ಮಗಳು ಪದ್ಮೆ.'

'ನಮಸ್ತೆ.' ಪದ್ಮೆ ನಮಸ್ಕಾರ ಮಾಡಿದಳು-

'ಬರ. ಅತ್ತಾ ಆತ ಚಲ' (ಇರಲಿ. ಇನ್ನ ಒಳಗೆ ನಡೆ.) ಎಂದು ವಕೀಲರು ಮಗಳನ್ನು ಒಳಗೆ ಕಳಿಸಿದರು. ವಿದ್ಯಾಗೂ ಮನೂಗೂ ಹಾಗೇಕೆ

ಒಮ್ಮೆಲೆ ಕಳಿಸಿಬಿಟ್ಟರೆಂದು ಸ್ವಲ್ಪ ಆಶ್ಚರ್ಯವಾಯಿತು. ಆಮೇಲೆ ಕಿವಿ ಮಾತು ಹೇಳುವವರಂತೆ ತಮ್ಮ ಕುರ್ಚಿಯನ್ನು ಸ್ವಲ್ಪ ಮುಂದೆಳೆದುಕೊಂಡು 'ನೋಡಿದಿರಾ ಈಕೆಯನ್ನು. ಮದುವೆ ಮಾಡಿ ಅತ್ತೆಯ ಮನೆಗೆ ಕಳಿಸಿದೆವು. ಈಗ ಏನೂ ಉಪಾಯವಿಲ್ಲದೆ ಮನೆಯೊಳಗೇ ಇಟ್ಟುಕೊಂಡು ಇದ್ದೀವಿ. ಈಕೆಯ ಗಂಡ ಪಹಿಲಾ ನಂಬರ ಕುಡುಕ! ನಾವೇ ಮಗಳ ಮೈಮೇಲೆ ಅರ್ಧಸೇರು ಬಂಗಾರ ಇಟ್ಟು ಮದುವೆಮಾಡಿಕೊಟ್ಟೆವು. ಬಂಗಾರ ಹೋಯಿತು. ಒಂದು ದಿನ ಮಗಳನ್ನು ಬಡಿದು ಉಟ್ಟ ಸೀರೆಯ ಮೇಲೆ ರತ್ನಾಗಿರಿಯಿಂದ ಇಲ್ಲಿಯ ವರೆಗೂ ಅಟ್ಟಿಹಾಕಿದರು. ಬಾಟ್ಲಿಯೊಂದಿಗೆ ಬ್ರಹ್ಮೇತಿಯೂ ಒಂದು ಗಂಟುಬಿತ್ತು. 'W' ದ ಎಲ್ಲಾ ಸದ್ಗುಣಗಳ ಖಣಿ ಯಾಗಿದ್ದಾರೆ ನಮ್ಮ ಅಳಿಯದೇವರು.....ಇಷ್ಟೆಲ್ಲಾ ಆದರೂ ಮಾಡುತ್ತೇವೇನು? ಡೈವ್ಹೋರ್ಸ ಕೇಳಬೇಕೆ? ಕೇಳಿ ಮಾಡಬೇಕೇನು? ಪೋಟಗಿ ಕೇಳಬೇಕೆ? ಪೋಟಗಿ ಡಿಕ್ರಿ ಆದರೂ ವರುವರುಷಾನೂ ವಸೂಲಿ ಆಗವೆ ಮತ್ತೆ ದಾವೆ ಮಾಡಬೇಕು. ಅಷ್ಟೆಲ್ಲಾ ಆಗಿ ಮನೆಯ ಹುಳುಕೆಲ್ಲಾ ಬಯಲಿಗಿಡುವುದು ಅಂದರೆ ಮರ್ಯಾದಸ್ಥರಿಗೆ ಒಪ್ಪುವ ಮಾತಲ್ಲ. ಹುಡುಗೆಯ ನಶೀಬವೆನ್ನು ವುದು, ಸುಮ್ಮನಿರುವುದು. ನಮ್ಮ ನಿಮ್ಮಂತಹ ಇನ್ನೊಬ್ಬ ಸಜ್ಜನ ಮಧ್ಯಸ್ಥಿಗ ರಿಂದ ಮತ್ತೆ ಪ್ರಯತ್ನ ನಡಸಿದ್ದೇವೆ. ಹಾದಿಯ ಮೇಲೆ ಬರಬಹುದು ಅಂತಲೂ ಭರವಸೆ ಇದೆ....ಹೇಳಿರಿ, ನಿಮ್ಮ ಗಂಡ ಇಷ್ಟೇನು ದುಷ್ಟ, ನೀಚ ಅಲ್ಲವಷ್ಟೆ?'

'ನಾನು ಎಷ್ಟೆಂದು ಸಹನವಮಾಡಿಕೊಳ್ಳಬೇಕು? ನನಗೆ ವ್ಯಕ್ತಿತ್ವ ವಿಲ್ಲವೆ? ನನಗೆ ಸ್ವಾತಂತ್ರ್ಯ ವಿಲ್ಲವೆ?....ನನಗೂ ನನ್ನ ರಸಿಕ ಹಂಬಲಗಳು ಇವೆ. ನುಂಗಿಕೊಂಡು ನುಂಗಿಕೊಂಡೇ ನಮ್ಮ ಹೆಂಗಸರ ಅವಸ್ಥೆ ಹೀಗಾಗಿದೆ.'

'ಒಳ್ಳೇದು. ನಿಮ್ಮಂತೆಯೇ ಹೋಗೋಣ. ಒಪ್ಪುತ್ತೇನೆ. ಈಗೇನು, ಅರ್ಜಿ ಕೊಡಬೇಕೆನ್ನುತ್ತೀರಾ?'

'ಹೌದು.'

'ಕೋರ್ಟಿನ ಖರ್ಚು ಮೊದಲು ವಹಿಸಬೇಕು. ಎರಡನೆಯದಾಗಿ ನಿಮ್ಮ ಗಂಡನ ವಿರುದ್ಧ ನೀವು ಹೊರಿಸುವ ಆರೋಪ ಸಿದ್ಧ ಮಾಡಬೇಕು. ನಿಮ್ಮ ಗಂಡ ಅತ್ಯಾಚಾರ ಏನು ಮಾಡಿದ್ದಾನೆ, ಯಾರೊಡನೆ ಮಾಡಿದ್ದಾನೆ, ಇದಕ್ಕೆ ಸಾಕ್ಷಿಯೇನು ಇವೆಲ್ಲಾ ತಂದು ಸಿದ್ಧ ಮಾಡುವದು ಮರ್ಯಾದಸ್ಥ ಹೆಣ್ಣು

ಮಕ್ಕಳಿಗೆ ಆಗದ ಮಾತು. ನಿಮ್ಮ ಗಂಡ ದಿನಾಲು ಕುಡಿದು ಬಂದು ನಿಮ್ಮನ್ನು ಹೊಡೆಯುತ್ತಾನೆಯೆ? ಅವನು ಕ್ರೂರ ರೀತಿಯಿಂದ ನಡೆಸಿಕೊಳ್ಳುತ್ತಾನೆಂದು ಹೇಗೆ ತೋರಿಸುವಿರಿ? Incompatibility of temperaments ಎಂದರೆ ಮನೋವೃತಿಗಳು ಭಿನ್ನಭಿನ್ನವಾಗಿರುತ್ತವೆಯೆಂದರೆ ಅದು ನಿಮ್ಮ ನಿಮ್ಮೊಳಗಿನ ಮಾತು ಎಂದು ಹೇಳಿಬಿಡುತ್ತಾರೆ. ಅಥವಾ ಮದುವೆಯ ಮುಂದೆ ನೀವು ಅಲ್ಪವಯಿ ಇದ್ದಿರಾ? ಅದೂ ಇಲ್ಲ. ನಿಮ್ಮನ್ನು ನಿಮ್ಮ ಗಂಡ ತೌರುಮನೆಗಟ್ಟಿ ಇನ್ನೊಂದು ಸಂಬಂಧ ಬೆಳಸಿದ್ದಾರೆಯೆ ? ಅದೂ ಇಲ್ಲ. ನಿಮ್ಮ ಗಂಡನಿಗೆ ಹುಚ್ಚು ಹಿಡಿದಿದಿಯೆ? ಅದೂ ಇಲ್ಲ. ನಿಮ್ಮ ಗಂಡ ಗಂಡುಸಲ್ಲವೆನ್ನುತ್ತೀರಾ? ಹಾಗೂ ಅಲ್ಲ. ವಿದ್ಯಾಕಾಯಿ, ಇಷ್ಟೆಲ್ಲಾ ವಕೀಲಿ ಮಾತು ಬಿಟ್ಟು, ನಾನೀಗ ತಲೆ ಬೆಳ್ಳಗಾದ ಅನುಭವಿಕ, ನಿಮ್ಮ ಹಿತಬಂಧು ಎಂಬ ನಾತೇದಿಂದ ಹೇಳುತ್ತೇನೆ: ಈಗ ನೀವು ಯಾವ ಉದ್ದೇಶದಿಂದ 'ಡೈವ್ಹೋರ್ಸ' ಮಾಡಬೇಕೆನ್ನುತ್ತಿದ್ದೀರೊ ಆ ಉದ್ದೇಶ ಇನ್ನೊಂದು ಮದುವೆಯಿಂದ ಸಫಲವಾಗುತ್ತದೆಂಬ 'ಗ್ಯಾರಂಟಿ' ಏನು? ಅಂತಹ 'ಗ್ಯಾರಂಟಿ' ನೀವು ಕೊಡಿರಿ, ಇಂದೇ ನಿಮಗೆ ಇನ್ನೊಂದು ಮದುವೆ ಮಾಡುವೆ....ಹೊಸ ಶ್ಯೂಜು ಕಾಲಿಗೆ ಒಮ್ಮೆಲೆ ಹಾಳತಾಗುವುದಿಲ್ಲ. ಗುಳ್ಳೆ ಏಳುತ್ತವೆ. ಹುಣ್ಣಾಗುತ್ತವೆ. ಹಾಗೆಂದು ಮತ್ತೊಂದು ಜೋಡು ಹೊಸ ಶ್ಯೂಜ ಕೊಂಡುಕೊಳ್ಳ ಹೋದರೆ ಮತ್ತೆ ಗುಳ್ಳೆ, ಮತ್ತೆ ಹುಣ್ಣು. ಆದುದರಿಂದ ಹಾಕಿದ ಶ್ಯೂಜನ್ನೆ ಮತ್ತೊಂದು ನಾಲ್ಕು ಸಲ ಮೆಟ್ಟಿದರೆ ಎಲ್ಲಾ ತಾನೇ ಸರಿ ಹೋಗುತ್ತದೆ. ಕಾಲಿಗೆ ದಡ್ಡು ಬಿದ್ದು ತೊಗಲು ದಪ್ಪವಾಗುತ್ತದೆ........'

'But the wearer knows where the shoe pinches. (ಆದರೆ ಆ ಶೂಜ್ ಹಾಕುವವರಿಗೇ ಗೊತ್ತು ಅದರ ಒಳನೋವು.) ವಿದ್ಯಾ ಅದೇ ಮಾತಿನ ಎಳೆ ಹಿಡಿದು ಮರುಮಾತನಾಡಿದಳು.

'ಅದೇನು ನೋವು ಹೇಳಿರಿ. ಶ್ಯೂಜ ರಿಪೇರಿ ಮಾಡಿಸಲಿಕ್ಕೆ ಬಂದೀತಲ್ಲ ? ' ವಾಡೇಕರ ನಗುತ್ತ ಹೇಳಿದರು.

' ಅವರು ರಿಪೇರಿ ಮೀರಿದ್ದರೆ ? '

' ಅದು ಸಾಧ್ಯವೆ ಇಲ್ಲ ವಿದ್ಯಾತಾಯಿ. '

' ವಕೀಲರೆ, ನಾನವರಿಗೆ ಎರಡನೆಯ ಹೆಂಡತಿ. ಅವರಿಗೊಬ್ಬ ಮಗನೂ ಇದ್ದಾನೆ. '

'ಅವರ ಮಗ ನಿಮ್ಮ ಮಗನೇ ಅಲ್ಲವೆ ?'

'ತಂದೆ-ಮಕ್ಕಳ ಪ್ರೇಮದಲ್ಲಿ ತಾಯಿಗೇ ಸ್ಥಾನವಿಲ್ಲದಾಗಿದೆ....ತಮ್ಮದು ಎಂಜಲದ ಕೈ ಎಂಬ ಮಾತನ್ನೂ ಅವರು ನನ್ನ ಮುಂದೆ ಹೇಳಿರಲಿಲ್ಲ.'

'ಹೇಳಿರದಿದ್ದರೆ ನೀವು ಕೇಳಿದ್ದಿರಾ?'

'ನಾನೇಕೆ ಕೇಳಬೇಕು ? ಎರಡನೆಯ ಮದುವೆಯೆಂಬ ಮಾತನ್ನು ಸಜ್ಜನರಾದ ಅವರು ಹೇಳಬೇಡವೆ ?'

'ಹೇಳಿಲ್ಲವೆಂದು ಅವರು ದುರ್ಜನರಾಗುವುದಿಲ್ಲ....ನಿಮ್ಮ ವಿವಾಹದ ಭೂಮಿಕೆಯೆ ವಿಚಿತ್ರವಾಗಿದೆಯೆಂದ ಮೇಲೆ ಈ ಬಗೆಯ ಆರೋಪ ನೀವು ಮಾಡಬಾರದು.'

'ಮದುವೆಯಾದ ಮೇಲೂ ವಿಶ್ವಾಸದಿಂದ ಇರಬೇಡವೆ?'

'ಅದೇ ಹೇಳಿದೆನಲ್ಲ, ಅವರು ಅತ್ಯಾಚಾರ ಮಾಡಿದ್ದಾರೆಂದು ನೀವು ಸಿದ್ಧಮಾಡುವಿರಾ?'

'ಯಾವಾಗಲೂ ಛಬಿಯ ನೆರಳಾಗಿ ನಡೆಯುತ್ತಾರಲ್ಲ? ನನಗೆ ಸಂಶಯ ಬರಬಾರದೇನು?.........ನಾನು ಪ್ರೇಮದ ಹಸಿವಿನಿಂದ ಮನೆಗೆ ಬಂದರೆ ಛಬಿ ಯೊಡನೆ ಇವರ ಸರಸಲ್ಲಾಪ, ಮಗನೊಂದಿಗೆ ಇವರ ಪಿತೃವಾತ್ಸಲ್ಯ......... ಖಾಸಗಿ ರೂಮಿನಲ್ಲಿ ಮಕ್ಕಳೇಕೆ ಇರಬೇಕು? ಇದರಿಂದ ಪರಿಣಾಮವೇನಾ ದೀತು ?'

'ವಿದ್ಯಾತಾಯಿ, ನಿಮ್ಮ ಮನಸ್ಸನ್ನು ನಾನೀಗ ಸಂಪೂರ್ಣ ಓದಿಕೊಂಡಿ ದ್ದೇನೆ. ಸಂಶಯವೆಂಬುದೊಂದು ದೊಡ್ಡ ಭೂತ. ದಾಂಪತ್ಯಪ್ರೇಮವನ್ನೇ ನುಂಗಿಬಿಡುತ್ತದೆ ಅದು. ಒಂದೇ ಮಾತು ಹೇಳಿರಿ, ನೀವು ಬೇಡುವ ಸ್ವಾತಂತ್ರ್ಯ ಅವರಿಗೆ ಸಂಶಯಕ್ಕೆ ಆಸ್ಪದ ಕೊಡಬಾರದೇಕೆ ? ಪರಸ್ಪರರ ಮನಸ್ಸಿನ ಔದಾರ್ಯ, ತ್ಯಾಗಬುದ್ಧಿಗಳಿಂದ ಪ್ರೇಮ ಬೆಳೆದು ಹೆಚ್ಚಬಹುದಲ್ಲದೆ, ಡೈವ್ಹೋರ್ಸ ಮಾಡಿ ಮತ್ತೊಂದು ಮದುವೆಯನ್ನು ಹುಡುಕುವದರಿಂದಲ್ಲ. ಈಗ ಇಷ್ಟೇ ಸಾಕು. ಮೂರು ತಿಂಗಳು ಈ ಹೊಸ ಪ್ರಯೋಗ ಮಾಡಿ ನೋಡಿರಿ ಆಮೇಲೆ ನನ್ನ ಬಳಿ ಬರ್‍ರಿ. ನಿಮ್ಮ ಪ್ರೇಮಪಥದೊಳಗಿನ ಕಾಲ್ತೊಡಕು, ಮುಳ್ಳುಕಂಟಿಗಳೆಲ್ಲಾ ಬಯಲಾಗಿ ಹೋಗುವವು....ಇನ್ನೊಮ್ಮೆ ಚಹಾ ತಗೋತೀರೇನು ?.......'

'ಬೇಡ, ಥ್ಯಾಂಕ್ಸ.'

'ಮುದುಕನ ಮಾತು ಮಾನಸಿಕ ಮಾಡಬೇಡ್ರಿ ಹಾಂ?'

'ಅದಾಯ್ತು, ಆದರೆ ನಾನೇ ತನ್ನ ಬಳಿಗೆ ಹೋದೆನೆಂದು ಅದು ತನ್ನ ಗೆಲುವು, ನನ್ನ ಸೋಲು ಎಂಬ ಬಿಂಕ ತೋರೀಸಬಂದರೆ?'

'ವಿದ್ಯಾತಾಯಿ, ಗಂಡ-ಹೆಂಡಿರ ನಡುವೆ ಸೋಲು-ಗೆಲುವುಗಳೆಂದರೇನು?....ನೀವು ಸೋತಿರೆಂದು ತಿಳಿದುಕೊಂಡಾಗ ಅದು ಅವರ ಗೆಲುವಾಗಬೇಕು. ನೀವು ಸೋತಿರೆಂದು ತಿಳಿದುಕೊಳ್ಳುವಿರೇಕೆ?........ಮನಸ್ಸಿನ ಔದಾರ್ಯವು ಸೋಲಿನ ಲಕ್ಷಣವಲ್ಲ.'

'ಅವರು ಹಾಗೆ ತಿಳಿಯುತ್ತಾರಲ್ಲ, ಅದು ತಮ್ಮ ಗೆಲುವೆಂದು.'

'ನೀವೂ ಹಾಗೇ ತಿಳಿಯಬೇಕು, ಅದು ನಿಮ್ಮ ಗೆಲುವೆಂದು.'

'ಚಾಣಾಕ್ಷ ವಕೀಲನ ಲಕ್ಷಣ ಅಂದರೆ ಇದು.' ಎಂದು ಮನೂ ಮೆಚ್ಚಿಗೆಯಿಂದ ನಕ್ಕು 'ಒಳ್ಳೇದು ಬರುತ್ತೇವೆ.' ಎಂದು ಬೀಳ್ಕೊಂಡ.

'ನಮಸ್ತೆ.' ವಕೀಲರೆಂದರು.

'ವಕೀಲಿ ಫೀ....' ವಿದ್ಯಾವತಿಗೆ ಸ್ಪಷ್ಟ ಕೇಳುವುದಕ್ಕೂ ಸಂಕೋಚವಾಯಿತು.

'ನೀವಿಬ್ಬರೂ ರಾಜಿ ಆಗಿ ಪ್ರೇಮದಿಂದ ಇರ್ರಿ. ಅದೇ ನನ್ನ ಫೀ.'

'ಈ ಫೀ ಮಾತ್ರ ಸ್ವಲ್ಪ ದುಬಾರಿ ಎಂದು ಕಾಣುತ್ತದೆ.' ಮನೂ ಎಂದ. ವಕೀಲರು ಖೊಳ್ಳನೆ ನಕ್ಕರು. ವಿದ್ಯಾ ಮುಗುಳ್ನಗೆ ನಕ್ಕಳು.

ಮನೆ ಮುಟ್ಟುವವರೆಗೂ ವಿದ್ಯಾವತಿಗೆ ಮುಂದೆ ಯಾವ ಹೆಜ್ಜೆ ಎಂಬ ಪ್ರಶ್ನೆ ಬೃಹದಾಕಾರ ತಾಳಿ ಅವಳ ಮುಂದೆ ನಿಲ್ಲುತ್ತಿತ್ತು.

ಅಂದೇ ಮಧ್ಯಾಹ್ನ ಊಟ ಮಾಡಿಕೊಂಡು ಹೊರಡುವುದೆಂದು ವಿದ್ಯಾ ನಿರ್ಧರಿಸಿದ್ದಳು. ಆದರೆ ಮನೂ–'Snake Pit' ಎಂಬ ಚಿತ್ರಪಟಕ್ಕೆ ಆಗಲೆ ಬಾಲ್ಕನಿ ಟಿಕೆಟ್ ರಿಝರ್ವ ಮಾಡಿಸಿಬಿಟ್ಟಿದ್ದ. ವಿದ್ಯಾ ಅನಿವಾರ್ಯವಾಗಿ ಸುಮ್ಮನಿದ್ದಳು. ಕ್ಯಾಂಟೋನ್‌ಮೆಂಟ್ ಹಾದಿಯಲ್ಲಿಯೆ ಸಿನೇಮಾಗೃಹ. ಸಕಾಲಕ್ಕೆ ಬಸ್ ಇಳಿದು ಸ್ಥಳಗಳನ್ನಾಕ್ರಮಿಸಿಕೊಂಡರು........

ಚಿತ್ರಪಟವನ್ನು ನೋಡುತ್ತಿದ್ದ ಹಾಗೆಲ್ಲಾ ವಿದ್ಯಾವತಿಗೆ ಇನ್ನೇನೊ ನೆನಪುಗಳು. ಚಿತ್ರಪಟದ ಕಥೆಯಲ್ಲಿ ಮದುವೆಯ ಸಂದರ್ಭದ ಒಂದು

ಆಘಾತದಿಂದ ನಾಯಿಕೆಗೆ ಹುಚ್ಚು ಹಿಡಿದಿರುತ್ತದೆ. ಅವಳು ತನ್ನ ಗಂಡನ ಬಗ್ಗೆ ಸಂಶಯದೃಷ್ಟಿಯಿಂದ ನೋಡುತ್ತಿರುತ್ತಾಳೆ. ಒಂದು ದಿನ ಬರುವ ವೇಳೆಗೆ ಗಂಡ ಬರುವುದಿಲ್ಲ. ಅವಳ ಕಲ್ಪನೆಯಲೂಟಿ ಪುಟಿಯುತ್ತದೆ. ಹುಚ್ಚು ಹಿಡಿಯುವ ಮಟ್ಟಿಗೆ ತಲೆ ಕೆಡುತ್ತದೆ. ಹುಚ್ಚು ಹಿಡಿಯುತ್ತದೆ. ಒಬ್ಬ ಡಾಕ್ಟರ ಅವಳ ಮನಸ್ಸನ್ನು ಅಭ್ಯಸಿಸುತ್ತಾನೆ. ಮೂಲ ಕಾರಣವನ್ನು ಕಂಡುಹಿಡಿಯುತ್ತಾನೆ. ಹೆಂಗುಸಿನ ಮನಸ್ಸು ಒಂದು ವಿಷದ ಬಾವಿ ಇದ್ದಂತೆ. ಆಳಕ್ಕಿಳಿದಷ್ಟು ವಿಷದ ತೀಕ್ಷ್ಣತೆ ಹೆಚ್ಚುತ್ತದೆ. ಡಾಕ್ಟರನು ಅವಳ ಮನೋವಿಶ್ಲೇಷಣ ಮಾಡಿ ಅವಳನ್ನು ಉಪಚರಿಸುವ ಪ್ರಯೋಗಗಳೆ ಕಥಾಜೀವಾಳ....

ಸಿನೇಮಾ ಮುಗಿಸಿ ಬಂದಾಗ ವಿದ್ಯಾವತಿಗೆ ವೈರುಧ್ಯಂ ಎಂದು ಹೋಗಿತ್ತು. ಮನೆ ಮುಟ್ಟುವವರೆಗೂ ಅದೇ ಗುಂಗಿನಲ್ಲಿ ಮನೂನೊಡನೆ ಮಾತು ಸಹ ಆಡುವಷ್ಟು ಮನೋವಿರಾಮ ಅವಳಿಗಿರಲಿಲ್ಲ.

ಮರುದಿನ ಮಧ್ಯಾಹ್ನ ಊಟ ಮುಗಿಸಿ ಗಾಡಿ ಹತ್ತಬೇಕೆಂದಿದ್ದಳು ವಿದ್ಯಾ. ಅಂದು ಮತ್ತೊಂದು ಇಂಗ್ಲಿಷ ಚಿತ್ರ! 'ಸರ್ಚ' ಎಂಬುದು. ಮನೂ ಮೊದಲೇ ತಿಕೀಟ ರಿಜರ್ವ ಮಾಡಿಸಿಟ್ಟಿದ್ದ. ವಿದ್ಯಾ ನಿರ್ವಾಹವಿಲ್ಲದೆ ಉಳಿದಳು.

ಅಂದಿನ ಚಿತ್ರದಲ್ಲಿ ನೋಡಬೇಕಾದುದು ಒಂದು ಸಣ್ಣ ಹುಡುಗನ ಪಾತ್ರ. ಜರ್ಮನಿಯ ಯಾವುದೋ ಒಂದು ಊರಲ್ಲಿ ಯುದ್ಧದ ಹಾವಳಿಯಿಂದ ಹೊರಬಿದ್ದ ಹಂಗೇರಿಯ ಮನೆತನದ ನಿರ್ವಾಸಿತರಲ್ಲಿಯ ತಾಯಿ ಮಗು ಅಗಲಿ ಹೋಗುತ್ತಾರೆ. ಮುಂದೆ ಹೇಗೊ ಒಂದು ಧಡಕ್ಕೆ ಮುಟ್ಟುತ್ತಾಳೆ ತಾಯಿ. ಮಗುವೂ ಅಲ್ಲಿಯೆ ಬಂದು ಮುಟ್ಟಿದುದು ತಾಯಿಗೆ ಗೊತ್ತಿಲ್ಲ. ಮಗು ಪಡುವ ಕಷ್ಟಪರಂಪರೆ ತಾಯಿಗಾಗುವ ಅಗಲಿಕೆಯ ಅಗಮ್ಯ ವೇದನೆಗಳನ್ನು ಬಣ್ಣಿಸಲಾಸಲ್ಲ. ದುರ್ದೈವದ ಸಂಗತಿಯೆಂದರೆ ಮಗು ಅಲ್ಲೇ ಇದ್ದು ತಾಯಿಯ ಕಣ್ಣಿಗೆ ಬೀಳುವುದಿಲ್ಲ. ಎಷ್ಟೋ ದಿನ ತಾಯಿ ಮಕ್ಕಳು ಅಗಲಿ, ಉಳಿದ ಪರದೇಶಿ ಮಕ್ಕಳ ಜೋಪಾನ ಸಂಗೋಪನಗಳಲ್ಲೇ ತಾಯಿ ತನ್ನ ಮಗನ ಅಗಲಿಕೆಯನ್ನು ಮರೆಯಲೆತ್ನಿಸುತ್ತಾಳೆ. ತಾಯಿ ತಪ್ಪಿಸಿಕೊಂಡು ಬಂದ ಮಕ್ಕಳ ಒಂದು ಕ್ಯಾಂಪಿನ ಮೇಲ್ವಿಚಾರಕಳಾಗಿರುತ್ತಾಳೆ. ತನ್ನ ಮಗು ಅಲ್ಲಿಯೇ ತಪ್ಪಿಸಿಕೊಂಡು ಬಂದಿರುತ್ತದೆಂದು ತಾಯಿಗೆ ಮುಂದೆ

ತಿಳಿಯುತ್ತದೆ. ಆಗ ತಾಯಿಯಾದವಳ ಅಭಿನಯವೇನು, ಆ ಚಿಕ್ಕ ಮಗುವಿನ ಹೃದಯಸ್ಪರ್ಶಿಯಾದ ಅಭಿನಯವೇನು ! ತಾಯಿಮಕ್ಕಳನ್ನು ಅಗಲಿಸಿದ ಇಡೀ ಕಥೆಗೆ ಸಾಂಕೇತಿಕವಾಗಿ ಬರುವ ಮುಳ್ಳಿನ ಬೇಲಿ ಎಷ್ಟು ಅರ್ಥಪೂರ್ಣವಾಗಿತ್ತು! ವಿದ್ಯಾವತಿಗೆ ಈ ಚಿತ್ರಪಟಕ್ಕಾಗಿ ಉಳಿದದ್ದು ಸಾರ್ಥಕವೆನಿಸಿತು. ತಾಯಿಯ ಹೃದಯವೆಂದರೇನು, ಪುತ್ರವಾತ್ಸಲ್ಯವೆಂದರೇನು ಅವಳಿಗೆ ಸರಿಯಾದ ಅರ್ಥವಾಯಿತು........

........ಹೌದು ! ತಾಯಿಮಕ್ಕಳ ಅಗಲಿಕೆಯ ವೇದನೆಯೆಂತಹದಿರುತ್ತದೆಂಬುದು ವಿದ್ಯಾವತಿಗೂ ಗೊತ್ತು! ಅವಳ ಜೀವನದಲ್ಲಿ ಬಂದು ಹೋದ ವಿಷಾನುಭವವದು !.......

........ತಂದೆ ಮಹಾದೇವ ಹೆಗಡೆ ಅವರು ಕಾರ್ಕಳದ ದೊಡ್ಡ ವರ್ತಕರು. ಕೀರ್ತಿ, ಸಿರಿವಂತಿಕೆಗಳಿಂದ ಲೋಕಪ್ರಿಯರಾಗಿದ್ದವರು. ಮಹಾದೇವ ಹೆಗಡೆಯವರು ಹೃದಯವಿಕಾರದಿಂದ ತೀರಿದಾಗ ವಿದ್ಯಾವತಿ ಮಿಡಲ್ ಸ್ಕೂಲಿನಲ್ಲಿ ಓದುತ್ತಿದ್ದಳು. ಅವಳ ತಾಯಿ ನಾಗವೇಣಮ್ಮ ಇನ್ನೂ ಪ್ರಾಯದವರೆಂದೇ ಹೇಳಬೇಕು. ತಲೆಗೂದಲು ಸಹ ನರೆತಿರಲಿಲ್ಲ. ಕಡೆಯ ಹಾಗೂ ಒಬ್ಬನೇ ಗಂಡುಮಗು, ಮಂಜುನಾಥ ಇನ್ನೂ ಐದು ವರುಷದವನಿದ್ದ. ಮಹಾದೇವ ಹೆಗಡೆಯವರೊಡನೆ ಪಾಲುಗಾರನಾಗಿ ವ್ಯಾಪಾರಮಾಡುತ್ತಿದ್ದ ಕಾಮತ ಮಾನಪ್ಪನವರು ವಿದ್ಯಾವತಿಯ ಶಿಕ್ಷಣವನ್ನೆಲ್ಲಾ ತಾವೇ ನೋಡಿಕೊಳ್ಳುವುದಾಗಿ ವಚನವಿತ್ತರು. ಅವರ ಔದಾರ್ಯ ನಾಗವೇಣಮ್ಮನವರನ್ನು ಮುಗ್ಧಗೊಳಿಸಿತು. ಕಾಮತರು ಕಾಮ-ತರುವಾಗಿ ಕಾಮಧೇನುವಾಗಿ ಮೂರುನಾಲ್ಕು ವರುಷ ನಾಗವೇಣಮ್ಮನವರ ಸಂಸಾರ ಹಿಡಿದರು. ಅವರ ಔದಾರ್ಯವನ್ನು ಮೆಚ್ಚಿಕೊಂಡು ನಾಗವೇಣಮ್ಮನವರು ಋಣಿಯಾಗಿ ಉಳಿದು ಯಾವಾಗಲೂ ಅವರಿಗೆ ಕೃತಜ್ಞತೆಯನ್ನು ಸೂಚಿಸುತ್ತ 'ಹಚ್ಚುವುದೇ ನಿಮ್ಮ ದೀಪ, ಉಣ್ಣುವುದೇ ನಿಮ್ಮ ಅನ್ನ, ಕಾಮತರುಗಳೇ' ಎಂದು ಅವರನ್ನು ಧನ್ಯತೆಯಿಂದ ನೆನೆಯುತ್ತಿದ್ದರು.

ಒಂದು ದಿನ—ನಾಗವೇಣಮ್ಮನ ಭಾವಮೈದುನನಂತೆ—ಶಂಕರನಾರಾಯಣ ಅತ್ತಿಗೆಯನ್ನು ಮಂಗಳೂರಿಗೆಂದು ಕರೆದೊಯ್ಯಲು ಬಂದ. 'ಮಂಜುನಾಥ ನನ್ನೊಡನೇ ಇರಲಮ್ಮ. ನಾನೆಲ್ಲಾ ಅವನನ್ನು ನೋಡಿ

ಕೊಳ್ಳುತ್ತೇನೆ.' ವಿದ್ಯಾ ನುಡಿದಳು. 'ನಿನ್ನ ಶಾಲೆ ಅಭ್ಯಾಸಗಳಲ್ಲಿ ನಿನಗೆಲ್ಲಿ ಅವಕಾಶವಾಗಬೇಕು ಮಗೂ ?' ಎಂದರು ನಾಗವೇಣಮ್ಮ. 'ನಮ್ಮ ಮನೆಯಲ್ಲಿ ಹುಡುಗರೂ ಹೆಣ್ಣುಮಕ್ಕಳೂ ಇಲ್ವೆ? ಎಲ್ಲ ಮಕ್ಕಳಂತೆ ಮಂಜುನಾಥನೂ ಒಬ್ಬ.' ಎಂದರು ಕಾಮತರು. ಕೃತಜ್ಞತೆಯಲ್ಲೇ ಮುಳುಗೇಳುತ್ತಿರುವಾಗ ಅವರ ಮಾತನ್ನು ಮೀರಲಿಕ್ಕಾಗುತ್ತದೆಯೆ ನಾಗವೇಣಮ್ಮನವರಿಗೆ? ಭಾವನ್ಯೆದುನ ತಮ್ಮೊಡನೆ ಮಂಗಳೂರಿಗೆ ಬರಬೇಕೆಂದು ಕರೆಯಲು ಬಂದಾಗ ಅವರ ಮಾತನ್ನು ಅಲಕ್ಷಿಸುವುದಕ್ಕಾಗುತ್ತದೆಯೇ? ನಾಗವೇಣಮ್ಮ ಮಂಜುನಾಥನನ್ನಗಲಿ ಮಂಗಳೂರಿಗೆ ತೆರಳಬೇಕಾಯಿತು. 'ನನ್ನ ಮಗುವನ್ನಗಲಿ ಹೇಗೆ ಹೋಗಲಿ ವಿದ್ಯಾ ?' ಎಂದು ಸಂಕಟಬಟ್ಟು ಕಣ್ಣೀರು ತಂದಾಗ ವಿದ್ಯಾ ಅಂತಃಕರಣದಲ್ಲೇ ಒದ್ದಾಡಿಹೋದಳು.

ನಾಗವೇಣಮ್ಮ ಮಂಗಳೂರಿಗೆ ಹೋಗಿ ಒಂದು ವರುಷ ಕೂಡ ದಾಟಿರಲಿಲ್ಲ. ಕಾಮಧೇನು, ಕಲ್ಪತರುಗಳೋಪಾದಿಯಲ್ಲಿದ್ದ ಕಾಮತರು ವಿಷವೃಕ್ಷವಾಗಿ, ವಿಷಸರ್ಪವಾಗಿ ಹೆಡೆಯೆತ್ತಿದರು! ವಿದ್ಯಾ ಇನ್ನೂ ಚಿಕ್ಕವಳೆಂದರೂ ಅವಳಿಗೆ ಕಾಮತರ ಕಾರಸ್ಥಾನ ಅರ್ಥವಾಗುವುದೇನೂ ಕಠಿಣವಾಗಲಿಲ್ಲ. ಅಂಗಡಿಯ ವಿಶ್ವಾಸದ ಆಳುಮನುಷ್ಯ ಮಾಣಯ್ಯ ಹೇಳಿದ– 'ಯಮ್ಮಾ, ನಿಮಗಿಲ್ಲಿ ಒಳ್ಳೇ ಕಾಲ ಇಲ್ರಿ. ಸುಮಾಕ ಅವ್ವಾವ್ರ ತಾವಲ್ಲೆ ಮಂಗಳೂರಿಗೆ ಹೋಗಿಬಿಡ್ರಿ. ಮಾನಪ್ಪನವರ ಕಣ್ಣು ಒಳ್ಳೇದಲ್ಲಾ. ನಿಮ್ಮನ್ನ ದೊಡ್ಡವ್ರನ್ನ ಮಾಡಬೋದು. ಸಾಲಿ–ಕಾಲೇಜು ಕಲಸಬೋದು. ಆದರ ಸುಸೂತ್ರ ಮದಿವಿ ಮಾಡಿ ಅತ್ತಿಮನಿಗೆ ಕಳಸ್ತಾರು ಅಂತ ಹೇಳಾಕ ಬಾರದು!'

ಮಾಣಯ್ಯನ ಮಾತು ವಿದ್ಯಾವತಿಯ ಮನಸ್ಸಿನೊಳಗೆ ಯಾವಾಗಲೂ ಕಟೆಯುತ್ತಿತ್ತು. ಒಂದು ರಾತ್ರಿ. ಕಾಮತರ ಮನೆಯವರೆಲ್ಲಾ ಉಡುಪಿಗೆ ಹೋಗಿದ್ದರು. ಅವರೊಂದಿಗೆ ಮಗು ಮಂಜುನಾಥನೂ ಹೋಗಿದ್ದ. ರಾತ್ರಿ ವಿದ್ಯಾ ಒಬ್ಬಳೇ ಅಭ್ಯಾಸಮಾಡುತ್ತ ಕುಳಿತಿದ್ದಳು ತನ್ನ ಕೋಣೆಯಲ್ಲಿ. ಕಾಮತರೂ ಅಲ್ಲಿಯೇ ಪ್ರವೇಶ ಮಾಡಿದರು.

'ಏನು ವಿದ್ಯಾ ಅಭ್ಯಾಸ ನಡಸಿದ್ದೀಯಾ ?'

ಹೂಂಗುಟ್ಟಿದಳು ವಿದ್ಯಾ.

‘ ನಿನಗೀಗ ಎಷ್ಟು ವರುಷ ವಿದ್ಯಾ ? ’
‘ ಹದಿನೈದು ವರುಷ ಚಿಕ್ಕಪ್ಪ!’
‘ ಹ–ಹ–ಹ ! ಹದಿನೈದು ವರುಷದವರ ಹಾಗೆ ಕಾಣುವದೇ ಇಲ್ಲ ನೋಡು ನೀನು. ಗಲ್ಲದ ಮೇಲಿನ ಹಾಲು ಹಾಗೇ ಇದೆಯೇನೊ ಎನ್ನೋ ಹಾಗೆ ನಿನ್ನ ಗಲ್ಲದ ಮೇಲೊಂದು ಬಿಳಿಯ ಗುರುತಿದೆ........’

• • • •

ವಿದ್ಯಾ ಕಾಮತರ ಕಪಾಳಕ್ಕೊಂದು ಏಟುಕೊಟ್ಟಳು. ಹೇಗೆ ಮನೆಯಿಂದ ಹೊರಬಿದ್ದು ಹೇಗೆ ಮಂಗಳೂರಿಗೆ ಹೋದಳೊ ಅವಳಿಗೇ ಗೊತ್ತಿರಲಿಲ್ಲ.

‘ ಮಂಜುನಾಥನನ್ನು ಬಿಟ್ಟು ಹಾಗೇ ಬಂದು ಬಿಟ್ಟೆಯಾ ? ’ ನಾಗ ವೇಣಮ್ಮ ಕಣ್ಣೀರು ಹಾಕಿ ಕೇಳಿದರು. ಕಾಮತನ ಕುಹಕ ಕೃತಿಯ ಬಗ್ಗೆ ಕೇಳಿ ಎದೆಯೊಡೆದುಕೊಂಡರು.

ಒಂದು ದಿನ ಕಾರ್ಕಳದಿಂದ ಪತ್ರ ಬಂತು ! ನಾಗವೇಣಮ್ಮನವರ ಹೃದಯ ಕಾಜಿನ ಬುರುಡೆಯಂತೆ ಪುಡಿಪುಡಿಯಾಗಿ ಒಡೆದುಹೋಗುವ ಘೋರ ಸುದ್ದಿ ! ಮಂಜುನಾಥ ಕಾಯಿಲೆ ಬಿದ್ದು ತೀರಿ ಹೋದ—ಎಂದು ! ನಾಗ ವೇಣಮ್ಮ ಮುಂಚೆ ಬಹಳ ದಿವಸ ಬದುಕಲೇ ಇಲ್ಲ. ಅದೇ ಹೊಟ್ಟೆಬೇನೆ ಯಲ್ಲೇ ಹಾಸಿಗೆ ಹಿಡಿದು ಕೊನೆಗೆ ಮಂಜುನಾಥನ ಬಳಿಗೇ ಹೋದರು.

ವಿದ್ಯಾ ಮಂಗಳೂರಿನಲ್ಲೇ ತಮ್ಮ ಕಕ್ಕನ ಮನೆಯಲ್ಲಿ ಅಭ್ಯಾಸ ನಡಸಿ ದಳು. ಇದ್ದಕ್ಕಿದ್ದ ಹಾಗೆ ಒಂದು ದಿನ ಮಾಣಯ್ಯ ಬಂದ. ಮಂಜುನಾಥನು ಸತ್ತುಹೋದ ಸುದ್ದಿಯನ್ನು ಕತೆ ಮಾಡಿ ಹೇಳಿದ. ‘ಅಪ್ಪಾವ್ರ ಗಳಿಕಿಗೆ ಮಂಜಪ್ಪನವರು ಯಜಮಾನ್ರ ಒಬ್ಬರೇ ಒಬ್ಬ ಗಂಡು ಮಕ್ಕಳೂಂತ ಅಡ್ಡ ಬರಬಾರ್ದು ಅಂತಾ............ಯವ್ವಾ ನಮ್ಮ ಮಂಜಪ್ಪನೋರ್ನ ಕಾಯಿಲೆ ಬೀಳ್ಸಿದ್ರು. ಡಾಕ್ಟರ ಅಗಸಿದ್ದೇವು ಕೊಟ್ರೂ ಮಗೂ ಬದುಕಬಾರದು ಅಂದ್ರೆ ?............ಯವ್ವಾ ನಿಮಗಾರಾ ಕುಬೇರನ ಹಾಗೆ ದುಡ್ದು ಕೊಟ್ಟು ಕಲಿಸಾಕ ಬಂದ್ರು. ಅದೆಲ್ಲಾ ಒಳಸಂಚೂ ಭಗವಂತನೇ ಬಲ್ಲಾ........’

ಮಾಣಯ್ಯನ ಮಾತು ಕೇಳಿ ವಿದ್ಯಾವತಿಗೆ ಶೂಲದಿಂದಿರಿದ ಹಾಗಾ ಯಿತು. ಮಗುವಿನಂತೆ ದೊಡ್ಡ ದನಿ ತೆಗೆದು ಅತ್ತುಬಿಟ್ಟಳು. ‘ಅಯ್ಯೋ ಮಂಜುನಾಥಾ ! ಸಾವುಕಾರರು ಹಾದಿಯ ಮುಳ್ಳೆಂದು ನಿನ್ನನ್ನು ಮುರುಟಿಸಿ ಬಿಟ್ಟರೇನಪ್ಪ ? ’ ಎಂದು ಹಾಡಿ ಹಾಡಿ ಅತ್ತಳು............

ವಿದ್ಯಾವತಿಗೆ ಮಂಜುನಾಥನದೇ ನೆನಪು! ಮಂಜುನಾಥ ಯಾವಾಗಲೂ 'ಅಮ್ಮನೆಲ್ಲಿ ಅಮ್ಮನೆಲ್ಲಿ?' ಎಂದು ಕೇಳುತ್ತಿದ್ದಾಗ, ಅಮ್ಮ 'ಮಂಜುನಾಥ ಹೇಗಿದ್ದಾನೆ, ಮಂಜುನಾಥ ಹೇಗಿದ್ದಾನೆ?' ಎಂದು ಕಾಗದ ಹಾಕಿಸುತ್ತಿದ್ದಾಗ ಅವಳ ಮನಸ್ಸಿನ ಮೇಲಾದ ಆಘಾತ 'Search' ನಲ್ಲಿಯ ತಾಯಿ ಮಕ್ಕಳ ವೇದನೆಯನ್ನು ನೋಡಿ, ಕೇಳಿ ಮತ್ತೆ ಹೊರಹೊಮ್ಮಿದಂತೆನಿಸಿತು. 'ಮಂಜುನಾಥಾ!' ಎಂದು ಒಮ್ಮೆ ಚಿಟ್ಟನೆ ಕೂಗಿಬಿಡಬೇಕು ಎನಿಸಿತು ವಿದ್ಯಾವತಿಗೆ..................

ಮರೆಯದಂತಹ ಸಿನೇಮಾ ಮುಗಿಸಿಕೊಂಡು ಮನೆಗೆ ನಡೆದಳು ವಿದ್ಯಾ ಮನೂನೊಂದಿಗೆ.

ಅಂತೂ ಅದೇ ದಿನ, ಮರುದಿನ, ಮೂರನೆ ದಿನವೆಂದು ವಾರದ ಕೊನೆಯ ದಿನ ಮಧ್ಯಾನ್ಹ ಊಟ ಮುಗಿಸಿಕೊಂಡು ಮಾಮಿಯವರನ್ನು ಬೀಳ್ಕೊಂಡು ಬಸ್ಸಿನಿಂದ ಸ್ಟೇಶನ್‌ಗೆ ನಡೆದಳು ವಿದ್ಯಾ. ಮನೂನು ಅನುಸರಿಸಿದ.

'ನೀನೂ ಬರುತ್ತೀಯೋನು ಮನೂ?'

'Coupe'ದಲ್ಲಿ ಹೋಗೋಣೇನು?'

'ನಿನ್ನ ನಿರುಪಯೋಗಿ ಚೇಷ್ಟೆಗಳಿನ್ನೂ ಮುಗಿಯಲೊಲ್ಲವೆ?'

ಗಾಡಿ ಬಿಟ್ಟಿತು. ಇಬ್ಬರೂ ಕೈಕುಲುಕಿಸಿದರು.

'ಬಾಯ್ ಬಾಯ್' ಎಂದು ಬೀಳ್ಕೊಟ್ಟ ಮನೂ.

• • • •

ವಿದ್ಯಾವತಿಗೆ ಪುನಃ ಪುನಃ ತಾನು ರಾಮನಾಥನೊಡನೆ ರಾಜಿ ಆದರೆ ತನ್ನ ಸೋಲಲ್ಲವೆ? ಎಂಬ ವಿಚಾರ ತಲೆ ದಿಮ್ಮೆನಿಸುತ್ತಿತ್ತು. ಜೊತೆಗೆ ಪುಣೆಯಲ್ಲಿ ನೋಡಿದ ಆ ಎರಡೂ ಚಿತ್ರಗಳ ವಿಪರೀತ ಪರಿಣಾಮ ಇನ್ನಷ್ಟು ದಿಮ್ಮೆನಿಸಿತ್ತು.

ಗಾಡಿ ಖಂಡಾಳಾ ಸ್ಟೇಶನ್‌ಗೆ ಬಂತು. ವಿದ್ಯಾ ಕುಳಿತಲ್ಲೇ ಒಂದು ಕಪ್ಪು ಚಹಾ ಕುಡಿದಳು. ಅಷ್ಟರೊಳಗೆ ಕೈಯೊಳಗೊಂದು ಬಾಳೆಯ ಹಣ್ಣಿನ ಬುಟ್ಟಿಯನ್ನು ಹನುಮಂತನು ಗುಡ್ಡ ಎತ್ತಿದಂತೆ ಎಡಗೈಯಲ್ಲಿ ಎತ್ತಗಿಸಿ ಹಿಡಿದುಕೊಂಡು ಕಿಟಿಕಿಯೊಳಗಿಂದ ಉಡ್ಯಾಣ ಮಾಡುತ್ತ ಆರು ವರುಷದ ಹುಡುಗ 'ಕೇಲಾ ಆನೆಮೆ ದೋ' ಎಂದು ಒದರುತ್ತ ಬುಟ್ಟಿ ಕಿಟಕಿಯ

ಕೆಳಗೆ ಬಾಗಿಲಬಳಿ ಇಳಿಸಿಟ್ಟು ಒಂದು ಹಣ್ಣಿನ ಹಣಿಗೆಯನ್ನು ಕೈಯೊಳಗೆ ತೆಗೆದುಕೊಂಡು ಪ್ರತಿಯೊಬ್ಬರನ್ನೂ ಕೇಳತೊಡಗಿದ.

' ಕೇಲಾ ಆನೆಮೆ ದೋ.........ಪಾಯಿಜೆ ಬಾಯಿ ?'

' ನಕೋ.'

' ಹೇ ಬಗಾ ಕಿತಿ ತಾಜಾ ಆಹೆ.'

' ಅರೆ, ತೇ ಕಾಯ ಅಜೂನಿ ಕಚ್ಚಾ ಆಹೆ.'

' ನೈ ಬಾಯಿ ಕಿತಿ ಪಕ್ಕಾ ಆಹೆ ಬಗಾ.'

' ತೂಚ ಆಹೇಸ ಪಕ್ಕಾ,' ಎಂದು ನಗುತ್ತ ಒಂದಾಣೆ ಕೊಟ್ಟು ಒಳ್ಳೇ ಹಸಿರು ಕಂಡರೂ ಒಳಗೇ ಪಕ್ವವಾಗಿದ್ದ ಹಣ್ಣುಗಳನ್ನು ಕೊಂಡುಕೊಂಡಳು. ಇದೇ ರೀತಿ ಪ್ರತಿಯೊಬ್ಬರ ಬಳಿಗೂ ಹೋಗಿ ಒಂದೇ ಡಬ್ಬಿಯಲ್ಲಿ ಒಂದು ರೂಪಾಯಿ ಸಮೀಪ ವ್ಯಾಪಾರಮಾಡಿ ಮತ್ತೆ ಕಿಟಿಕಿಯ ಬಳಿ ನಿಂತ, ಮುಂದಿನ ಡಬ್ಬಿಗೆ ಹೋಗಲು ಹವಣಿಸುತ್ತ.

ಗಾಡಿ ಕರ್ಜತ್ ಸಮೀಪಿಸಿತ್ತು. ಗಾಡಿಯ ವೇಗ ಹೆಚ್ಚಾಗಿತ್ತು. ಖಟ್-ಖಟ್ ಎಂಬ ರೈಲು ಸಪ್ಪಳ ಕಿವಿಯ ಮೇಲೆ ಸುತ್ತಿಗೆಯಿಂದ ಹೊಡೆದ ಹಾಗೆ ಗಡಚಿಕ್ಕುತ್ತಿತ್ತು. ಅದೇ ವೇಗಕ್ಕೆ ಅದೇ ತಾಳಕ್ಕೆ ವಿದ್ಯಾವತಿಯ ವಿಚಾರಚಕ್ರ ತಿರುಗುತ್ತಿತ್ತು........

ತಾನು ಪಶ್ಚಾತ್ತಾಪ ಭಾವದಿಂದ ರಾಮನಾಥನ ಬಳಿಗೆ ಹೋಗುವುದೆ? ರಾಮನಾಥನೊಡನೆ ರಾಜಿ ಆದರೆ ತನ್ನ ಸೋಲಲ್ಲವೆ ?.......... ವಾಡೇಕರ ವಕೀಲರು ಮತ್ತೊಂದು ಎಂತಹ ಬೀಜಮಾತನ್ನು ಹೇಳಿದರಲ್ಲ !

'........ಈಗ ನೀವು ಯಾವ ಉದ್ದೇಶದಿಂದ ಡೈವ್ಹೋರ್ಸ ಮಾಡ ಬೇಕೆನ್ನುತ್ತಿದ್ದೀರೊ ಆ ಉದ್ದೇಶ ಇನ್ನೊಂದು ಮದುವೆಯಿಂದ ಸಫಲವಾಗು ತ್ತದೆಂಬ ಗ್ಯಾರಂಟಿಯೇನು ?....'

....ಹೌದು, ಅದು ನಿಜವೆ ! 'ಮೂರು ತಿಂಗಳ ಈ ಹೊಸ ಪ್ರಯೋಗ ಮಾಡಿ ನೋಡಿರಿ'........ಎಂತಹ ಸುಂದರವಾಗಿ ಹೊಸ ಶ್ಯಾಜಿನ ಉದಾ ಹರಣೆ ಕೊಟ್ಟು ಹೇಳಿದರಲ್ಲ !........ಮೇಲಾಗಿ ದೊಡ್ಡ ಅಡ್ಡಿಯೆಂದರೆ ಕೋರ್ಟಿನಲ್ಲಿ ಸಿದ್ಧಮಾಡಿ ತೋರಿಸಬೇಕು !........ಏನೆಂದು ಸಿದ್ಧಮಾಡಿ ತೋರಿಸುವುದು? ಅವನು ಛಬಿಯೊಡನೆ ದುಷ್ಟ ಸಂಬಂಧ ಇಟ್ಟುಕೊಂಡಿರುವ

ನೆಂದೆ ?........ಹಾಗೆ ತನ್ನ ಮೇಲೂ ಮನೋಹರನ ವಿಷಯವಾಗಿ ರಾಮನಾಥ ಆರೋಪ ಮಾಡಬಹುದಲ್ಲ ?........ ತನ್ನನ್ನು ಕ್ರೂರ ರೀತಿಯಿಂದ ನಡಸಿಕೊಂಡಿದ್ದಾನೆ ಎಂದು ಹೇಗೆ ಸಿದ್ಧಮಾಡಿ ತೋರಿಸುವುದು ? ಮೊನ್ನೆ ಛಪ್ ಎಂದು ಪೆಟ್ಟು ಕೊಡಲಿಲ್ಲವೆ ?........ ಆದರೆ ಮೋಹನನನ್ನು ದರ-ದರನೆ ಹಿಡಿದೆಳೆದೆನೆಂದು ತನ್ನ ವಿರುದ್ಧ ರಾಮನಾಥನೂ ಆರೋಪ ಮಾಡಬಹುದಲ್ಲ ?........'ಸ್ನೇಕಪಿಟ್ಟ' ದ ಹುಚ್ಚ ನಾಯಿಕೆ ಮತ್ತು ' ಸರ್ಚ ' ಚಿತ್ರದ ತಾಯಿ ಮಕ್ಕಳ ಪಾತ್ರ ಮತ್ತೆ ಕಣ್ಣಮುಂದೆ ಸುಳಿದು ಅಂತಃಕರಣವನ್ನು ಕಲಕಿಬಿಟ್ಟವು.......... ಮಾತೃಹೃದಯವೇ ವಿರಾಟಾಕಾರವಾಗಿ ಕಣ್ಮುಂದೆ ಸುಳಿಯಿತು.... ಆ ದಿನ ಮೋಹನನನ್ನು ಹಾಸುಗೆಯಿಂದ ತಳ್ಳಿದುದು ಅನ್ಯಾಯವಲ್ಲವೆ ? ರಾಮನಾಥನ ಮೇಲೆ ಸಿಟ್ಟು ಬಂದಿದ್ದರೆ ಮೋಹನನ ಮೇಲೇಕೆ ಸೇಡು ತಕ್ಕೊಳ್ಳಬೇಕಾಗಿತ್ತು ? ಸವತಿಯ ಮೇಲೆ ಮಾತ್ಸರ್ಯ ಹುಟ್ಟಿದ್ದರೆ ಮಗುವಿನ ಮೇಲೇಕೆ ಸೇಡು ತೀರಿಸಿಕೊಳ್ಳಬೇಕಾಗಿತ್ತು ?........

' ಆನೆಮೆ ದೋ........ತಾಜಾ ಕೇಲಾ ಆನೆಮೆ ದೋ. '

' ಅತ್ತಾ ಚಲ್ರೇ ಬಾಬಾ ಸಗ್ಳೇ ಫೇಟ್ಲೇ ಆಹೆ ತುಝೀ ಕೇಳೀ.' ಯಾರೋ ಒಬ್ಬ ಪ್ಯಾಸೆಂಜರ ಸಿಡುಕಿನಿಂದ ನುಡಿದರು.

' ಹುಂ. ಕೇಲಾ ಕ್ಯಾ ಅಕೇಲಾ....' ಮತ್ತೊಬ್ಬ ಚೇಷ್ಟೆ ಮಾಡಿದ. ಹುಡುಗನ ಸಾಹಸ ನೋಡಿ ವಿದ್ಯಾವತಿಗೆ ಅದೇಕೊ ಕನಿಕರ ಹುಟ್ಟಿತು.

' ಅರೇ, ಅಣಿಖೀನ ದೋನ ಕೇಳೀ ದೆ. ' ಮತ್ತೆರಡು ಹಣ್ಣು ತೆಗೆದುಕೊಂಡಳು........ಮೋಹನನು ಬಾಳೇಹಣ್ಣು ತಿನ್ನಬಹುದಲ್ಲ ?

' ಅರೆ ಏಕ ಆಧಾ ಡಜನ್‌ದೇವೂನ ಟಾಕ' ಬಾಳೆಯ ಬಾಲಕನಿಗೆ ಆದ ಹುರುಪೆಷ್ಟು ! ಒಳ್ಳೇ ತಾಜಾ ಹಣ್ಣು ಆರಿಸಿ ಏಳು ಹಣ್ಣಿನ ಒಂದು ಹಣಿಗೆಯನ್ನೆ ಕೊಟ್ಟು ' ಘ್ಯಾ ಬಾಯಿ ಏಕ ಜಾಸ್ತ ದೇವೂ. '

ವಿದ್ಯಾ ಮುಗುಳುನಗೆಯಿಂದ ರೊಕ್ಕ ಕೊಟ್ಟಳು.

ಗಾಡಿ ವೇಗದಿಂದ ಹೊರಟಿತ್ತು. ಹಣ್ಣಿನ ಹುಡುಗ ಮುಂದಿನ ಡಬ್ಬಿಗೆ ಹೋಗುವ ಸಾಹಸ ನಡಸಿದ. ಮೊದಲು ಬುಟ್ಟಿಯನ್ನು ಕಿಟಕಿಯ ಹೊರಗೆ ಹಿಡಿದು ಎಡಗೈಮೇಲೆ ಅದನ್ನು ತೆಗೆದುಕೊಂಡ; ಬಲಗೈ ಆಧಾರದಿಂದ ಬಲಗಾಲು ಅಖಂಡವಾಗಿ ಹೊರಗೆ ಹಾಕಿದ,

‘ ಅರೆ ಅಸ ಕಾಯ ಕತೋರ್ಸ್ ಸ್ಟೇಶನ್ ಏವೂಬೇಕೆ,’ ವಿದ್ಯಾ ಕಾತರಳಾಗಿ ಕೂಗಿದಳು. ಗಾಡಿಯೂ ಕೂಗಿತು. ಕೂಗಿನ ಧ್ವನಿ ಗಾಡಿಯ ವೇಗದ ಕಲ್ಪನೆ ತಂದು ಕೊಡುವಂತಿತ್ತು. ಎದುರಿನಿಂದ ಜೋರಾಗಿ ಗಾಳಿಯ ಸಿಳ್ಳು ಬೇರೆ. ಗಾಲಿಗಳ ಕರ್ಕಶ ಧ್ವನಿ, ಗಾಳಿಯ ಚೀತ್ಕಾರ. ಗಾಡಿಯ ವೇಗದ ಓಟ ಎಲ್ಲಾ ಕಿವಿಯೊಳಗೆ ಗಡುಚಿಕ್ಕೆ ಕೋಲಾಹಲವನ್ನೆ ಎಬ್ಬಿಸಿದ್ದವು. ಹುಡುಗ ಬಲಗಾಲನ್ನು ಹೇಗೊ ಫುಟ್ ಬೋರ್ಡಿಗೆ ನಿಲುಕಿಸಿ ಎಡಗಾಲು ಎತ್ತಿಕೊಳ್ಳಲು ಹವಣಿಸುವಷ್ಟರಲ್ಲೇ ಕೈಯೊಳಗಿನ ಬುಟ್ಟಿ ಧಬಕ್ಕನೆ ಬಿದ್ದು ಹೋಯಿತು ! ‘ ಅರೆ ಅರೇ ಹೇ ಕಾಯ ಝಾಲ ! ’ ಎಂದು ಕೂಡಿದ ಜನ ಕಿಟಕಿಯ ಸಮೀಪ ಹೋಗುವಷ್ಟರಲ್ಲೇ, ವಿದ್ಯೆಗೆ ಏನು ಹೊಳೆಯಿತೊ ಏನೊ, ಹೇಗೆ ಹುಡುಗನನ್ನು ನೋಡಿದಳೊ ಏನೊ ಚಿಟ್ಟನೆ ಚೀರುತ್ತ ಆಸನದಿಂದೆದ್ದು ಚೇನ್ ಜಗ್ಗಿದಳು. ಜನರೆಲ್ಲಾ ಗಾಬರಿಗೊಂಡು ದಿಕ್ಕೆಟ್ಟು ಕಿಟಕಿಗಳಿಂದ ನೋಡಹತ್ತಿದರು. ಗಾಡಿ ಎಷ್ಟೊತ್ತಾದರೂ ತನ್ನ ಓಟವನ್ನು ಕಡಿಮೆ ಮಾಡಲೆ ಇಲ್ಲ. ಗಾಡಿ ನಿಂತಾಗ ಕೆಳಗೆ ಸಿಕ್ಕ ಹುಡುಗ ಖಲಾಸ್ ಆಗಿ ಹೋಗಿದ್ದ. ಜನರೆಲ್ಲಾ ಕೆಳಗಿಳಿದು ಓಡೋಡಿ ಬಂದರು. ವಿದ್ಯಾ ಹುಚ್ಚೆದ್ದು ಕೆಳಗೆ ಜಿಗಿದಳು. ಅಪಘಾತದ ಬಳಿ ಹೋಗಿ ಆ ಕರಾಳ ರುದ್ರ ಸ್ವರೂಪ ನೋಡಿ, ‘ ಅರ್‍ರ್ರೆ ’ ಎಂದು ಚಿಟ್ಟನೆ ಚೀರಿದಳು ! ರಕ್ತ ಮಡುವುಗಟ್ಟಿ ಹರಿಯುತ್ತಿತ್ತು ! ಬಲಗಾಲು ತೊಡೆಯವರೆಗೂ ಕಡಿದು ಹೋಗಿ ಜರಾಸಂಧನ ತೊಡೆಯಂತೆ ನೂರ್ಮಾರು ದೂರ ಸಿಡಿದು ಬಿದ್ದಿತ್ತು ! ಬಾಯಿ ಸೊಟ್ಟಾಗಿ ಮೂಗು, ಕಣ್ಣು ಜಿಬ್ಬೆಯಾಗಿ ಹೋಗಿದ್ದುವು ಮೂಗಿನ ಹೊರಳೆಗಳಿಂದ ರಕ್ತ ಧಾರೆಗಟ್ಟಿ ಕರಣೆಕರಣೆಯಾಗಿ ಹರಿದಿತ್ತು ಯಾರೋ ರೇಲ್ವೆ ಆಳುಗಳು ಬಂದು ಹೆಣ ಹೊರಗೆ ಹಾಕಿದರು. ಬುಟ್ಟಿ ತುಂಬಿದ ಬಾಳೇ ಹಣ್ಣು ಸೂರೆಯಾಗಿ ಹೋಗಿದ್ದುವು. ಆರಕ್ಕೆ ಏಳು ಹಣ್ಣು ಕೊಟ್ಟ ಹುಡುಗ ಬುಟ್ಟಿ ತುಂಬ ಹಣ್ಣನ್ನೆ ಭೂಮಿತಾಯಿಗೆ ಎಸೆದು ಹೋಗಿದ್ದ ! ಬಾಳೇ ಹಣ್ಣಿನ ಬುಟ್ಟಿ ಮುರಿದು ಮುಟ್ಟಿಗೆಯಾಗಿ ಹೋಗಿತ್ತು.... ಅಯ್ಯೋ ದೇವರೆ ! ಈಗಿದ್ದ ಹುಡುಗ ಈಗಿಲ್ಲ ! ಆ ಎಳೆಯ ಬಾಳೆಯ ಹಣ್ಣಿನಂತೇ ಹಸನಾಗಿ ಕುಲುಕುಲು ನಗುತ್ತಲಿದ್ದ ಹುಡುಗ ಆ ಹಣ್ಣಿನ ಗೊಂಚಲ ಧೊಡನೇ ಮಣ್ಣುಪಾಲಾಗಿ ಹೋಗಿದ್ದ ! ತಾಯಿ ಯಾರೊ, ತಂದೆ

ಯಾರೋ ! ಎಳೆಯ ಹುಡುಗನನ್ನು ಹೇಗೆ ಕಳುಹಿದರೋ ! ವಿದ್ಯಾ ಮಗು ವಿನ ಅನಾಥ ದೆಸೆಯನ್ನು ನೋಡಿ ಮಮ್ಮಲ ಮರುಗಿದಳು ! ಅವಳ ಜೀವ ಎಷ್ಟು ಒದ್ದಾಡಿತೆಂಬುದು ಅವಳಗೇ ಗೊತ್ತು. ಆ ರುದ್ರದೃಶ್ಯ ನೋಡಿ ಮೂರ್ಛೆ ಹೋಗದಷ್ಟು ತಾಳ್ಮೆ ತಂದುಕೊಳ್ಳುವಲ್ಲಿ ಅವಳಿಗೆ ಕಷ್ಟಸಾಧ್ಯ ವಾಗಿ ಹೋಯಿತು ! ಬೇಕೆಂದು ಮುಖವನ್ನು ಆಚೆಗೆ ತಿರುಹಿದಳು. ಆದರೂ ಮನಸ್ಸು ಈಚೆಗೇ ಹೊರಳುತ್ತಿತ್ತು. ಮನಸ್ಸಿನೊಂದಿಗೆ ಮತ್ತೆ ಈಚೆಗೆ ಮುಖ ಹೊರಳಿಸಿದಾಗ ಯಾರೋ ಹೆಣದ ಮೇಲೆ ಅರಿವೆ ಹೊಚ್ಚಿಬಿಟ್ಟಿದ್ದರು ! ವಿದ್ಯಾವತಿಯೂ ಆ ಅಸಾಧ್ಯ ದೃಶ್ಯದ ಮೇಲೆ ಮರೆವಿನ ಅರಿವೆಯನ್ನು ಹೊಚ್ಚಲೆಳಸಿದಳು. ಎಳಸಿದಷ್ಟು ಜೋರಿನಿಂದ ಚಿತ್ರ ಕಣ್ಮುಂದೇ ನಿಂತಿತು. ಅಂತೂ ಗಾಡಿ ಬಿಡುವುದಕ್ಕೆ ಸಾಕಷ್ಟು ನಿಧಾನವೆಂದು ತೋರಿತು. ಗಾಡಿಯ ಜನರೆಲ್ಲಾ ಕೆಳಗೇ ಇಳಿದಿದ್ದರು ವಿದ್ಯಾ ನೋಡ ನೋಡುತ್ತಲೆ ಪ್ಯಾಸಿಂಜರರ ಪೈಕಿ ಯಾವುದೋ ಒಂದು ಹುಡುಗ, ಮೋಹನನಷ್ಟೆ ವಯಸ್ಸಿರಬೇಕು, ಅಲ್ಲಿ ಬಿದ್ದ ಒಂದು ಬಾಳೇ ಹಣ್ಣನ್ನು ಜನರ ದೃಷ್ಟಿ ತಪ್ಪಿಸಿ ಜಪ್ಪಿಸಿ ಗಬಕ್ಕನೆ ಎತ್ತಿಕೊಂಡಿತು. ವಿದ್ಯಾ ಅದನ್ನು ನೋಡಿಬಿಡಬೇಕೆ ? ಆ ಮಗುವಿನ ಹಣ್ಣಿ ನಾಸೆಯನ್ನು ನೋಡಿ ಅವಳ ಹೃದಯದ ಒಂದು ಮೂಲೆಯಲ್ಲಿ ಬರೆ ಕೊಟ್ಟಂತಾಯಿತು. ಗಪ್ಪನೆ ಕಣ್ಣು ಮುಚ್ಚಿಕೊಂಡಳು ವಿದ್ಯಾ. ಹಾಗೇ ಈಚೆಗೆ ಹೊರಳಿ ಉತ್ಸಾಹವಿಲ್ಲದೆ ಹೆಣದಂತೆ ಬಂದು ಸೀಟಿನ ಮೇಲೆ ಧೊಪ್ಪನೆ ಕೂತುಕೊಂಡಳು.

* * * *

ಇಂದು ಎಂಟನೆಯ ದಿನ. ಮೋಹನನಿಗೆ ಬಂದ ಜ್ವರ ಆರಿರಲಿಲ್ಲ. ಮಧ್ಯಾನ ೧೦೩ ಡಿಗ್ರಿಗಳ ವರೆಗೂ ಹೋಗುತ್ತಿತ್ತು. ರಾತ್ರಿ ೧೦೧ಕ್ಕೆ ಇರು ತ್ತಿತ್ತು. ಇದು ' ಟಾಯ ಫಾಯ್ಡ ' ಎಂದು ಡಾಕ್ಟರರು ಹೇಳಿದ ಮೇಲಂತೂ ರಾಮನಾಥನ ಫಜೀತಿ ಹೇಳಲಾಸಲ್ಲ. ಮತ್ತೆ ಮತ್ತೆ ಅದೇ ಒಂದು ಮಾತು ನೆನೆದು ಪಶ್ಚಾತ್ತಾಪದಿಂದ ನಿಟ್ಟುಸಿರು ಬಿಡುತ್ತಿದ್ದನು—ದೇವರೆ ಯಾಕಾದರೂ ನನಗೆ ಮೋಹನನನ್ನು ಕರತರುವ ದುರ್ಬುದ್ಧಿ ಕೊಟ್ಟೆ ! '

ಎಂಟೂ ದಿನ ನಿದ್ದೆ ಕಟ್ಟಿ ಹೊತ್ತು ಹೊತ್ತಿಗೆ ಹೊಟ್ಟೆ ತುಂಬ ಕೂಳು ನೀರು ಇಲ್ಲದೆ ರಾಮನಾಥನ ಮುಖದ ಮೇಲೆ ಹೆಣದ ಕಳೆ ಬಂದಿತ್ತು.

ಛಬೆ, ಮೋಹನ ರಾಮನಾಥ ಇಬ್ಬರಿಗಾಗಿಯೂ ಕೊರಗಿ ಸೊರಗಿ ನಿಃಶ್ಯ ಳಾಗಿ ಹೋಗಿದ್ದಳು. ಕಚೇರಿಯಲ್ಲಿ ರಾಮನಾಥನ ರಜೆ ಬೆಳೆಯುತ್ತಲೆ ಪ್ರತಿ ದಿನವೂ ಛಬೆ ರಾಮನಾಥನ ಪಾಳಿಯ ಮೇಲೆ ನಿದ್ದೆಗೆಟ್ಟು ಮೋಹನನ ಆರೈಕೆ ಮಾಡುತ್ತಿದ್ದರು. ' ಹಾಸಿಗೆಯಿಂದ ಮಗ್ಗುಲಾಗಲಿಕ್ಕೆ ಸಹ ಬಿಡ ಬೇಡಿರಿ. ' ಎಂದು ಡಾಕ್ಟರರ ಕಟ್ಟಪ್ಪಣೆ ! ಮೋಹನನೂ ನಿಮಿಷಕ್ಕೊಮ್ಮೆ ಎದ್ದು ಕೂಡಲು ಹೋಗಬೇಕು. ' ನಾ ಊಟಾ ಮಾತೀನಿ ಬಿಸ್ಕೀಟ ತಿಂತೇನಿ ' ಎಂದು ಕಾಡಿ ಬೇಡಿ ಜೀವ ತಿನ್ನಬೇಕು. ಅವನನ್ನು ರಮಿಸಿ ರಮಿಸಿ ರಾಮನಾಥ ಸೋತು ಕೈಚೆಲ್ಲಿದಾಗ ಛಬೆ ಅವನನ್ನು ತೊಡೆಯ ಮೇಲೆ ತೆಗೆದುಕೊಂಡು ತಲೆಯ ಮೇಲೆ ಕೈಯಾಡಿಸಿ ರಮಿಸಿ ಸಮಾಧಾನ ಮಾಡಿ ಮೆಲ್ಲಗೆ ಮಲ್ಲಿಗೆಹೂವಿನಂತೆ ಅವನನ್ನು ಅಂಗೈ ಮೇಲೆ ತಗೆದು ಕೊಂಡು ಮಲಗಿಸಬೇಕು. ಒಂದೊಂದು ರಾತ್ರಿ ಕಾಕಾಸಾಹೇಬ, ವೈನಿ ಅವರ ಪಾಳಿಯೂ ಬರುತ್ತಿತ್ತು. ಒಂದು ರಾತ್ರಿ ಅವರು ನಿದ್ದೆಗೆಟ್ಟು ಮೋಹ ನನನ್ನು ಉಪಚರಿಸುವುದನ್ನು ನೋಡಿ ರಾಮನಾಥ ಗದ್ಗದಿಸುತ್ತ— ' ಹೋದ ಜನ್ಮದಲ್ಲಿ ಮೋಹನನ ಋಣ ತಿಂದಿದ್ದೀರೇನೊ. ಈ ಜನ್ಮದಲ್ಲಿ ತನ್ನಸಾಲದ ವಸೂಲಿ ಮಾಡಿಕೊಂಡು ಹೋಗಲಿಕ್ಕೇ ಕೂತಿದ್ದಾನೆ ಮೋಹನ' ಎಂದು ಹೇಳುವಾಗ ತಮ್ಮಷ್ಟಕ್ಕೆ ತಾವೇ ಕಣ್ಣೀರು ಸುರಿಯಹತ್ತಿದುವು. ಕಾಕಾ, ವೈನಿ ಇಬ್ಬರೂ ತಂದೆತಾಯಿಗಳಂತೆ ರಾಮನಾಥನನ್ನು ಪ್ರೇಮಲ ಮಾತುಕತೆಗಳಿಂದ ಸಮಾಧಾನಮಾಡಿದರು. ಮತ್ತೊಂದು ದಿನ ಬಾಳ ಹೊರಗೆ ' ಆಯಿಸ್‌ಫ್ರೂಟ್‌ವಾಲಾ ' ಬಂದಾಗ ಹಟಮಾಡಿ ಒಂದು ಆಯಿಸ್‌ಫ್ರೂಟ ಕೊಡಿಸಿಕೊಂಡ ವೈನಿಯ ಕಡೆಯಿಂದ. ಅದನ್ನು ಹುರುಪಿನಿಂದ ಜರ್‍ರೆಂದು ಹೀರುತ್ತ ಮೋಹನನೆಡೆಗೆ ಸೀಪುತ್ತ ನಿಂತಿರುವಾಗ ಮೋಹನ, ' ಅದು ಬೇಕು, ಅದು ಬೇಕು ' ಎಂದು ಹಟ ತೆಗೆದ. ರಾಮನಾಥ ' ಹೂಂ ತಿನಬಾರದಪ್ಪಾ ' ಎಂದು ಬೆದರಿಸಿದ. ಮೋಹನ ಮತ್ತೂ ಹಟ ತೆಗೆದ. ಛಬೆ ಬಾಳನನ್ನು ಗದ್ದರಿಸಿ ಹೊರಗಟ್ಟಿದಳು. ಬಾಳ ಗುಣು ಗುಣು ದನಿ ತೆಗೆಯುತ್ತ ಹೊರಬಿದ್ದ. ಮೋಹನನ ಹಟ ನಿಲ್ಲಲಿಲ್ಲ. ಛಬೆ ಮೋಹನನ್ನು ಗಿಳಿಯಂತೆ ರಮಿಸಿದಳು. ಮೋಹನ ' ಅದು ಬೇಕು, ಅದು ಬೇಕು, ಅದು ಬೇಕು' ಎಂದು ಧ್ವನಿಯೇರಿಸುತ್ತ ಬಿಲ್ಲಿನಂತೆ ಮಣಿಯುತೊಡಗಿದ. ರಾಮನಾಥನ

ಸ್ಫೈರಣೆ ಕೈಮೀರಿತು. ' ಹೂಂ! ಸುಮ್ಮನಾಗ್ತೀ ಇಲ್ಲೊ ' ಎಂದು ತಲೆಗೆ ಕೈತಟ್ಟಿ ಬೇಸತ್ತು ಹೊರಗೆ ಬಂದನು. ಮೋಹನನ ದುಃಖ ಆವರಿಸಿ ದೊಡ್ಡ ದನಿಯಿಂದ ಉಸುರುಗಟ್ಟಿ ಅಳಹತ್ತಿದನು. ಎಷ್ಟೊತ್ತಾದರೂ ಕಟ್ಟಿದ ಉಸಿರು ಬಿಡದಾಯಿತು. ಛಬಿ ಮುಖ ಕೆಂಪಗೆ ಮಾಡಿದಳು. ಗಾಬರಿಗೊಂಡು ಹೌಹಾರಿ—' ಮೋಹನ್, ಮೋಹನ್ ' ಎಂದು ಮೆಲ್ಲನೆ ಬೆನ್ನ ಮೇಲೆ ಕೈಯಾಡಿಸತೊಡಗಿದಳು. ಎಷ್ಟು ಹತ್ತಿಕ್ಕಿದರೂ ಆವಳಿಗೆ ದುಃಖ ತಡೆಯಲಿಲ್ಲ. ಮೋಹನ ಕಣ್ಣು ಮೇಲಕ್ಕೆ ಮಾಡಿ ಉಬ್ಬಸಬಡ ಹತ್ತಿದ. ' ಮೋಹನ್, ಮೋಹನ್ ಕಸಸಚ ಕರತೋಯ್ ' ಎಂದು ಕೂಗಿ ದಳು. ರಾಮನಾಥನ ಎದೆ ಒಡೆದು ನೀರಾಯಿತು. ಧಿಗ್ಗನೆ ಓಡಿ ಬಂದ. ಛಬಿ ಭ್ರಾಂತಳಾಗಿ ಎವೆಯಿಕ್ಕದೆ ಮೋಹನನನ್ನು ಮುಖದಲ್ಲಿ ಮುಖವಿಟ್ಟು ನೋಡುತ್ತಿದ್ದಳು. ರಾಮನಾಥನಿಗೆ ಮತ್ತೆ ಪಶ್ಚಾತ್ತಾಪ. ' ಅಯ್ಯೋ ಕೂಸನ್ನು ಸುಮ್ಮನೆ ಬೆದರಿಸಿದೆನಲ್ಲ! '—ಮರುಗಿ ಕಂಬನಿಗರೆಯುತ್ತ ಕೂಡಲು ಸಾಧ್ಯವಿರಲಿಲ್ಲ. ವೈನಿ, ಕಾಕಾ ಗಾಬರಿಯಾಗಿ ಬಂದರು. ಮಗು ವಿನ ತಲೆಗೆ ಸ್ವಲ್ಪ ನೀರು ತಟ್ಟಿದರು: ವೈನಿ ಕಿವಿಯೊಳಗೆ ಜೋರಿನಿಂದ ಊದಿ ದರು. ಕಾಕಾ ಬೆನ್ನ ಮೇಲೆ ಕೈಯಾಡಿಸಿದರು. ರಾಮನಾಥ ' ನಮ್ಮ ಶ್ರೀಪಿನ್ನ ಕರಕೊಂಡು ಬರುತೇನೆ. ಎಲ್ಲಾ ತಿಳಿಸಿ ಹೇಳಲಿಕ್ಕೆ ಬರುತ್ತದೆ.' ಎಂದು ಕೋಟು ಹಾಕಿಕೊಂಡ. ಮೋಹನ ಉಸಿರು ಬಿಟ್ಟು ದನಿತೆಗೆಯ ಬೇಕಾದರೆ ಜೀವ ಹೋಗಿ ಜೀವ ಬಂದಂತಾಯಿತು, ಮೋಹನನಿಗಲ್ಲ ಛಬಿಗೆ. ಛಬಿಯೂ ಉಸಿರು ಬಿಟ್ಟಳು. ಆದರೂ ಶ್ರೀಪಿಯನ್ನು ಕರೆದುಕೊಂಡು ಬಂದ.

' ನಿನಗ ತಿಳೀಲಿಲ್ಲೇನಪಾ ಹುಡುಗನ್ನ ಹೀಂಗ ಗೋಳಿಗೆ ಹಾಕಲಿಕ್ಕೆ ? ರಾಮನಾಥ ಶ್ರೀಪಿಯ ಅಂತಃಕರಣದ ಬೈಗುಳಕ್ಕೆ ಒಳಗೊಳಗೆ ಹಿಗ್ಗಿನ ವಿದ್ಯುತ್ ಸಂಚಾರವಾದಂತಾಯಿತು. ತನಗೊಬ್ಬ ಅಂತಃಕರಣದ ಜೀವಿ ಸಿಕ್ಕನಲ್ಲ ಎಂದು. ಹಿಗ್ಗಿನಿಂದ ನಗಬೇಕೆಂದರೆ ಕಣ್ಣೊಳಗೆ ಹಸಿಯೆ ತಟ್ಟನೆ ಮೂಡಿ ನಿಂತಿತು. ಶ್ರೀಪಿ ಅತ್ಯಂತ ಕಳಕಳಿಯಿಂದ ಮೋಹನನನ್ನು ಎಲ್ಲಾ ತಪಾಸು ಮಾಡಿದ.

' ಇದಕ್ಕೆ ಮುಖ್ಯವಾಗಿ ಬೇಕಾದದ್ದು ಆರೈಕೆ. ನೀನು ಸುಮ್ಮನೆ ದವಾಖಾನೆಗೇ ಸಾಗಿಸಬೇಕಿತ್ತು.'

'ಶ್ರೀಪಿ ಆದದ್ದೆಲ್ಲಾ ದಡ್ಡತನವೇ ಆಗಿದೆ. ಹೇಗಾದರೂ ಮಾಡಿ ನನ್ನ ಕೂಸನ್ನು ಬದುಕಿಸಿಕೊಡು ಶ್ರೀಪಿ !' ಎಂದು ದೈನ್ಯದಿಂದ ಹೇಳಿದಾಗ ಶ್ರೀಪಿ ಗೆಳೆಯನ ಹೆಗಲ ಮೇಲೆ ಕೈಹಾಕಿ 'ಹುಚ್ಚಾ, ತಗಿ ತಗೀ ಏನಂತ ಹಾಂಗ ಕಣ್ಣಾಗ ನೀರು ತಂದರ. ಸುಮ್ಮನಾಗು, ಹುಡುಗನೂ ಗಾಬರಿ ಆದೀತು.' ಮಿತ್ರನ ಈ ಸಹೃದಯದ ಮಾತು ರಾಮನಾಥನನ್ನು ನಿಜ ವಾಗಿಯೂ ಸಮಾಧಾನಗೊಳಿಸಿತು.

ಶ್ರೀಪಿ ಎಲ್ಲಾ ತಪಾಸು ಮುಗಿಸಿ, ಈ ಮೊದಲಿನ ಡಾಕ್ಟರರಾರು, ಯಾವ ಔಷಧ ಕೊಟ್ಟಿದ್ದಾರೆ ಎಲ್ಲಾ ನೋಡಿಕೊಂಡ. ಹೊಟ್ಟೆ ತಪಾಸು ಮಾಡಿ ತಾನೇ ಸ್ವತಃ ಸಿರಿಂಜ ಕೊಟ್ಟು ಹೊಟ್ಟೆ ಸ್ವಚ್ಛ ಮಾಡಿಸಿದ. ಛಬೆ ಇಬ್ಬರೂ ಗೆಳೆಯರ ಸ್ನಿಗ್ಧ ಸ್ನೇಹ ನೋಡಿ ತನ್ನೊಳಗೆ ತಾನೇ ಅಭಿಮಾನ ಉಕ್ಕಿ ಹಿಗ್ಗುತ್ತಿದ್ದಳು. ಶ್ರೀಪಿ ಎಲ್ಲಾ ಉಪಚಾರ ಮುಗಿಸಿಕೊಂಡು—'ಇದೇ ಔಷಧ ನಡೆಯಲಿ. ಅವಶ್ಯ ಬಿದ್ದಾಗ ಮತ್ತೆ ಫೋನ್ ಮಾಡು' ಎಂದು ಹೇಳಿ ಹೊರಡುವಾಗ ಛಬೆ ರಾಮನಾಥನ ಕಿವಿಯೊಳಗೆ—'ಚಹಾಲಾ ಟಾಕಲ ಆಹೆ' ಎಂದಳು.

ಶ್ರೀಪಿಗೆ ಮನಸ್ಸಿರಲಿಲ್ಲ. 'ಸುಮ್ಮನೆ ಯಾಕೆ ತೊಂದರೆ ?' ಎಂದ. ರಾಮನಾಥ ಛಬೆಯ ಪರಿಚಯ ಮಾಡಿ ಕೊಡುತ್ತ—'ನನಗಾಗಿ ಅಲ್ಲ ಇವರಿಗಾಗಿ. ಇವರು ನನ್ನ God-sent sister ( ದೈವದತ್ತ ಭಗಿನಿ )' ಎಂದು ಅತ್ಯಂತ ಕಳಕಳಿಯಿಂದ ಹೇಳಿದ. ಶ್ರೀಪಿ ಆನಂದಾಭಿಮಾನಪೂರ್ವಕವಾಗಿ ಮುಗುಳ್ನಗೆ ನಕ್ಕು 'ನಮಸ್ತೆ' ಎಂದು ಕೈ ಜೋಡಿಸಿದ. ಛಬೆ ಟ್ರೇದೊಳಗೆ ಚಹ, ಕ್ರೀಮ್ ಬಿಸ್ಕೀಟು ತಂದಿಟ್ಟಳು.

'ನೀವು ತಕ್ಕೊಳ್ರಿ?' ಶ್ರೀಪಿ ಛಬೆಗೆ ಹೇಳಿದ.

'No, thanks.' ಎಂದಳು ಛಬೆ.

'ಸ್ವಲ್ಪ ತಗೋ ಛಬೆ'— ರಾಮನಾಥನೆಂದ. ಛಬೆ ಅರ್ಧ ಕಪ್ಪು ಹಾಕಿಕೊಂಡು ಸುಮ್ಮನೆ ಹಿಡಿದುಕೊಂಡು ಕೂತಳು.

ಶ್ರೀಪಿ ಹೋದ ಮೇಲೆ ಛಬೆ ಅತ್ಯಾದರದಿಂದ, ಆನಂದದಿಂದ 'ಆಪಲ್ಯಾ ಸಾರಖೇಚ ಆಹೇತ ಆಪಲೆ ಮಿತ್ರ' ಎಂದಳು.

• • • •

ಇಂದು ಎಂಟನೆಯ ದಿನ. ಮೂರು ಸಂಜೆಯ ಹೊತ್ತಿಗೆ ಜ್ವರ ಒಂದು ಡಿಗ್ರಿ ಇಳಿದಿತ್ತು. ಛಬೆ ಮೋಹನನಿಗೆ ಅವನು ಒಲ್ಲೆಂದರೂ ಒತ್ತಾಯ ದಿಂದ ಅರ್ಧ ಬಟ್ಟಲು ಮೋಸಂಬಿಯ ರಸ ಹಾಕಿದಳು.

ರಾಮನಾಥ ಬಾಥ್‌ರೂಂಗೆ ಹೋಗಿದ್ದ. ಕ್ಷಣಹೊತ್ತು ಮೋಹನ ನಿಂದ ಅಗಲಿದ್ದಾಗ ಯಾರು, ಎಲ್ಲಿ, ಯಾವ ಹೊತ್ತಿಗೆ,'ಮೋಹನ ಹ್ಯಾಂಗೋ ಮಾಡುತ್ತಾನೆ' ಎಂದು ಒದರುತ್ತಾರೊ ಎಂಬುದೇ ಟೆಕ್ಕು ಆವನಿಗೆ. ಈ ಪುಕ್ಕತನದಿಂದ ನೆಲದ ಮೇಲೆ ಒಂದು ಸೂಜಿ ಬಿದ್ದ ಸಪ್ಪಳಾದರೂ ಮೆಟ್ಟಿಬಿದ್ದು ಗಾಬರಿಯಾಗಿ ಹುಚ್ಚನಂತೆ ಸುತ್ತಲೂ ನೋಡುತ್ತಿದ್ದ. 'ಮೋಹನ್ ಕಸಸಚ ಕರತೋಯ್' ಎಂದು ಕೂಗಿದ್ದಾಗ ರಾಮನಾಥನಿಗೆ ಜಾನಕಿಯದೇ ನೆನಪು..

....ಸಾಯುವ ಮುನ್ನಾ ದಿನ ಜಾನಕಿಯ ತಾಯಿ ಮೂರು ನಾಲ್ಕು ಸಲ— 'ಜಾನಮ್ಮ ಯಾಕೋ ಹ್ಯಾಂಗ್ಯಾಂಗೊ ಮಾಡತಾಳ' ಎಂದು ಒಮ್ಮಿಂ ದೊಮ್ಮೆಲೆ ಒದರುತ್ತಿದ್ದಾಗ ರಾಮನಾಥನ ಎದೆ ಝಲ್ಲೆಂದು ಹೋಗಿತ್ತು. ಜಾನಕಿಯಿಂದ ಅಗಲಿ ಹೊರಗೆ ಹೋಗುವಾಗ ಕೈಯೊಳಗೆ ಜೀವ ಹಿಡಿದು ಕೊಂಡು ಹೋಗುತ್ತಿದ್ದ. ಮನೆಯೊಳಗೆ ಕಾಲಿಡುವಾಗ 'ಎಲ್ಲಿ ಏನೊ' ಎಂಬ ಟೆಕ್ಕು ಅವನನ್ನು ಅತ್ಯಂತ ನಿರ್ಬಲನನ್ನಾಗಿ ಮಾಡಿ ಬಿಟ್ಟಿತ್ತು. ಈ ಸಂಕಟದಿಂದ ಹೌಹಾರಿ—'ಏನು ಆಗುವುದೊಮ್ಮೆ ಆಗಿ ಹೋಗಿಬಿಟ್ಟರೆ ಸುಸೂತ್ರವಾಗುತ್ತದೆ' ಎಂದುಕೊಳ್ಳುವ ಮಟ್ಟಿಗೆ ಆವನಿಗೆ ರೋಸಿಟ್ಟು ಹೋಗಿತ್ತು....

....ಒಮ್ಮಿಂದೊಮ್ಮೆಲೆ ಮೋಹನನಿಗೆ ಭೇದಿಯಾಯಿತು. ಒಳಗಿನಿಂದ ಬಂದ ರಾಮನಾಥನಿಗೆ ಗಾಬರಿಯಾಯಿತು. 'ಹೊಟ್ಟಿ ಸಾಫಾದುದಕ್ಕೊ ಏತಕ್ಕೆ ಗಾಬರಿಯಾಗಬೇಕು ?' ಎಂದು ಛಬೆ ಸಮಾಧಾನಮಾಡಿದಳು.

ಸ್ವಲ್ಪಹೊತ್ತಿನ ಮೇಲೆ ವಾಂತಿಯಾಯಿತು. ರಾಮನಾಥನಿಗೆ ಗಾಬರಿ ಹೆಚ್ಚಾಯಿತು. ಐದೈದು ನಿಮಿಷಕ್ಕೊಮ್ಮೆ ವಾಂತಿ ಸುರುವಾಯಿತು. ರಾಮ ನಾಥನ ಎದೆ ಹೊಡೆದುಕೊಳ್ಳಹತ್ತಿ ಕೈಕಾಲೇ ಹೋದುವು.

'ಹೇಗೆ ಮಾಡುವುದು ಛಬೆ ? ಶ್ರೀಪಾದನಿಗೆ ಫೋನ್ ಮಾಡಲೆ ?' ಎಂದ. ಛಬೆಯೂ ಎದೆ ಕಳೆದುಕೊಂಡು 'ಎಲ್ಲಿ ಏನು ಹೆಚ್ಚುಕಡಿಮೆ ಯಾಯಿತೊ ತನ್ನಿಂದ' ಎಂಬ ಹೆದರಿಕೆಯಿಂದ ಬೆನೆತುಹೋದಳು.

'ಹೊಟ್ಟೆಯೊಳಗೆ ಏನಾದರೂ ಕೊಟ್ಟಿದ್ದೆಯಾ ಛಬಿ?' ಚಬಕದಿಂದ ಹೊಡೆದಂತೆ ಛಬಿಯ ಎದೆ ಝಲ್ಲೆಂದಿತು. ಛಬಿಗೆ ಒಮ್ಮೆಲೆ ಉತ್ತರ ಕೊಡ ಲಿಕ್ಕೆ ಬರಲಿಲ್ಲ. ಗಾಬರಿಯಾಗಿ ಉಗುಳು ನುಂಗುತ್ತ—'ನುಸ್ತ....ನುಸ್ತ.... ಮೋಸಂಬೀಚೆ ರಸ್' ಎಂದಳು.

ಮೋಹನನ ವಾಂತಿ ನಿಮಿಷಕ್ಕೊಮ್ಮೆ ಸುರುವಾಯಿತು. ಹೈರಾಣಾಗಿ ತೀರ ನಿಕ್ಕಳಿಕೆಗಿಟ್ಟುಹೋಯಿತು. ಬರೀ ಹಸಿರು ನೀರೇ ಹೊರಟು ಹೋಗುತ್ತಿತ್ತು. ಅರ್ಧ ತಾಸಿನೊಳಗೆ ಹುಡುಗ ನಿಶ್ಯಕ್ತನಾಗಿ ಬಿದ್ದುಕೊಂಡ. 'ಊಟ ಬೇಕು, ಆಯಿಸ ಫ್ರೂಟ ಬೇಕು' ಎಂಬ ಹಟ ಎತ್ತೊ ಹಾರಿ ಹೋಯಿತು. ಬಾಯಿಂದ ಕ್ಷೀಣವಾದ ನರಳುವಿಕೆಯ ಹೊರತಾಗಿ ಇನ್ನೇನೂ ಶಬ್ದ ಬರುತ್ತಿದ್ದಿಲ್ಲ.

ಶ್ರೀಪಾದನೂ ಗಾಬರಿಯಾಗಿಯೆ ಬಂದ. ಅರ್ಧ ತಾಸಿನ ವರೆಗೆ ತಪಾಸು ಮಾಡಿದ. ವಾಂತಿಯನ್ನು ಪರೀಕ್ಷಿಸಿದ. ಮಲವನ್ನು ಪರೀಕ್ಷಿಸಿದ. ಮುಖ ಕ್ಷಣಕ್ಷಣಕ್ಕೆ ಗಂಭೀರವಾಗತೊಡಗಿತು. ಛಬಿ, ರಾಮನಾಥರು ಶ್ರೀಪಿಯ ಬಾಯಿಂದ ಏನು ಬರುವುದೊ, ಅವನೇನು ಒಡನುಡಿಯುವನೊ ಎಂದು ಮೈತುಂಬ ಕಣ್ಣಾಗಿ, ಕಿವಿಯಾಗಿ ಆತುರಗೊಂಡು ಕಾತರಗೊಂಡು ನಿರೀಕ್ಷಿಸತೊಡಗಿದ್ದರು. ಶ್ರೀಪಿ ತಪಾಸು ಮುಗಿಸಿ ರಾಮನಾಥನ ಬೆನ್ನ ಮೇಲೆ ಕೈಹಾಕಿ ಗ್ಯಾಲರಿಗೆ ಕರೆದುಕೊಂಡು ಹೋದನು. ಹಾಗೆ ಕರೆದು ಕೊಂಡು ಹೋಗುವ ಅವನ ಗಂಭೀರ ಮುಖಮುದ್ರೆಯನ್ನು ನೋಡಿಯೆ ರಾಮನಾಥನ ಎದೆ ಥಣ್ಣಗಾಯಿತು.

'ರಾಮನಾಥ್........ಪರಫೋರೇಶನ್ ಆದಂತೆ ಕಾಣುತ್ತದೆ.'

'ಅಂ?' ರಾಮನಾಥನಿಗೆ ಏನೂ ತಿಳಿಯಲಿಲ್ಲ.

'ಒಳಗೆ ಹುಣ್ಣು ಒಡೆದರೆ ಹೀಗಾಗುತ್ತದೆ........ಹುಡಗನನ್ನು ಎಬ್ಬಿಸಿ ಕೂಡಿಸಿದ್ದಿರಾ?'

'ಶ್ರೀಪಿ ನನಗೊಂದೂ ತಿಳಿಯದಾಗಿದೆ.' ರಾಮನಾಥ ಥರಥರ ನಡುಗ ಹತ್ತಿದ.

'ಹೋಗಲಿ ರಾಮನಾಥ್....ಪರಿಸ್ಥಿತಿ ಸ್ವಲ್ಪ 'ಕ್ರಿಟಿಕಲ್' ಆಗಿದೆ.... ಒಮ್ಮಿಂದೊಮ್ಮೆಲೆ ಹೀಗಾದೀತೆಂದು ನನಗೂ ಅನಿಸಿರಲಿಲ್ಲ.'

'ಶ್ರೀಪಿ, ಈಗೇನು ಮಾಡುವುದು ?'

'ಆಪರೇಶನ್ ಮಾಡಿದರೂ ಯಶಸ್ವಿಯಾದೀತೆಂದು ತೋರುವುದಿಲ್ಲ. ಪರಫೋರೇಟ ಆಯಿತೆಂದರೆ ಫೇಟಲ್ ಆದಂತೇ...........'

'ಶ್ರೀಪೀ!' ಎಂದು ದೊಡ್ಡ ದನಿ ತೆಗೆದು ರಾಮನಾಥ ಶ್ರೀಪಿಯ ಹೆಗಲ ಮೇಲೆ ಮುಖ ಚೆಲ್ಲಿ ಅವನಿಗೆ ತೆಕ್ಕೆಬಿದ್ದನು.

'ಮೋಹನ್' ಎಂದು ಒಳಗಿನಿಂದ ಛಬೆ ಚಿಟ್ಟನೆ ಚೀರಿದಳು.

'ರಾಮು ಗಾಬರಿಯಾಗಬೇಡ. ಆದದ್ದಾಯಿತು....ಡಾಕ್ಟರನ ಕರ್ತವ್ಯ ಮುಗಿಯಿತು. ಮಿತ್ರನ ಕರ್ತವ್ಯಕ್ಕೆ ಸಿದ್ಧನಾಗುತ್ತೇನೆ.'

* * * *

ಬಸ್ ಶಿವಾಜಿ ಪಾರ್ಕಿನ ಕೂಟಿಗೆ ನಿಂತಾಗ ರಾತ್ರಿ ಒಂಬತ್ತು ಹೊಡೆದು ಹೋಗಿತ್ತು. ವಿದ್ಯಾ ಒಂದು ಕೈಯೊಳಗೆ ಬ್ಯಾಗ್ ಹಿಡಿದುಕೊಂಡು ಇನ್ನೊಂದು ಕೈಯಲ್ಲಿ ಬಾಳೆಹಣ್ಣು ಹಿಡಿದುಕೊಂಡು ಬಸ್ ಇಳಿದಳು. ರೈಲ್ ಅಪಘಾತದ ಚಿತ್ರವನ್ನು ಕಣ್ಮುಂದೆ ತಂದುಕೊಂಡು ಹಣ್ಣಿನ ಹುಡುಗನದೇ ನೆನಪುಮಾಡಿ ಕೊಳ್ಳುತ್ತ ಜಡವಾದ ಹೃದಯದಿಂದ ಮೆಲ್ಲನೆ ಮುಂದಡಿಯಿಡುವಾಗ ಎದು ರಿಗೇ ಇನ್ನೊಂದು ಎದೆಯೊಡೆಯುವ ದೃಶ್ಯ ಕಣ್ಣಿಗೆ ಬಿತ್ತು. ವಿದ್ಯಾ ಅದನ್ನು ನೋಡಲಾರದೆ ದಿಕ್ಕೆಟ್ಟು ಅತ್ತಿತ್ತ ಹರಿದಾಡಹತ್ತಿದಳು. ಆ ಗುಂಪಿನಲ್ಲಿ ತನ್ನ ಗುರುತಿನವರೆಲ್ಲಿ ಕಣ್ಣಿಗೆ ಬೀಳುತ್ತಾರೊ ಎಂದು ಅಂಜಿಕೊಂಡಳು..ನಾಲ್ಕೈದು ಜನರು ಬಕ್ಕನೆತ್ತಿಯಿಂದ ಗುಂಪಾಗಿ ನಡೆದಿದ್ದರು. ಅವರ ಮುಂದೆ ಒಂದು ಪೆಟ್ರೊಮ್ಯಾಕ್ಸ ದೀಪ ಹೊತ್ತುಕೊಂಡು ಹತ್ತುವರುಷದ ಹುಡುಗನೊಬ್ಬ ನಡೆದಿದ್ದ. ನಡುವೆಯಿದ್ದ ಇಬ್ಬರು ತಮ್ಮ ಕೈಗಳನ್ನು ಮುಂದೆ ಚಾಚಿ, ಅಡ್ಡ ಮಲಗಿದ್ದ ಮಗುವಿಗೆ ಆಸರ ಕೊಟ್ಟಿದ್ದರು. ಮಗುವಿನ ಮೈತುಂಬ ಅರಿವೆ ಹೊಚ್ಚಿದ್ದರು. 'ಲೇಡಿ ಜಮ್‌ಶೇಡಜಿ ರೋಡ'ನ್ನು ತಮ್ಮ ಬಲಕ್ಕೆ ಮಾಡಿ ಕೊಂಡು ಗುಂಪು ಶಿವಾಜಿ ಪಾರ್ಕಿನತ್ತ ಹೊರಳಿತು. ವಿದ್ಯಾವತಿ ಕಂಗೆಟ್ಟು ನೋಡಿದಳು. ಆ ಗುಂಪಿನಲ್ಲಿ ಎಲ್ಲರೂ ತಮ್ಮ ಮನೆಯ ಬಾಜೂದವರೇ! ರಾಮನಾಥನಿರುವನೇನೊ ಎಂದು ಮತ್ತೆ ಕಂಗೆಟ್ಟು ನೋಡಿದಳು. ಎಷ್ಟೋ ಹೊತ್ತಿನ ಮೇಲೆ ರಾಮನಾಥ ತನ್ನ ಓರಿಗೆಯ ಮಿತ್ರನ ಹೆಗಲ ಮೇಲೆ

ಕೈಹಾಕಿಕೊಂಡು ಉಟ್ಟ ಧೋತರದ ಚುಂಗನ್ನೆ ಕೊರಳಿಗೆ ಸುತ್ತಿ, ಬರಿ ಶರ್ಟಿನ ಮೇಲೆ ಮೌನದಿಂದ ನಡೆದಿದ್ದ. ವಿದ್ಯಾ ಕಂಗೆಟ್ಟು ನೋಡಿದಳು. ಅಲ್ಲಿ ನಿಲ್ಲ ಲಿಕ್ಕೆ, ಮುಂದೆ ಹೋಗಲಿಕ್ಕೆ ಆಗದೆ ದಿಕ್ಕೆಟ್ಟು ಓಡಬೇಕೆಂದು ಹವಣಿಸಿದಳು. ಅದೇ ಕ್ಷಣಕ್ಕೆ ದೇವರೆ ದಯಪಾಲಿಸಿದಂತೆ ಬಸ್ಸು ಬಂತು. ಬಸ್ಸಿನೊಳಗೆ ಮಿಂಚಿನ ವೇಗದಿಂದ ಧಾವಿಸಿದಳು. ಕೈಯೊಳಗಿನ ಹಣ್ಣಿನ ಗೊಂಚಲು ಧಡಿಕೆಗೆ ಕಳಚಿ ಗಾಲಿಯ ಕೆಳಗೆ ಬಿದ್ದು ಜಿಬ್ಬೆಯಾಯಿತು........

'ಮೂರು ತಿಂಗಳು ಪ್ರಯೋಗಮಾಡಿರಿ....ನಿಮ್ಮ ಪ್ರೇಮಪಥದೊಳಗಿನ ಕಾಲ್ತೊಡಕು ಮುಳ್ಳುಕಂಟಿಗಳೆಲ್ಲಾ ಬಯಲಾಗುತ್ತವೆ....' ಈ ಮಾತು ಗಳನ್ನಾಡಿದುದು ವಾಡೇಕರ ವಕೀಲರ ಭವಿಷ್ಯದ ಬಾಯಿ ಅಲ್ಲ, ಕರಿಬಾಯಿ ಎನಿಸಿತು ವಿದ್ಯಾವತಿಗೆ.

. . . .

ಹೊರಗೆ ಬಾಗಿಲ ಬೆಲ್ ಸಪ್ಪಳವಾಯಿತು. ರಾಮನಾಥ ತನ್ನ ಮನೆಯ ಬಾಗಿಲು ತೆರೆದ. ಪೋಸ್ಟಮನ್ ಟಪಾಲು ಕೊಟ್ಟು ಹೋದ. ರಾಮನಾಥ ಮತ್ತೆ ಬಾಗಿಲು ಜೋಲ್ಟಮಾಡಿದ. ಓಲೆ ಒಡೆದ:

ಧಾರವಾಡ.

ಚಿ. ರಾ. ರಾಮನಾಥರಿಗೆ,

ಮಾಡುವ ಅನೇಕಾಶೀರ್ವಾದಗಳು. ತರುವಾಯ ಕ್ಷೇಮ. ನಿಮ್ಮ ಕ್ಷೇಮ ಸಮಾಚಾರವನ್ನು ಮೇಲಿಂದ ಮೇಲೆ ತಿಳಿಸುತ್ತಿರಬೇಕು. ವಿಶೇಷ. ನಮ್ಮ ಚಿ. ಶಾರದಾ ಚಿ. ಮೋಹನನ ಸಲುವಾಗಿ ಹೊಟ್ಟೆಬೇನೆ ಹಚ್ಚಿಕೊಂಡಂತೆ ಮಾಡುತ್ತಿದ್ದಾಳೆ. ಸುದೈವದಿಂದ ಮೊನ್ನೆ ಆವಳಿಗೆ ಒಂದು ವರ ಗೊತ್ತಾಗಿದೆ. ಮದುವೆ ಮಾಡಿಕೊಂಡು ಹೋಗುವ ಮುಂಚೆ ಒಮ್ಮೆಯಾದರು ಮೋಹನ ನನ್ನು ನೋಡಬೇಕು ಅನ್ನುತ್ತಾಳೆ. ನೀವು ಕೂಡಲೆ ಹದಿನೈದು ಇಪ್ಪತ್ತು ದಿನಗಳ ವರೆಗೆ ರಜೆ ಪಡೆದುಕೊಂಡು ಮೋಹನನನ್ನು ಕರೆದುಕೊಂಡು ಬರ ಬೇಕು. ಏನೊ ಬರದಾನಂತಾ ತಾತ್ಸಾರ ಮಾಡಬಾರದು. ವಿಶೇಷ ಸಮಕ್ಷಮ ದಲ್ಲಿ. ಹೆಚ್ಚಿಗೆ ಬರೆಯಲು ಶಕ್ತನಲ್ಲಾ. ಜರೂರ ಜರೂರ ಮೋಹನನನ್ನು ಕರಕೊಂಡು ಹೊರಟು ಬರಬೇಕು.

ತಮ್ಮ
—ಗೋಪಾಳರಾಯ.

ಪತ್ರ ಮುಗಿಸಿ ' ಹೂಂ! ಮೋನ್ಯಾನ್ನ ನಾನs ಕರಕೊಂಡು ಬರ್ತೀನಿ. ತನ್ಮಪ್ಪನ ಕಡೀಗೆ ಹೋಗಿ ಕೂತಾನ ಕಳ್ಳಾ!ನಾನs ಕರಕೊಂಡು ಬರ್ತೀನಿ.' ಎನ್ನುತ್ತ ತನ್ನಷ್ಟಕ್ಕೆ ಹುಚ್ಚನಂತೆ ನಕ್ಕುಬಿಟ್ಟ ರಾಮನಾಥ. ರಾಯರ ಓಲೆ ಯನ್ನೂ ಜಾನಕಿಯ ಓಲೆಗಳ ಫಾಯಿಲಿಗೇ ಹಚ್ಚಿಟ್ಟ.

ಹೊರಗೆ ಮತ್ತೆ ಬೆಲ್ ಬಾರಿಸಿತು. 'ಯಾರು ಪೋಸ್ಟಮನ್ ಏನು?' ಸುಮ್ಮನೆ ಕೂಗಿಕೊಂಡ ರಾಮನಾಥ. ಹೊರಗಿನಿಂದ ಯಾರೂ ಓಕೊಡಲಿಲ್ಲ. ಫಾಯಿಲ್ ಟ್ರಂಕಿನೊಳಗಿಟ್ಟು ಕೀಲಿ ಹಾಕಿ ಧಡಲ್ಲನೆ ಬಾಗಿಲು ತೆರೆದ. ಹೊರಗೆ ಬಂದಿದ್ದವರು ವಿದ್ಯಾ! ಮುಖ ತೋರಿಸಲೂ ನೋಡಲೂ ಸಾಧ್ಯ ವಾಗದೆ ಮತ್ತೆ ಧಡಲ್ಲನೆ ಬಾಗಿಲು ಬೋಲ್ಟಮಾಡಿದ. ಬಾಗಿಲ ಸಪ್ಪಳಕ್ಕೆ ಛಬೆ ಕೈಯೊಳಗಿನ ಕುಂಕುಮಕರಡಿಗೆಯನ್ನು ಹಿಡಿದುಕೊಂಡೆ ಹೊರಗೆ ಬಂದಳು. ಹೊರಗೆ ನಿಂತಿದ್ದವರು ವಿದ್ಯಾ! ಕ್ಷಣಹೊತ್ತು ಮೌನ. ಆಮೇಲೆ ಒದ್ದೆಗಣ್ಣೊರಸಿಕೊಳ್ಳುತ್ತ 'ಆತ ಯಾ !' ಎಂದು ಒಳಗೆ ಕರೆದಳು ಛಬೆ.

---

# ಸದ್ಯಕ್ಕೆ ಮಾರಾಟಕ್ಕಾಗಿ ದೊರೆಯುವ ಗ್ರಂಥಗಳು

## ಕಾದಂಬರಿಗಳು :

| | | | | | |
|---|---|---|---|---|---|
| ೧ | ಧರ್ಮಸೆರೆ | ಜಡಭರತ | ....೨ | ೦ | ೦ |
| ೨ | ಇಜ್ಜೋಡು ( ಭಾಗ ೧, ೨, ೩, ೪ ) | ವಿ. ಕೃ. ಗೋಕಾಕ | ...೭ | ೧೨ | ೦ |
| ೩ | ನಿಸರ್ಗ | ಮಿರ್ಜಿ ಅಣ್ಣಾರಾಯ | ....೩ | ೮ | ೦ |
| ೪ | ರಾಷ್ಟ್ರಪುರುಷ | ,, ,, | ....೮ | ೦ | ೦ |
| ೫ | ಅನಂತ | ಸತ್ಯಬೋಧ | ....೧ | ೪ | ೦ |
| ೬ | ಭಗ್ನಮಂದಿರ | ಹೇಮಂತ | ... ೪ | ೮ | ೦ |
| ೭ | ಅನ್ನ | ರಂ. ಶ್ರೀ. ಮುಗಳಿ | ....೪ | ೦ | ೦ |
| ೮ | ಕಾರಣಪುರುಷ | ,, ,, | ....೧ | ೮ | ೦ |
| ೯ | ಗಂಗಾಸಾನಿ | ವರಗಿರಿ | ....೧ | ೪ | ೦ |
| ೧೦ | ಮಾದನ ಮಗಳು | ಎಂ. ವೀ. ಸೀ. | ....೬ | ೦ | ೦ |
| ೧೧ | ಮುನಿಯನ ಮಾದರಿ | ಕೆ. ಎ. ಎನ್. ರಾವ್ | ...೨ | ೧೨ | ೦ |
| ೧೨ | ಮೇದಿನಾಪುರದ ಮಲ್ಲ | ಗುರುರಾಜ ಜೋಶಿ | ....೨ | ೧೨ | ೦ |
| ೧೩ | ಔರಂಗಜೇಬ | ಕೆರೂರ ವಾಸುದೇವಾಚಾರ್ಯ....೩ | | ೦ | ೦ |
| ೧೪ | ವಾಲ್ಮೀಕಿ ವಿಜಯ | ,, ,, | ....೧ | ೦ | ೦ |
| ೧೫ | ಇಂದ್ರಚಾಪ | ರಂಗರಾವ ತಲಚೇರಕರ | ....೨ | ೮ | ೦ |
| ೧೬ | ಎರಡನೆಯ ಸಂಬಂಧ | ಎನ್ಕೆ. ಕುಲಕರ್ಣಿ | ...೩ | ೦ | ೦ |
| ೧೭ | ಮರ್ಯಾದೆ-ಮಹಲು | ಅಶ್ವತ್ಥ | ....೩ | ೦ | ೦ |

## ನಾಟಕಗಳು :

| | | | | | |
|---|---|---|---|---|---|
| ೧೮ | ಮಿಂಚಿನ ಹುಡಿ | ಕೃಷ್ಣಕುಮಾರ | ...೨ | ೮ | ೦ |
| ೧೯ | ಎತ್ತಿದ ಕೈ | ರಂ. ಶ್ರೀ. ಮುಗಳಿ | ...೧ | ೧೪ | ೦ |
| ೨೦ | ಯುಗಾಂತರ | ವಿ. ಕೃ. ಗೋಕಾಕ | ....೧ | ೧೨ | ೦ |
| ೨೧ | ಬಿತ್ತಿದ ಬೆಳೆ | ಶಿವರಾಮ ಕಾರಂತ | ....೧ | ೦ | ೦ |
| ೨೨ | ಪರಿವರ್ತನ | ಲ. ಜಿ. ಬೇಂದ್ರೆ | ...೦ | ೧೨ | ೦ |
| ೨೩ | ವೇಣುಮಾವ | ಶ್ರೀಮತಿ ಪ. ಸೀತಾದೇವಿ | ...೦ | ೧೨ | ೦ |
| ೨೪ | ಮಗು | ಕೆ. ಎ. ಎಸ್. ರಾವ | ...೧ | ೮ | ೦ |
| ೨೫ | ಹೊಸ ಸಂಸಾರ | ದ. ರಾ. ಬೇಂದ್ರೆ | ....೨ | ೮ | ೦ |
| ೨೬ | ಭಾಗ್ಯಶ್ರೀ | ಲ. ಜಿ. ಬೇಂದ್ರೆ | ....೧ | ೦ | ೦ |
| ೨೭ | ವಿಮರ್ಶಕ ವೈದ್ಯ | ವಿ. ಕೃ. ಗೋಕಾಕ | ....೦ | ೬ | ೦ |
| ೨೮ | ನಲದಮಯಂತಿ | ಕೆರೂರ ವಾಸುದೇವಾಚಾರ್ಯ....೧ | | ೮ | ೦ |

## ಸಣ್ಣಕತೆ ಲಲಿತಪ್ರಬಂಧಗಳು :

| | | | | | | |
|---|---|---|---|---|---|---|
| ೨೯ | ಕುರಿಹಿಂಡು | ಜಲಧರ | | ...೨ | ೮ | ೦ |
| ೩೦ | ಹೂಬಾಣಗಳು | ಪ. ರಮಾನಂದ | | ....೩ | ೦ | ೦ |
| ೩ | ಸುಳವುಹೊಳವು | ವಿವಿಧ ಲೇಖಕರು | | ....೧ | ೮ | ೦ |
| ೩೨ | ಕೆನ್ಸಿಂಗಟನ್ ಪಾರ್ಕ | ಕೆ. ಗೋಪಾಲಕೃಷ್ಣರಾಯ | | ...೧ | ೮ | ೦ |
| ೩೩ | ಬಹುಮಾನ ಪಡೆದ ಬರಹಗಳು | ವಿವಿಧ ಲೇಖಕರು | | ....೧ | ೧೨ | ೦ |
| ೩೪ | ಚೀನದ ಬಾಳು—ಬದುಕು | ,, ,, | | ...೬ | ೦ | ೦ |
| ೩೫ | ಬಾಳ—ಹೊಳೆ | ಅಶ್ವತ್ಥ | | ....೨ | ೮ | ೦ |

## ಕಾವ್ಯಗಳು :

| | | | | | | |
|---|---|---|---|---|---|---|
| ೩೬ | ಗರಿ | ಅಂಬಿಕಾತನದತ್ತ | ಸಾದಾ | ೨ | ೦ | ೦ |
| | | | ಒಳ್ಳೇ ಕಾಗದ | ೩ | ೦ | ೦ |
| | | | ಕ್ಯಾ. | ೩ | ೮ | ೦ |
| ೩೭ | ಗಂಗಾವತರಣ | ,, ,, | ಸಾದಾ | ೨ | ೦ | ೦ |
| | | | ಒಳ್ಳೇ ಕಾಗದ | ೩ | ೦ | ೦ |
| | | | ಕ್ಯಾ. | ೩ | ೮ | ೦ |
| ೩೮ | ಸಖೀಗೀತ | ,, ,, | ಒಳ್ಳೇ ಕಾಗದ | ೨ | ೮ | ೦ |
| | | | ಕ್ಯಾ. | ೩ | ೦ | ೦ |
| ೩೯ | ಬಾಸಿಗ | ರಂ. ಶ್ರೀ. ಮುಗಳಿ | ಸಾದಾ | ೧ | ೪ | ೦ |
| | | | ಕ್ಯಾ. | ೨ | ೮ | ೦ |
| ೪೦ | ಸಮುದ್ರಗೀತಗಳು | ವಿ. ಕೃ. ಗೋಕಾಕ | ಸಾದಾ | ೧ | ೪ | ೦ |
| | | | ಕ್ಯಾ. | ೨ | ೮ | ೦ |
| ೪೧ | ಮಹಾಯುದ್ಧ | ಕೆ. ಎ. ಎನ್. ರಾವ | | ....[illegible] | ೦ | ೦ |

## ವಿಮರ್ಶಾತ್ಮಕ ಗ್ರಂಥಗಳು :

| | | | | | | |
|---|---|---|---|---|---|---|
| ೪೨ | ಸಾಹಿತ್ಯ ಸಂಶೋಧನ | ದ. ರಾ. ಬೇಂದ್ರೆ | ಸಾದಾ | ೨ | ೮ | ೦ |
| | | | ಕ್ಯಾ. | ೩ | ೧೨ | ೦ |
| ೪೩ | ಸಾಹಿತ್ಯ ಮತ್ತು ವಿಮರ್ಶೆ | ,, ,, | | ....೧ | ೮ | ೦ |
| ೪೪ | ದತ್ತವಾಣಿ | ಮಿರ್ಜಿ ಅಣ್ಣಾರಾಯರು | | ...೧ | ೪ | ೦ |
| ೪೫ | ಮಾತೃವಾಣಿ | ಶಿಶು ಮಧುರಚೆನ್ನ | | ...೧ | ೪ | ೦ |
| ೪೬ | ಯುಗಪ್ರವರ್ತಕ ಬಸವಣ್ಣ | ಚಿಂತಾಮಣಿ | | ....೧ | ೦ | ೦ |

ವ್ಯವಸ್ಥಾಪಕ

**ಮನೋಹರ ಗ್ರಂಥಮಾಲಾ**

**ಧಾರವಾಡ**